# ಭೋಜರಾಜ ಕಾಳಿದಾಸರು



Kumar Viswanath Tantri
IX B

—ಲೇಖಕರು—
ಕಾಶೀನಾಥ ರಾಮಚಂದ್ರ, ಕುರಡಿಕೇರಿ

N.V.H.S. GBA

§ § § § § § §§ §

ಪ್ರಕಾಶಕರು :

ಎ. ಎಂ. ಕರಡಿ ಬುಕ್ ಸೆಲರ್
ಸ್ಟೇಶನ್ ರೋಡ,
ಹುಬ್ಬಳ್ಳಿ,

[ ಬೆಲೆ: ೩-೦೦

|| ಓಂ ||

# ಭೋ ಜ ರಾ ಜ ಕಾ ಳಿ ದಾ ಸ ರು

....§§§§...

## ೧. ಭೋಜರಾಜನ ಪೂರ್ವಚರಿತ್ರೆ

ಒಂದು ಸಾವಿರ ವರುಷಗಳ ಹಿಂದಿನ ಕಥೆಯಿದು. ಆಗ ಆರ್ಯಾವರ್ತದ ವಿದರ್ಭ ದೇಶವು ಸುಸಂಪನ್ನ ರಾಜ್ಯವಾಗಿ ಮೆರೆಯುತ್ತಲಿದ್ದಿತು. ಶೂರ ಸಿಂಧುಲ ಎಂಬ ರಾಜನು ಆ ರಾಜ್ಯವನ್ನು ಸದ್ಧರ್ಮದಿಂದ ಪರಿಪಾಲಿಸುತ್ತಿದ್ದನು. ಧಾರಾ ನಗರವೇ ಅವನ ರಾಜ್ಯಧಾನಿಯು ಉಜ್ಜಯಿನಿ ಎಂದೂ ಇನ್ನೊಂದು ಹೆಸರು ಆ ಪಟ್ಟಣಕ್ಕಿದ್ದಿತು.

ಸಿಂಧುಲ ರಾಜನ ಸಹೋದರ ಮುಂಜನೆಂಬವನು. ಇವರಿಬ್ಬರ ವಯಸ್ಸಿನಲ್ಲಿ ಅಷ್ಟೊಂದು ಅಂತರವಿಲ್ಲ. ಅರಸು ಮಕ್ಕಳಿಗೆ ತಕ್ಕ ಶಿಕ್ಷಣವು ಅವರಿಬ್ಬರಿಗೂ ದೊರೆತಿತ್ತು. ಅವರಿಬ್ಬರಲ್ಲಿಯ ಭಾತೃಪ್ರೇಮವು ಆದರ್ಶವಾಗುವಂತಿದ್ದಿತು.

ತಂದೆಯ ತರುವಾಯ ಸಿಂಧುಲ ರಾಜನೇ ಪಟ್ಟವನ್ನೇರಿದ್ದನು. ರಾಜ್ಯಕಾರಭಾರದಲ್ಲಿ ಅವನು ತನ್ನ ತಮ್ಮನ ಯೋಗ್ಯ ವಿಚಾರ–ಆಲೋಚನೆಗಳನ್ನು ಪರಿಗ್ರಹಿಸದೆ ಇರುತ್ತಿರಲಿಲ್ಲ. ಅವನನ್ನು ಮುಂದಿರಿಸಿಕೊಂಡೇ ರಾಜ್ಯಶಕಟವನ್ನು ಸಾಗಿಸಿದ್ದನು.

ಸಿಂಧುಲ ರಾಜನಿಗೆ ಪಟ್ಟದರಸಿಯೊಬ್ಬಳೇ ಪತ್ನಿಯು. ಗುಣವತಿಯಾದ ಅವಳ ಉದರದಿಂದಲೇ ವಿದ್ಯಾಲಕ್ಷಣ ಸಂಪನ್ನನೂ ಸುಂದರನೂ ಆಗಿರುವ ಮಗನು ಜನಿಸಿದನು. ಅಪ್ಪ–ಚಿಕ್ಕಪ್ಪರಿಗೆ ಆನಂದ! ರಾಜ್ಯ–

ಪ್ರಜರಿಗೆಲ್ಲ ಅತೀವ ಆನಂದ ! ! ಮಗನಿಗೆ "ಭೋಜ" ಎಂಬ ಆಲ್ಹಾದವನ್ನುಂಟು ಮಾಡುವ ಹೆಸರಿನಿಂದ ನಾಮಕರಣವಾಯಿತು. ಹಾಗು ಅವನನ್ನೇ ಯುವರಾಜನೆಂದು ಸಾರಲಾಯಿತು.

ಯುವರಾಜ ಭೋಜಗೀಗ ಐದು ವರುಷ ವಯಸ್ಸು. ತಂದೆಯಕ್ಕಿಂತಲೂ ಅವನ ಚಿಕ್ಕಪ್ಪನ ವಾತ್ಸಲ್ಯವು ಅವನ ಮೇಲೆ ಅತುಲವಾಗಿದ್ದಿತು.

ಕಾಲಚಕ್ರಕ್ಕೊಳಗಾಗದವರಾರು ? ಪ್ರಾಕ್ತನ ಕರ್ಮಾಕರ್ಮಗಳಿಗನುಸರಿಸಿ ಆ ಕಾಲನು ಪ್ರತಿಯೊಂದು ಪ್ರಾಣಿಯ ಆಯುರ್ಮಾನವನ್ನು ಬೇರೆ ಬೇರೆಯಾಗಿಯೇ ವಿಧಿಸುವನು. ಸಿಂಧುಲನು ಧರ್ಮಿಷ್ಠನೂ ಅಹುದು, ಶೂರನೂ ಅಹುದು, ಪುಣ್ಯಕರ್ಮಿಯೂ ಅಹುದು. ಆದರೆ ಅವನ ಸಂಚಿತ ಶೇಷವು ಅವನನ್ನು ಇಹ ಜನ್ಮದಲ್ಲಿ ದುರ್ಧರ ರೋಗಕ್ಕೀಡು ಮಾಡಿತು. ದಿನದಿನಕ್ಕೆಬೆಳೆಯುವ ಆ ಬೇನೆಯಿಂದ ಅವನು ಬಿಡುಗಡೆಯಾಗುವ ಲಕ್ಷಣವು ತೋರಲಿಲ್ಲ. ತನ್ನ ಏಕಮೇವ ಪುತ್ರ ಭೋಜ ಬಾಲಕನ ಮೇಲಿನ ಅವನ ಮೋಹವು ಮಾತ್ರ ಮರಣಾಂತ್ಯದಲ್ಲಿಯ ಅವನ ಆಶೆಗಳನ್ನೆಲ್ಲ ಲುಪ್ತವಾದರೂ ಅಚ್ಚಳಿಯದೆ ಹೆಚ್ಚುತ್ತಲೇ ಇದ್ದಿತು. ಆ ಮೋಹವೇ ಅವನು ಕೊನೆಯುಸಿರನ್ನು ಕೆಲ ನಿಮಿಷ ಹಿಂದಕ್ಕೆ ದೂಡಿತು. ಅವನ ತನ್ನ ಪ್ರೀತಿಯ ತಮ್ಮನನ್ನು ತನ್ನೆದುರಿಗೆ ಬರಮಾಡಿಕೊಂಡನು. ಹಾಗು ತನ್ನ ಮೋಹದ ಕುಮಾರ ಭೋಜನನ್ನು ಅವನ ಕೈಗೆ ಒಪ್ಪಿಸಿ—

ನನ್ನ ಪ್ರಿಯ ಬಂಧು ಮುಂಜನೇ, ನನ್ನ ಕುಮಾರ ಈ ಭೋಜನನ್ನು ನಿನ್ನ ವಿಚಾರವನ್ನನುಲಕ್ಷಿಸಿ ಯುವರಾಜನನ್ನಾಗಿಸಿದೆಯಲ್ಲವೆ ! ಈ ನನ್ನ ತರುವಾಯ ರಾಜ್ಯಪಟ್ಟಕ್ಕೆ ಔರಸ ನೀತಿಯಿಂದ ಇವನೇ ಹಕ್ಕುದಾರನು. ಇದೂ ನಿಜ. ಆದರೆ ಈ ಬಾಲಕನು ಅಜ್ಞನು. ಇದುವರೆಗೆ ನನ್ನ ತೊಡೆಯನ್ನೇರಿ ಆಡುತ್ತಿದ್ದ ಈ ಹುಡುಗನು ಇನ್ನು ಮೇಲೆ ನನ್ನ ಹೊರತು ಇನ್ನಾರನ್ನು ಆಶ್ರಯಿಸಬೇಕು ? ನೀನೂ ಇವನ ಚಿಕ್ಕ ಅಪ್ಪನಲ್ಲವೇ ?

ಇದೆಲ್ಲವನ್ನು ಮನಸ್ಸಿನಲ್ಲಿ ತಂದುಕೊಂಡೇ ಇಂದಿನ ನನ್ನ ಕೊನೆಯ ದಿನದಲ್ಲಿ ಇವನನ್ನು ನಿನಗೆ ಒಪ್ಪಿಸಿರುವೆನು. ಇನ್ನು ನೀನು ಇವನನ್ನು ಯಥಾನ್ಯಾಯವಾಗಿ ಸಂರಕ್ಷಿಸು. ದೇವ ಕೃಪೆಯಿಂದ ಇವನು ತಕ್ಕ ಪ್ರಾಯದ ಗಡಿಗೆ ಪ್ರವೇಶ ಮಾಡಿದ ಕೂಡಲೇ ಇವನಿಗೆ ಸಲ್ಲಿಸುವ ರಾಜ್ಯವನ್ನು ಇವನಿಗೆ ಒಪ್ಪಿಸು ಎಂದು ನುಡಿಯುತ್ತಿರುವಾಗ ಆ ಸಹೋದರರೀರ್ವರ ಕಂಠಗಳು ಬಿಗಿದವು. ಅವರ ಕಣ್ಣುಗಳು ಅಶ್ರುಗಳಿಂದ ಭಾರವಾಗಿ ಪಟ_ಪಟನೆ ನೀರು ಸುರಿದವು. ಇಬ್ಬರ ಅಂತರ್ಯಗಳು ದುಃಖವೇದನೆಯಿಂದ ಛಿದ್ರಿತವಾಗಿ ಶೋಕಗಳು ಕೊಸರಿಕೊಂಡು ಹೊರಗುಕ್ಕಿ ದೀರ್ಘ ಧ್ವನಿಗೈಯಹತ್ತಿದವು. ಹಾ! ಹಾ! ಎನ್ನುವಷ್ಟರಲ್ಲಿಯೇ ಸಿಂಧುಲ ರಾಜನ ಪ್ರಾಣಪಕ್ಷಿಯು ತೃಷಾರ್ಥವಾದ ಹಕ್ಕಿಯು ಹಾಗೆ ಬಿಕ್ಕಿನ ಸ್ವರೂಪವನ್ನು ವ್ಯಕ್ತಗೊಳಿಸಿ ಅದೆತ್ತಲೋ ಹೋಗಿಬಿಟ್ಟಿತು. ಅಗಲಾ ರಾಜಮಂದಿರದಲ್ಲಾದ ದುರವಸ್ಥೆಯು ಮೀರಿ ಬಿಟ್ಟಿತು ಅಲ್ಲಿ ನಡೆದ ಶೋಕವು ಪರ್ಯವಸಾನಗೊಳ್ಳದೆ ಗುಣಿತ ಪ್ರಗುಣಿತ ಶ್ರೇಣಿಯಂತಾಗಿ ಪರಿಣಮಿಸಿತು ಇಷ್ಟೇ ಏಕೆ ? ಇಡೀ ಧಾರಾ ನಗರದ ನಿವಾಸಿಗಳೆಲ್ಲ ರಾಜವಿಯೋಗದಿಂದುಂಟಾದ ಆ ವಿಪ್ಲವ ಪ್ರಸಂಗದಲ್ಲಿ ರೋದನೆ ಮಾಡಿದರೆಂದು ಹೇಳುವದಕ್ಕಿಂತ ಧಾರಾ ನಗರವೇ ಕಣ್ಣೀರಿನ ಪ್ರವಾಹದಲ್ಲಿ ಕೊಚ್ಚಿ ಹೋಯಿತೇನೋ ? ಎಂದು ಹೇಳುವಂತಿದ್ದಿತು. ಚಿಕ್ಕವನಾದ ಭೋಜನು ಅಲಕ್ಷಿತ ಲಕ್ಷವನ್ನು ನಿರೀಕ್ಷಿಸಿ ಕಕ್ಕಾವಿಕ್ಕಿಯಾದನು. ತತ್ಕ್ಷಣವೇ ಆ ಕುಮಾರನಲ್ಲಿ ದಿಕ್ಕಿಲ್ಲದ ಮಕ್ಕಳಿಗುಂಟಾಗುವ ಲಕ್ಷಣಗಳೆಲ್ಲ ಒಡಮೂಡಿ ತೋರಹತ್ತಿದವು.

ಆಯಿತು ! ಸಿಂಧುಲ ರಾಜನ ಅಂತ್ಯವಾಯಿತು. ನಗರದಲ್ಲೆಲ್ಲ ದುಃಖಾತಿರೇಕಕ್ಕೆ ಮಿತಿಯಿಲ್ಲದ್ದಾಯಿತು. ರಾಜಮಹಿಷಿ ಚಿಕ್ಕ ಬಾಲಕ ಭೋಜನನ್ನು ಕಣ್ತಪ್ಪಿಸಿ ಅವನ ಚಿಕ್ಕಪ್ಪನ ಬಳಿಯಲ್ಲಿ ಬಿಟ್ಟ ಭರದಿಂದ ಪತಿ ಪ್ರೇತದೊಡನೆ ಸ್ಮಶಾನಕ್ಕೆ ಹೋದಳು. ಸತಿ ಹೋಗುವ ಸುದ್ದಿಯು ಮಾಡತಕ್ಕ ವಿಧಿ ಕ್ರಿಯಾಚರಣೆಗಳೆಲ್ಲವನ್ನು ಮುಗಿಸಿ ಉರಿಯುತ್ತಿರುವ ಪತಿಯ ಚಿತೆಯನ್ನಡರಿದಳು. ಅವನ ಪಾದ ಸನ್ನಿಹಿತಳಾಗಿ ಕುಳಿತುಕೊಳ್ಳು

ವದೊಂದೇ ತಡ, ಸಾಕ್ಷಾತ್ ಅಗ್ನಿನಾರಾಯಣನು ಆ ಪತಿಪತ್ನಿಯರ ಪಾರ್ಥಿವ ದೇಹವನ್ನು ದಗ್ಧಗೊಳಿಸಿದನು.

ಕೊನೆಯದಾದ ಅಂದಿನ ಈ ಪ್ರಸಂಗಂತೂ ಆ ಚೇತನ ವಸ್ತುಗಳನ್ನೂ ಕೂಡ ಗೋಳಿಡಿಸಿ ಅಳುವಂತೆ ಮಾಡಿತು! ಇದೆಲ್ಲವು ವಿಧಿ ಲೀಲೆಯಲ್ಲವೇ !

ಸಿಂಧುಲ ರಾಜನು ತೀರಿದ ನಂತರ ಮುಂಜುರಾಜನು ತಾನೇ ರಾಜ್ಯ ಸೂತ್ರವನ್ನು ಕೈಕೊಂಡನು. ಅಣ್ಣನಂತೆ ಅವನಾದರೂ ನಿಷ್ಪಕ್ಷ ಪಾತದಿಂದಲೂ ನ್ಯಾಯದಿಂದಲೂ ರಾಜ್ಯಕಾರಭಾರ ಮಾಡಹತ್ತಿದನು. ಪ್ರಜೆಗಳಾದರೂ ಅವನ ಆಡಳಿತೆಯನ್ನು ಕೊಂಡಾಡಹತ್ತಿದರು. ತನ್ನ ಅಣ್ಣನು ತನಗೆ ಮಾಡಿದ ಬೋಧೆಯನ್ನು ಅವನು ಅಕ್ಷರಶ: ಪಾಲಿಸುತ್ತಲಿದ್ದನು. ಕುಮಾರ ಭೋಜನ ವಿದ್ಯಾಭ್ಯಾಸ ಮಾಡಿಸಹತ್ತಿದನು. ಬಾಲಕನಾದ ಭೋಜನು ಇವನೇ ತನ್ನ ತಂದೆಯೆಂದು ಭಾವಿಸಿ ತನಗಾದ ಪಿತೃವಿಯೋಗವನ್ನು ಮರೆತು ಕುಶಲತೆಯಿಂದ ಇರಹತ್ತಿದನು.

ಭೋಜನು ಕುಶಾಗ್ರ ಬುದ್ಧಿಯವನು, ಅತ್ಯಲ್ಪ ಕಾಲದಲ್ಲಿಯೇ ನ್ಯಾಯ ವ್ಯಾಕರಣ ಮುಂತಾದ ಎಲ್ಲ ಶಾಸ್ತ್ರಗಳಲ್ಲಿಯೂ ರಾಜನೈತಿಕ ವಿಷಯದಲ್ಲಿಯೂ ಪ್ರಾವಿಣ್ಯತೆ ಪಡೆದನು. ಆ ವಿಷಯಗಳ ತಜ್ಞರಿಂದ ಪರೀಕ್ಷಿಸಲ್ಪಟ್ಟನು. ಅವನ ಬುದ್ಧಿ ಮತ್ತೆಯನ್ನು ವಿದವ್ಕತ್ತೆಯನ್ನೂ ಚಪಲತೆ ಹಾಗು ಸಮಯ ಚತುರತೆಯನ್ನೂ ಕಂಡು ಜನತೆಯೆಲ್ಲವೂ ತಮ್ಮ ತಮ್ಮಲ್ಲಿ ಇನ್ನು ಈ ಭೋಜ ರಾಜನು ತನ್ನ ರಾಜ್ಯವನ್ನು ನಿರಾತಂಕವಾಗಿ ನೀಗಿಸಲು ಸಮರ್ಥನಾಗಿರುವನು. ಎಂದು ನುಡಿಯುತ್ತ ಅವನ ಮೇಲೆ ನಿರತಿಶಯ ರಾಜನಿಷ್ಠೆಯಿದ್ದುದನ್ನು ವ್ಯಕ್ತಪಡಿಸಹತ್ತಿದರು.

ಆದರೆ ಪ್ರಜೆಗಳು ಭೋಜರಾಜನ ಬಗೆಗೆ ತೋರಿಸುವ ಅನುಪಮ ನೀತಿಯು ಮುಂಜುರಾಜನಿಗೆ ಮಾತ್ರ ವಿರುದ್ಧವಾಗಿ ವ್ಯಕ್ತವಾಗಹತ್ತಿತು. ಈ ಒಳಗಿನ ಅವಧಿಯಲ್ಲಿಯೂ ಅವನಿಗೆ ಒಬ್ಬ ಮಗನು ಜನಿಸಿದನು. ರಾಜ್ಯದ ಸಂಪೂರ್ಣ ಹಕ್ಕು ಭೋಜನಿಗೇ ಸಲ್ಲುವ ನೀತಿಯಿರುವದರಿಂದ ಒಂದಿಲ್ಲೊಂದು ದಿನ ರಾಜ್ಯ ಗದ್ದುಗೆಯಿಂದ ಇಳಿಯಬೇಕಾಗುವದಲ್ಲದೆ

ನನ್ನ ಮಗನು ಎಷ್ಟು ಮಾತ್ರವೂ ರಾಜ್ಯಸುಖಕ್ಕೆ ಸಂಬಂಧಿತನಾಗುವದಿಲ್ಲ! ಎಂದು ಅಂತರ್ಯದಲ್ಲಿಯೇ ತಳಮಳಿಸಹತ್ತಿದನು. ಪ್ರಜೆಗಳೂ ಪಂಡಿತರೂ ಮಂತ್ರಿ-ಸರದಾರರೂ ಇವರೆಲ್ಲ ಭೋಜನಿಗೆ ಸನ್ಮಾನ ನೀಡುತ್ತಿರುವದನ್ನು ಅವನು ದ್ವೇಷಭಾವನೆಯಿಂದ ನಿರೀಕ್ಷಿಸಹತ್ತಿದನು. ಯಾರಾದರೂ ಮುಂದೆ ಬಂದು ಭೋಜರಾಜನನ್ನು ಹೊಗಳಹತ್ತಿದರೆಂದರೆ ಅವನ ಮೈಗೆ ಸಾವಿರಾರು ಚೇಳುಗಳ ದಂಶದಿಂದಾದಷ್ಟು ವೇದನೆಯು ಅವನ ಹೃದಯಕ್ಕಾಗಹತ್ತಿತು. ಆದರೆ ಇದುವರೆಗೆ ತಾನು ಭೋಜನ ಮೇಲಿಟ್ಟ ವಾತ್ಸಲ್ಯ-ಪ್ರೀತಿಗಳು ಇದ್ದಂತೆಯೇ ಇರಬೇಕು. ಪ್ರಸಂಗ ನೋಡಿ ಇನ್ನಾರೂ ಅರಿಯದಂತೆ ಅವನನ್ನು ಇಹಲೋಕದಿಂದ ದೂರೀಕರಿಸಬೇಕು. ಇತ್ಯಾದಿ ದುಷ್ಟ ವಿಚಾರಗಳು ಅವನಲ್ಲಿ ಸುಳಿ ಸುಳಿಯಾಗಿ ಸುತ್ತಾಡಹತ್ತಿರುವದು ಕಾಲವೈಚಿತ್ರ್ಯವಲ್ಲದೆ ಇನ್ನೇನಿರಬೇಕು !

ಒಂದಾನೊಂದು ದಿನದ ಶುಭಪ್ರಸಂಗ. ಆ ದಿನ ಧಾರಾ ನಗರದ ಪ್ರತಿಷ್ಠಿತರೆಲ್ಲರೂ ರಾಜದರಬಾರಿನಲ್ಲಿ ಬಲು ಹರುಷದಿಂದ ಮಿಲಿತರಾಗಿರುವರು. ಕೂಡಿದವರೆಲ್ಲ ಪ್ರಕೃತರಾಜ ಮುಂಜನನ್ನುಳಿದ ಭೋಜರಾಜನ ಹೆಸರಿನಿಂದ ಜಯ ಜಯಕಾರ ನಡೆಯಿಸಿರುವರು. ಎಷ್ಟು ಮಾತ್ರವೂ ಅವರು ಮುಂಜರಾಜನ ಹೆಸರನ್ನೇ ಎತ್ತಲಿಲ್ಲ. ಆಗಲಾತನು ತನ್ನ ಮನಸ್ಸಿನಲ್ಲಿ "ಈ ಪ್ರಜರುಗಳಲ್ಲಿ ಕೃತಘ್ನತೆಯು ಮೂರ್ತಿಮತ್ತಾಗಿದೆ. ನಾನು ಇದುವರೆಗೂ ಇವರಿಗೆ ಯೋಗ್ಯ ನ್ಯಾಯದಾನದಿಂದ ಸುಖ ನೀಡಿರುವದನ್ನು ಇವರು ಸ್ವಲ್ಪವೂ ಕೊಡ ಗಣನೆಗೆ ತರಲಾರದಾಗಿರುವರು. ಇಂದು ಈ ಭೋಜನನ್ನೇ ಮೇಲು ಮಾಡಿ ಇವರೆಲ್ಲರೂ ನನ್ನನ್ನು ಕೀಳ್ತರಕ್ಕೆ ಬಗೆಯಲಿಚ್ಛಿಸುವದರಿಂದಲೇ ಈ ಬಾಲಕನ ಹೆಸರನಿಂದ ಜಯ ಜಯಕಾರ ಮಾಡಹತ್ತಿರುವರು ಇದುವರೆಗೆ ನಾನು ಏನೊಂದನ್ನರಿಯದೆ ಈ ಬಾಲಕನನ್ನು ಸಾಕಿ ಸಂರಕ್ಷಿಸಿದುದು ನನ್ನ ಮಹಾಪರಾಧವಾಯಿತು. ಇನ್ನು ಸ್ವಲ್ಪ ದಿನಗಳಲ್ಲಿ ನಾನು ಇವನಿಂದ ಪದಚ್ಯುತನಾಗುವದೇ ನಿಶ್ಚಯವು. ಬೆಳೆಯುವ ಬೇನೆಯನ್ನೂ ವೈರಿಯನ್ನೂ ಸಕಾ

ಲಕ್ಕೆ ಪ್ರಯತ್ನದಿಂದ ನಿರ್ನಾಮಗೊಳಿಸದಿದ್ದರೆ ಆತ್ಮಘಾತ ದೋಷಪ್ರಾಪ್ತ ವಾಗುವದು. ಇತ್ಯಾದಿ ವಿಚಾರಮಗ್ನತೆಯಲ್ಲಿ ಸಿಂಹಾಸನದ ಮೇಲೆ ಆತನು ಕುಳಿತಿದ್ದನು. [ಬ]ಒಮ್ಮೆಲೇ ಅವನು ತನ್ನ ವಿಚಾರವನ್ನುಳಿದು ಬದಿಯಲ್ಲಿ ಒಂದು ಆಸನದ ಮೇಲೆ ಕೌತುಕ ದೃಷ್ಟಿಯಿಂದ ಸಭೆಯ ಕಾರ್ಯಕಲಾಪಗಳನ್ನು ನಿರೀಕ್ಷಿಸುತ್ತಿರುವ ಭೋಜನ ಕೈಹಿಡಿದು—ಬಾ ! ಬಾಲಕಾ ನನ್ನ ಸೋದರ ಸಿಂಧುಲ ರಾಜನು ಗತಿಸಿ ನನ್ನ ಹೃದಯಕ್ಕಾಗಿರುವ ವ್ಯಥೆಯು ಇಂದಿನ ದಿನದಲ್ಲಿ ಸಂಪೂರ್ಣ ಅಳಿದು ಹೋಯಿತು. ಬಾ ! ಇಲ್ಲಿಯೇ ನನ್ನ ಸಿಂಹಾಸನದ ಮೇಲೆ ತನ್ನ ಜೊತೆಗೆ ಕುಳ್ಳಿರಿಸಿಕೊಂಡನು. ಈ ಪ್ರಸಂಗ ನೋಡಿ ಜನತೆಯ ಹೃದಯವು ಮತ್ತೆ ಉಕ್ಕೇರಿ— "ಬಾಲರಾಜ ! ಭೋಜನಿಗೆ ಜಯವು ! ಸಿಂಧುಲ ಪುತ್ರನಿಗೆ ಸತತವೂ ಸದ್ವಿಜಯವು !" ಇತ್ಯಾದಿಯಾಗಿ ಗರ್ಜಿಸಿ ರಾಜ ದರ್ಬಾರ ಮಂದಿರವನ್ನೆಲ್ಲ ದುಮದುಮಿಸಿತು. ಈ ಬಾರಿಯೂ ಸಹ ಯಾರೂ ಮುಂಜರಾಜನ ನಾಮಘೋಷ ಮಾಡಲಿಲ್ಲ. ಅದರಿಂದ ಅವನಿಗೆ ಮತ್ತಿಷ್ಟು ತಾಪ ಇನ್ನಿಷ್ಟು ಕೋಪ ಹೃದಯದಲ್ಲೆಲ್ಲ ಅಪ್ರಕಟಿತ ಕ್ರಿಯಾಪಾಪ !

ಮುಂಜನಲ್ಲಿ ಇಷ್ಟೆಲ್ಲ ಸ್ಥಿತಿಯುಂಟಾಗಿ ಅವನ ದುರ್ವಿಚಾರ ಲಹರಿಗಳ ಅದೃಶ್ಯ ಬಗೆಯಿಂದ ಮುನ್ನಡೆಯುವಷ್ಟರಲ್ಲಿಯೇ ಜಾಣ ಮಂತ್ರಿಯೊಬ್ಬನು ರಾಜಾಜ್ಞೆಯ ಮೇರೆಗೆ ನಡೆದ ಇಂದಿನ ಕಾರ್ಯಕಲಾಪಗಳು ಮುಕ್ತಾಯಗೊಂಡವೆಂದು ಹಲುಬಿದನು. ಸತತ ಪ್ರಹರದ ವರೆಗೆ ನಡೆದಿದ್ದ ಸಮ್ಮೇಲನವು ಮತ್ತೊಮ್ಮೆ ಜಯನಿನಾದ ಮಾಡುತ್ತ ಗೊಂಡಿತು.

ಅಂದಿನ ದಿನದ ಸಭೆಯಲ್ಲಿ ಕೂಡಿದವರೆಲ್ಲರೂ ಮುಂಜರಾಜನು ಭೋಜನ ಬಗೆಗೆ ವ್ಯಕ್ತಪಡಿಸಿದ್ದ [ವಾತ್ಸಲ್ಯ ಪ್ರಸಂಗವನ್ನು] ನಿರೀಕ್ಷಿಸಿ ಅವನನ್ನು ಮನಸಾರೆ ತಮ್ಮತಮ್ಮಲ್ಲಿ ಹೊಗಳುತ್ತ ತಮ್ಮ ಮನೆಗಳತ್ತ ತೆರಳಿದರು. ಆದರೆ-- ಆದರೇನು ! ಮುಂಜರಾಜನು ಅಂದಿನಿಂದಲೇ ತನ್ನ ದುರಾಶೆಯನ್ನಿಡೇರಿಸಿಕೊಳ್ಳುವ ಪ್ರಯತ್ನಕ್ಕೆ ಅಣಿಯಾದನು

ಸಿಂಧುಲರಾಜನ ಕಾಲದಿಂದಲೂ ಇದುವರೆಗೆ ದರಬಾರಿನಲ್ಲಿ ಒಬ್ಬನೇ ಒಬ್ಬ ನಂಬುಗೆಯ ವೃದ್ಧ ಸರದಾರನಿದ್ದನು. ರಾಜ ಸಿಂಹಾಸನದ ಬಗೆಗೆ ಅವನಲ್ಲಿ ಅನುಪಮ ನಿಷ್ಠೆಯಿದ್ದಿತು. ಅಂದಿನ ದರಬಾರವೆಲ್ಲವೂ ಬಯಲಾದನಂತರ ಮುಂಜುರಾಜನು ಅವನನ್ನು ಜೊತೆಗೆ ಕರೆದುಕೊಂಡು ಅರಮನೆಯ ತನ್ನ ಗುಪ್ತ ಮಂದಿರಕ್ಕೆ ಹೋದನು. ಅವನಲ್ಲಿ ತನ್ನ ಸಖ್ಯತ್ವ ಭಾವವನ್ನು ಪ್ರಕಟಿಸಿ ತಾನು ಕುಳಿತ ಆಸನಕ್ಕೆ ಹೊಂದಿಯೆ ಆ ಸರದಾರನನ್ನು ಕುಳ್ಳಿರಿಸಿಕೊಂಡನು.

ಆ ವೃದ್ಧ ಸರದಾರನು ಬಹುಶ್ರುತನರ್ತನು. ಅಂದಿನ ದರಬಾರಿನಲ್ಲಿ ಮುಂಜುರಾಜನು ಭೋಜನ ಮೇಲೆ ತೋರಿಸಿದ ವಾತ್ಸಲ್ಯವು ಕೃತಕವೆಂಬುದನ್ನು ಅವನು ಆಗಲೇ ಮುಂಜುರಾಜನ ಮುಖಚರ್ಯೆಯಿಂದ ಊಹಿಸಿದ್ದನು. ಈಗ ರಾಜನು ತನ್ನನ್ನು ಅತ್ಯಂತ ಸ್ನೇಹಪಾಶದಿಂದ ಬಿಗಿಯಲು ಉಪಕ್ರಮಿಸಿದುದು ಅವನ ಊಹೆಗೆ ಬಲಪತ್ತರವಾಯಿತು. ಆದರೆ ಮಾಡುವದೇನು? ತಾನು ಏನೊಂದೂ, ಆಡುವಂತಿಲ್ಲ. ನುಡಿಯುವಂತಿಲ್ಲ. ಎಲ್ಲರೂ ಮುಂಜುರಾಜನು ಭೋಜನ ಮೇಲೆ ತೋರಿಸುವ ಮಮತೆ ಪ್ರೀತಿಗಳನ್ನು ಪುರಸ್ಕರಿಸಿ ಆವನಿಗೆ ಧನ್ಯವಾದಗಳನ್ನು ಅರ್ಪಿಸುವಾಗ ಈ ವೃದ್ಧ ಸರದಾರನ ಆಟ ನಡೆಯುವದು ಸಾಧ್ಯವಿರಲಿಲ್ಲ. ಆದರೂ ರಾಜನ ಕೃತಕ ನೀತಿಯ ಬಗೆಗೆ ಅವನ ತಲೆಯಲ್ಲಿ ಮೂಡಿದ ಮುದ್ರೆಯು ಮಾತ್ರ ಅಚ್ಚಳಿಯದೇ ಉಳಿದಿತ್ತು. ಈ ರಾಜನು ತನ್ನ ಸಂಗಡ ಕರೆದುಕೊಂಡು ಬಂದು ಗುಪ್ತ ಮಂದಿರದಲ್ಲಿ ಸೇರಿದ ನಂತರ ಆ ಸರದಾರನಿಗೆ ಬಾಲಕ ಭೋಜರಾಜನ ಭವಿತವ್ಯದ ಎಲ್ಲ ಚಿತ್ರಗಳು ಅವನ ಕಣ್ಣ ಮುಂದೆ ಕಟ್ಟಿದಂತೆ ತೋರಹತ್ತಿದವು. "ಪ್ರಸಂಗವೇನೋ ದುರ್ಧರ ಕಾಣುವದು ಇನ್ನು ಈ ರಾಜನ ಅಂತಸ್ಥ ವಿಚಾರಗಳು ಹೊರಬೀಳವೆ ಉಳಿಯಲಿಕ್ಕಿಲ್ಲ. ನನ್ನ ಕಾಯಾಸದಂತೆ ಭೋಜ ಬಾಲಕನ ಬಗೆಗೆ ಈ ರಾಜನ ದುಷ್ಟ ಪ್ರತಿಕ್ರಿಯೆಗಳು ಇವನ ಮುಖದಿಂದ ಪ್ರಸ್ಫುಟವಾದರೆ ನಾನು ನನ್ನ ಕೈಲಾದ ಮಟ್ಟಿಗೆ ಪ್ರತಿಕ್ರಿಯೆಯನ್ನೇ ಕೈಕೊಂಡು ಬಾಲಕನ ಕಲ್ಯಾಣ ಚಿಂತಿಸುವದು ನನ್ನ ಧರ್ಮವೂ ಸ್ವಾಮಿನಿಷ್ಠೆಯೂ ಆಗಿರುವದು. ಎಂದು ವಿಚಾರ

ಮಾಡಿ ಆ ವೃದ್ಧ ಸರದಾರನು ಮುಂಜುರಾಜನ ಮುಖವನ್ನು ಕುತೂಹಲ ದೃಷ್ಟಿಯಿಂದ ನಿರೀಕ್ಷಿಸಹತ್ತಿದನು. ಆಗ ಮುಂಜುರಾಜನು ಅತ್ತಿತ್ತ ಕಣ್ಣಲ್ಲಿ ನೋಡಿ ಸರದಾರನನ್ನು ಕುರಿತು.— "ಅಚಲಸಿಂಹ ಸರದಾರರೇ! ಈ ದಿನ ನಾನು ನಿಮ್ಮನ್ನು ಒಂದು ಮಹತ್ವ ಹಾಗು ರಹಸ್ಯಮಯ ಕಾರ್ಯಕ್ಕೆ ಪ್ರೇರೇಪಿಸಬೇಕಾಗಿದೆ. ರಾಜನ ಮುಖದಿಂದ ಈ ವಾಕ್ಯವು ನಿಬ್ಬರದ ಧ್ವನಿಯೊಡನೆ ಹೊರಬಿದ್ದುದನ್ನು ಕೇಳಿ ಆ ಸರದಾರನ ಹೃದಯವು ದಸ್ಸೆಂದಿತು. ಆದರೂ ಸ್ವಭಾವತಃ ಧೀರನಾದ ಸರದಾರನು ಅದಕ್ಕೆ ಬೆಚ್ಚದೆ ರಾಜನ ಮುಂದೆ ತನ ಕಿವಿಯನ್ನೊಡ್ಡಿ— "ಪ್ರಭು ಏನಪ್ಪಣೆ? ಈ ದಿನ ದರಬಾರು ನಡೆದಿರುವ ಸಮಯದಲ್ಲಿ ತಮ್ಮ ಮುಖಮುದ್ರೆಯು ಚಿಂತಾನ್ವಿತವಾಗಿರುವದನ್ನು ಸೂಕ್ಷ್ಮಾವಲೋಕದಿಂದ ಅರಿತೆನು. ಅಂಥ ಮಹತ್ವವಿದ್ದುದಾದರೆ ಆಜ್ಞೆಯಾಗಬೇಕು. ತಮ್ಮ ಮನೋದಯದ ಕಾರ್ಯವನ್ನು ಇನ್ನೊಂದು ವಿಚಾರಕ್ಕೆ ಅವಸರಗೊಡದೆ ಮಾಡಿ ತೋರಿಸುವೆನು ಎಂದು ನುಡಿಯಲು ಮುಂಜುರಾಜನಿಗೆ ಅಚಲಸಿಂಹನ ಉತ್ಸುಕತೆ ಕೇಳಿ ಬಲು ಆನಂದವಾಯಿತು. ಮತ್ತೆ ಅವನು ಅತ್ತಿತ್ತ ನೋಡಿ:—

"ಅಚಲಸಿಂಹ! ನನ್ನ ಅಣ್ಣಂದಿರ ಪ್ರೇಮಕ್ಕೆ ಪಾತ್ರನಾಗಿದ್ದ ಸರದಾರನು ಈಗ ನೀನೊಬ್ಬನಿರುವಿ. ಅವರು ನನ್ನ ಮೇಲೆ ತೋರುತ್ತಿದ್ದ ಪ್ರೇಮಕ್ಕಿಂತಲೂ ನೂರು ಮಡಿ ಅವಮಾನದ ಪ್ರಸಂಗಗಳನ್ನು ನೀನ್ನು ಅನುಭವಿಸಿದುದನ್ನು ನೀನು ಮರೆತರೂ ನಾವು ಮರೆಯುವದಿಲ್ಲ. ಸದ್ಯ ನಾವು ನಿನಗೆ ಆಜ್ಞಾಪಿಸುವ ಗುಪ್ತ ಕಾರ್ಯವನ್ನು ನೀವು ನೆರವೇರಿಸಿದ್ದಾದರೆ ನಮ್ಮ ಹಿತವಂತೂ ಸೈ ಅದರ ಜೊತೆ ನಿನಗಾದ ಅಪಮಾನವು ಪರಿಮಾರ್ಜನೆಗೊಳ್ಳುವದು. ಹಾಗೂ ನಿನಗಾಗಿದ್ದ ಹಾನಿಯೂ ತುಂಬಿ ಬರುವದು ಎಂದು ಹೇಳಿದನು.

ಮುಂಜುರಾಜನ ಭಾಷಣ ಕೇಳಿ ಆ ಸ್ವಾಮಿಭಕ್ತ ಅಚಲಸಿಂಹನ ಹೃದಯದ ಸಂಶಯವೂ ಹೆದರಿಕೆಯೂ ಹೇಳದೆ ನಷ್ಟವಾಗಿ ಅವುಗಳ ಬದಲು ಆ ಸ್ಥಳದಲ್ಲಿ 'ಭೋಜರಾಜನ ಕ್ಷೇಮ ಚಿಂತನೆಯೊಂದೇ ಆಕ್ರಮಿಸಿತು. ಆದರೆ ಅದನ್ನು ವ್ಯಕ್ತಗೊಳಿಸಲಿಚ್ಛಿಸದೆ ಆ ರಾಜನ ಮುಖದಿಂದಲೇ

ಹೊರಡಿಸುವ ಕುರಿತು ಅವನು—ರಾಜನ್! ತಮ್ಮ ಭಾಷಣವನ್ನು ಶೀಘ್ರ ವಾಗಿ ಅರಿತುಕೊಳ್ಳುವ ಜಾಣ್ಮೆ ನನ್ನಲ್ಲಿಲ್ಲ. ಯಾಕಂದರೆ ನಾನು ಯಃಕಶ್ಚಿತ ದೂರತ್ವದಿಂದ ಈ ಸಿಂಹಾಸನದ ಕೃಪೆಯಿಂದಲೇ ಸದ್ಯ ಸರದಾರ ಪಂಕ್ತಿ ಯಲ್ಲಿ ಸೇರಿದವನು. ಆದ್ದರಿಂದ ಸಂದಿಗ್ಧ ಭಾಷಣಗಳ ಭೋದೆಯಾಗುವದು ದುಸ್ತರವಾಗಿದೆ. ಅದೇನೇ ಇರಲಿ, ತಮ್ಮ ರಹಸ್ಯ ಕಾರ್ಯವನ್ನೂ ಅದನ್ನು ನಾನು ಕೈಕೊಂಡು ನೆರವೇರಿಸುವ ಬಗೆಯನ್ನೂ ತಿಳಿಯಾದ ಮಾತುಗಳಿಂದ ಹೇಳುವದಕ್ಕೆ ಅನಂತ ಅಂಜಿಕೆಗಳೇನಿವೆ? ಇಲ್ಲಿ ನಾವೀರ್ವರೇ ಹೊರತು ಅನ್ಯರಿಲ್ಲ. ಸಹಸಾಪಟ್ಕರ್ಣವಾಗುವ ಸಂಭವವು ತ್ರಿಕಾಲದಲ್ಲಿಯು ಅಸಾಧ್ಯ" ಎಂದನು.

ಅಚಲಸಿಂಹ ಸರದಾರನು ತನ್ನ ಕಾರ್ಯ ಕೈಕೊಳ್ಳುವದಕ್ಕೆ ಸಿದ್ಧ ನಾದುದನ್ನು ಕಂಡು ಮುಂಜುರಾಜನು—"ಎಲೈ ಅಚಲಸಿಂಹನೇ! ನೀನು ನಿನ್ನ ಹೆಸರಿಗೆ ಒಪ್ಪುವ ಮಹಾವೀರನೇ ಆಗಿರುವಿ, ಅಡ್ಡಿಯಿಲ್ಲ. ಸದ್ಯ ನಾನು ಈ ರಾಜ್ಯವನ್ನು ಆಳುತ್ತಿದ್ದರೂ ಇನ್ನು ಸ್ವಲ್ಪ ದಿನಗಳಲ್ಲಿಯೇ ಪದಚ್ಯುತ ನಾಗುವ ಲಕ್ಷಣ ತೋರುವದು. ಇದಕ್ಕೆ ಒಂದೇ ಒಂದು ಕಾರಣವೆಂದರೆ— ನಮ್ಮ ರಾಜಪುತ್ರ ಭೋಜರಾಜನು ಅವನೇ ನನಗೆ ಕಂಟಕಪ್ರಾಯನಾಗಿ ರುವನು. ಏನಾದರೊಂದು ಬಗೆಯಿಂದ ಅವನನ್ನು ಈ ಜಗತ್ತಿನಿಂದ ಕಣ್ಮರೆಯಾಗುವಂತೆ ಮಾಡಿದ್ದರೆ ಈ ರಾಜ್ಯಶ್ರೀಯು ನನಗೂ ನನ್ನ ತರುವಾಯ ಉತ್ತರಾಧಿಕಾರಿಯಾದ ನನ್ನ ಮಗನಿಗೂ ಸ್ಥಿರ ಪರಂಪರೆಯಿಂದ ಉಳಿಯುವ ಈ ಕೆಲಸವು ಸಾಮಾನ್ಯವಾದುದಲ್ಲ. ಅತ್ಯಂತ ರಹಸ್ಯದಲ್ಲಿ ಈ ಕಾರ್ಯ ಕೈಕೊಳ್ಳಬೇಕಾಗಿದೆ. ಇದನ್ನು ನೀನು ಮಾಡಿದೆಯಾದರೆ ನಿನಗೂ ನಿನ್ನ ಅವಮಾನ—ಹಾನಿಗಳ ನಿವಾರಣೆಯಾಗುವದಲ್ಲದೆ ನನ್ನಿಂದ ನಿನಗೆ ಅಮೂಲ್ಯ ವಸ್ತುಗಳು ಮೆಚ್ಚಿಗೆಯಾಗಿ ಕೊಡಲ್ಪಡುವವು. ಹಾಗೂ ನಿನ್ನ ಮಕ್ಕಳು ಮೊಮ್ಮಕ್ಕಳು ಇನ್ನು ಮುಂದಿನ ಯಾವ ಕಾಲದಲ್ಲಿಯೂ ನಮ್ಮ ರಾಜಾಶ್ರಯದಿಂದ ಹೊರತಾಗದು ಅದು ಅಲ್ಲದೆ ಸಾಂಪ್ರತು ನಿನಗಿ ರುವ ಅಧಿಕಾರವನ್ನು ವಿಸ್ತೃತಗೊಳಿಸಿ ಕೊಡುವೆನು" ಎಂದನು

ಮುಂಜುರಾಜನ ದುಷ್ಟಹೇತುವಿನ ಮಾತುಗಳಿಂದ ಅಚಲಸಿಂಹನ ಶ್ರವಣ ಸಂಪುಟದಲ್ಲಿ ಕಾದ ಲೋಹರಸವನ್ನೆರಚಿದಂತಾಯಿತು. ಅವನ ಮೈ-ಗೂದಲು ಸಿಮಿರಿನಿಂತವು. ಆದರೂ ಅವನು ತನ್ನಲ್ಲಿ— ಈ ಸಮಯಕ್ಕೆ ನಾನು ಇವನ ವಿಚಾರ ಆಜ್ಞೆಗಳನ್ನು ಉಲ್ಲಂಘಿಸಿ ಬೋಧೆ ಮಾಡಿದರೆ ಏನೊಂದೂ ಉಪಯೋಗವಾಗುವದಿಲ್ಲ. ಇಷ್ಟೇ ಅಲ್ಲ, ಇವನ ದುರ್ಮತಿಯು ಹೆಚ್ಚೆಚ್ಚು ಕೊನರುವದೇ ಹೊರತು ಕಮರುವದಿಲ್ಲ ಈಗ ನಾನು ರಾಜಪುತ್ರನ ವಧೆಗೊಳಿಸದೆ ಹಿಂಜರಿದರೆ ಇನ್ನಾರಿಂದಾದರೂ ಈ ದುಷ್ಟನು ತನ್ನ ಕಾರ್ಯ ಸಾಧಿಸಿಕೊಳ್ಳದೆ ಬಿಡಲಾರನು. ಒಂದು ವೇಳೆ ರಾಜಪುತ್ರನ ಜೊತೆಗೆ ಈ ರಹಸ್ಯವನ್ನರಿತ ನನ್ನನ್ನಾದರೂ ಈ ನೀಚನು ಮಣ್ಣಿಗಿಕ್ಕದೆ ಅದೆಂತು ಸುಮ್ಮನಿರುವನು? ಕೇವಲ ನನ್ನ ಪ್ರಾಣ ಗತಿಸಿದರೂ ಅಡ್ಡಿಯಿಲ್ಲ. ಆದರೆ ಈ ದುರುಳನ ಕೃತಿಯು ರಾಜಪುತ್ರನ ಜೀವಕ್ಕೆ ಬಿಡಲಾರದ ಗಂಡಾಂತರವಾಗಿದೆಯಲ್ಲ! ಇನ್ನು ನಾನು ಇವನ ಆಜ್ಞೆಯನ್ನು ಉಲ್ಲಂಘಿಸದೆ ಕೇವಲ ರಾಜಪುತ್ರನ ಪ್ರಾಣ ರಕ್ಷಣೆಯ ಉದ್ದೇಶದಿಂದ ಅದನ್ನು ಸ್ವೀಕರಿಸುವದೇ ಸೂಕ್ತ ಮಾರ್ಗವು. ಇತ್ಯಾದಿಯಾಗಿ ವಿಚಾರ ಮಾಡಿ ಅಚಲಸಿಂಹನು ಮುಂಜುರಾಜನನ್ನು ಕುರಿತು ಮಹಾರಾಜಾ! ನಿಮ್ಮ ಆಜ್ಞೆಯು ನನಗೆ ಮಾನ್ಯವು. ನೀವು ಹೇಳಿದಂತೆ ರಾಜಪುತ್ರ ಭೋಜನ ಪ್ರಾಣಾಪಹರಣದ ತೀವ್ರ ಉಪಾಯ ಕೈಕೊಳ್ಳುವೆನು ಅಪ್ಪಣೆ ಇರಲಿ, ಇಲ್ಲಿ ನನ್ನ ಇನ್ನೊಂದು ವಿಚಾರವಿದೆ ನೀವು ನಿಮ್ಮ ಮನೋದಯದಂತೆ ಕುಮಾರ ಭೋಜನನ್ನು ಯಮಸದನಕ್ಕೆ ಅಟ್ಟುವದು ಎಂದು ಒಂದು ನಿಮ್ಮ ಹಸ್ತಲಿಖಿತ ಅಪ್ಪಣೆಯನ್ನು ನನ್ನ ಬಳಿಗೆ ಕೊಟ್ಟುಬಿಡಿರಿ. ರಾಜಾಜ್ಞೆಯಿಂದಲೇ ಈ ಸರದಾರನು ನನ್ನನ್ನು ವಧೆಗೊಳಿಸುವನು. ಇಷ್ಟೊಂದು ಸಂಗತಿಯು ಅವನಿಗೆ ತಿಳಿದರೆ ಸಾಕು ವಧೆಯ ದೋಷವು ನನಗೆ ಅಂಟಲಾರದು. ಹಾಗೂ ಶಾಸನವನ್ನನುಸರಿಸಿ ನೀವು ಲೇಖನ ಕೊಡುವದರಿಂದ ರಾಜನಾದ ನಿಮಗೆ ದೋಷ ಸಂಪರ್ಕವಾಗದು. ನೀವು ಬರೆದುಕೊಟ್ಟ ಆ ಲಿಖಿತವನ್ನು ಅವನ ಅಂತ್ಯ ಸಮಯದ ಮುನ್ನವೇ ಅವನಿಗೆ ತೋರಿಸಿ ಅವನನ್ನು ಮೃತ್ಯುದ್ವಾರದಿಂದ ಮುಕ್ತಿಗೆ ನೂಕುವೆನು. ಹಾಗು ಯೋಗ್ಯ ಸಮಯ ಸಾಧಿಸಿ ಯಾರೂ ಅರಿಯದಂತೆ ಅವನನ್ನು

ರಣ್ಯಕ್ಕೆ ಕರೆದೊಯ್ಯುವೆನು. ಅಲ್ಲಿ ಅವನನ್ನು ವಧೆ ಮಾಡಿ ನಿಮಗೆ ಏನಾದರೂ ಒಂದು ಗುರುತು ತಂದು ನಿಮಗೆ ತೋರಿಸುವೆನು. ಇಂದಿನಿಂದ ನೀವು ಏನೊಂದೂ ಸಹ ಚಿಂತೆಯಲ್ಲಿ ಇರಕೂಡದು" ಎಂದು ಹೇಳಿದನು.

ಅಚಲಸಿಂಹನ ಹೇಳಿಕೆಯು ನಿಜವೆಂದು ಮುಂಜುರಾಜನಲ್ಲಿ ನಂಬುಗೆಯನ್ನು ಹುಟ್ಟಿಸಿತು. ಅವನ ಸಂತೋಷಕ್ಕೆ ಪಾರಾವಾರವಿಲ್ಲದಾಯಿತು. ಸರದಾರನು ಹೇಳಿದಂತೆ ಆಗಲೇ ಒಂದು ಕಾಗದ ಮೇಲೆ "ಕುಮಾರ ಭೋಜನನ್ನು ಯಮಸದನಕ್ಕೆ ಅಟ್ಟುವದು" ಎಂಬುದಾಗಿ ಬರೆದು ಅದಕ್ಕೆ ರಾಜ ಮುದ್ರೆಯನ್ನು ಊರಿ ಆ ಅಚಲಸಿಂಹನ ಕೈಗೆ ಕೊಟ್ಟನು. ಹಾಗೂ ಅವನ ಮನಃಪ್ರೀತ್ಯರ್ಥವಾಗಿ ಧನ_ಕನಕ_ವಸ್ತ್ರಗಳನ್ನು ಕೊಟ್ಟು ಬೀಳ್ಕೊಟ್ಟನು.

ಅಂದಿನಿಂದ ಮುಂದೆ ಒಂದೆರಡು ವಾರಗಳ ಪರ್ಯಂತವೂ ಅಚಲಸಿಂಹನು ಕುಮಾರ ಭೋಜನನ್ನು ಕಾಣುವದು, ಅವನನ್ನು ತನ್ನ ಮಂದಿರಕ್ಕೆ ಕರೆತರುವದು, ತನ್ನೊಡನೆ ಅವನನ್ನು ಕುದುರೆಯ ಮೇಲೇರಿಸಿಕೊಂಡು ನಗರ ಬಾಹ್ಯ ಪ್ರದೇಶಗಳಿಗೆ ಸಂಚಾರಾರ್ಥ ಹೋಗುವದು ಇತ್ಯಾದಿ ಕ್ರಿಯೆಗಳಿಂದ ಅವನು ಆ ಬಾಲಕನನ್ನು ತನ್ನ ವಿಶ್ವಾಸ ಕ್ಷೇತ್ರದಲ್ಲಿ ಕೆಡವಿಕೊಂಡನು.

ಇಂತಿರಲು ಒಂದು ದಿನ ಅಚಲಸಿಂಹನು ಮೃಗಯಾವಿನೋದಕ್ಕೆಂದು ಕುಮಾರ ಭೋಜನನ್ನು ಉತ್ಸಾಹಗೊಳಿಸಿದನು. ಬಳಿಕ ಅವರಿಬ್ಬರೂ ಅಶ್ವಾರೋಹಿಗಳಾಗಿ ನಗರದಿಂದ ಹೊರಬಿದ್ದರು. ಹೋಗ ಹೋಗುತ್ತ ಅವನನ್ನು ಧಾರಾನಗರದಿಂದ ಹತ್ತು ಹರದಾರಿ ದೂರದಲ್ಲಿರುವ ಒಂದು ಘೋರಾರಣ್ಯಕ್ಕೆ ಕರೆದೊಯ್ದನು. ಆ ಅಡವಿಯೆಲ್ಲ ದಟ್ಟವಾದ ವೃಕ್ಷಗಳಿಂದ ಯುಕ್ತವಾಗಿದ್ದಿತು. ಸುತ್ತಲಿನ ನಾಲ್ಕಾರು ಹರದಾರಿವರೆಗೆ ಎಲ್ಲಿ ನೋಡಿದರೂ ಸ್ವಚ್ಛಂದವಾಗಿ ಸಂಚರಿಸುತ್ತಿರುವ ಅಡವೀ ಮೃಗಗಳೂ ಗಿಡದಿಂದ ಮರಕ್ಕೆ ಒಂದರಿಂದ ಇನ್ನೊಂದಕ್ಕೆ ನೆಗೆದಾಡುವ ಮಂಗಗಳೂ ತರತರದ ಬಣ್ಣಗಳ ಸೊಬಗುಳ್ಳ ಹಾಗೂ ಅಂತರಿಕ್ಷದಲ್ಲಿ ಮನಬಂದಂತೆ

ಹಾರಾಡಿ ಮರಗಳ ಮೇಲಿರುವ ತಮ್ಮ ತನ್ನ ಗೂಡುಗಳ ಒಳ ಸೇರುವ ವಿಹಂಗಗುಗಳೂ ಇನ್ನೂ ಅನೇಕಾನೇಕ ಸಚೇತನ ಪ್ರಾಣಿಗಳೂ ಬಾಲಕ ಭೋಜನ ಹೃದಯದಲ್ಲಿ ಒಳ್ಳೇ ರಮ್ಯತೆಯನ್ನು ಬೀರಿದವು. ಈ ಎಲ್ಲ ದೃಶ್ಯ ವನ್ನು ನಿರೀಕ್ಷಿಸುತ್ತ ಆ ಬಾಲಕನು ಅಚಲಸಿಂಹನನ್ನು ನೆರಳಿನಂತೆ ಹಿಂಬಾ ಲಿಸುತ್ತ ಹೋಗಿ ಆ ಕಟ್ಟಡವಿಯ ನಟ್ಟನಡುವಿನ ಪ್ರದೇಶದವರೆಗೆ ಹೋದನು ಅಲ್ಲಿ ಒಂದು ಚಿಕ್ಕ ಶಿವಾಲಯ ಎದುರಿನಲ್ಲಿ ಒಂದು ಮನೋಹರ ತೋರುವ ತೀರ್ಥ ಇವುಗಳನ್ನು ನಿರೀಕ್ಷಿಸಿ ಸರದಾರ ಹಾಗೂ ಆ ಬಾಲರಾಜ ಇವರಿ ಬ್ಬರೂ ತಮ್ಮ ಕುದುರೆಗಳಿಂದ ಕೆಳಗಿಳಿದರು. ಸರದಾರನು ಎರಡೂ ಕುದುರೆ ಗಳನ್ನು ಅಲ್ಲಿಯೇ ಇರುವ ಗಿಡಗಳಿಗೆ ತೊಡಕಿಸಿದನು. ಹಾಗೂ ಸುತ್ತಲೂ ಬೆಳೆದು ಚೆಲ್ಲುವರಿದಿದ್ದ ಎಳೆಗರುಕೆಯನ್ನು ತಂದು ಅವಕ್ಕೆ ಹಾಕಿ ತೀರ್ಥ ತೀರ ದಲ್ಲಿ ವಿಚಾರ ಮಗ್ನನಾಗಿ ಕುಳಿತನು. ಅಷ್ಟರಲ್ಲಿಯೇ ಭೋಜನು ತೀರ್ಥ ಜಲ ದೊಳಕ್ಕಿಳಿದು ಪಾದಪ್ರಕ್ಷಾಲನ ಮುಖಪ್ರಕ್ಷಾಲನೆಗಳನ್ನು ಮಾಡಿಕೊಂಡು ನೇರವಾಗಿ ಶಿವಾಲಯದೊಳಗೆ ಸೇರಿದನು. ಅಲ್ಲಿರುವ ಶಿವಲಿಂಗವನ್ನು ಅದರೆ ದುರು ಮೂರ್ತಿಮತ್ತಾಗಿ ಕುಳಿತಿದ್ದ ವೃಷಭ ಶೃಂಗದ್ವಾರದಿಂದ ನಿರೀಕ್ಷಿಸಿ ನಮಸ್ಕರಿಸಿದನು: ನೂರೆಂಟು ಶಿವನಾಮಗಳನ್ನು ಮುಖದಿಂದ ಉಚ್ಚರಿಸುತ್ತ ಪ್ರದಕ್ಷಿಣೆಯಿಂದ ಬಲವೆಂದು ಶಿವಲಿಂಗಕ್ಕೆ ನಮಸ್ಕರಿಸಿದನು. ಹಾಗೂ ಅಗಲೇ ಮತ್ತೊಮ್ಮೆ ದರ್ಶನ ಹೊಂದಿ ಹೊರ ಬಂದನು. ತೀರ್ಥ ತೀರದ ಮೇಲೆ ವಿಚಾರಪರವಶನಾಗಿ ಬಾಹ್ಯದೃಷ್ಟಿ ಕ್ರಿಯಾವಿವರ್ಜಿತನಾಗಿ ಕುಳಿತಿರುವ ಅಚಲ ಸಿಂಹನೆದುರು ನಿಂತು—

"ಏಕೆ! ಅಚಲಸಿಂಹರೇ! ಮಾರ್ಗಾಯಾಸವಾಗಿದೆಯೇ! ನಿದ್ರೆಯ ಸೆಳೆತಕ್ಕೆ ಸಿಕ್ಕಿರುವಿರಾ? ಎದ್ದೇಳಿ, ಕೈಕಾಲು ತೊಳೆದುಕೊಂಡು ಶಿವ ಮಂದಿರ ದೊಳಕ್ಕೆ ಹೋಗಿರಿ, ಲಿಂಗ ಸ್ವರೂಪಿನ ಶಿವದರುಶನ ಪಡೆಯಿರಿ. ಪ್ರದೋಷ ಪ್ರಾಪ್ತವಾಗುವದರೊಳಗೇ ಗುರಿಯಿಟ್ಟ ನಮ್ಮ ಮಗಯಾವ್ಯಸನವನ್ನು ಮುಕ್ತಾಯಗೊಳಿಸಿ ಪುನ: ಇಲ್ಲಿಗೆ ಬರೋಣ ಈ ದಿನ ಮಾಸಶಿವ ರಾತ್ರಿ ಪುಣ್ಯ ಸಮಯವು ನಮಗೆ ಅನಾಯಾಸ ಲಭಿಸಿದುದರಿಂದ ಇನ್ನೊಮ್ಮೆ ದೇವ ದರ್ಶನ ಪಡೆದು ಹಿಂದುರುಗಿ ಹೋಗೋಣ ಎಂದು ಮಾತಾಡುತ್ತಿರುವ ಭೋಜನನ್ನು ಸರದಾರನು ತಲೆಯೆತ್ತಿ ಕಂಡು ಕಣ್ತುಂಬಾ ನೀರು ತಂದು

ಕೊಂಡನು "ಕುಮಾರಾ ಬಾಲರಾಜಾ!" ಎಂದಿಷ್ಟೇ ಉಚ್ಚರಿಸಿ ದನಿ ತೆಗೆದು ಬಿಕ್ಕಿ ಬಿಕ್ಕಿ ಅಳಹತ್ತಿದನು. ಮತ್ತಾರೂ ಇಲ್ಲದ ಹೆಗ್ಗಾಡಿನಲ್ಲಿ ಒಮ್ಮಿಂದೊಮ್ಮೆ ಸರದಾರನಿಗಾದ ಸ್ಥಿತಿಯನ್ನು ನೋಡಿ ಭೋಜನು ಸ್ತಂಭೀ ಭೂತನಾಗಿ—ಇದೇನು ಅಚಲಸಿಂಹರೇ! ಮೃಗಯಾವ್ಯಸನವು ನಿಮ್ಮನ್ನು ಹೃದಯ ವ್ಯಸನದಲ್ಲಿ ತೊಡಗಿಸಿತೇನು? ಎಂದು ಕೇಳುತ್ತಿರುವಾಗಲೇ ಅಚಲಸಿಂಹನು ಚೇತರಿಸಿ ಕಣ್ಣೊರಸಿಕೊಂಡು—"ಬಾಲರಾಜಾ! ನಿಮ್ಮ ಚಿಕ್ಕಪ್ಪನ ಕ್ರೂರಪ್ಪಣೆಯಿಂದ ನೋಡು ಎಂದು ಮುಂಜುರಾಜನು ಬರೆದು ಕೊಟ್ಟ ಲಿಖಿತವನ್ನು ಆ ಭೋಜನ ಕೈಗೆ ಕೊಟ್ಟನು. ಭೋಜನು ಬೆರಗಾಗಿ ಇದೇನೋ ತನಗೆ ಚಿಕ್ಕಪ್ಪನ ಶಾಸನಾಜ್ಞೆಯಿರಬಹುದೆಂದು ಊಹಿಸಿ ಮುದ್ರಾಂಕಿತವಿದ್ದ ಓಲೆಯನ್ನು ತನ್ನ ಹಣೆಗ್ಹಚ್ಚಿ ತೆಗೆದು ಬಿಚ್ಚಿ ಓದಿ ದನು ಓದಿ ಓದಿದಂತೆ ಅವನ ಮುಖಚರ್ಯೆಯ ಮೇಲೆ ಆಶ್ಚರ್ಯದ ಕಳೆದೋರಿತೇ ಹೊರತು ಇನ್ನಾವ ವಿಕಾರಗಳು ಒಡಮೂಡಿದುದು ಅಚಲ ಸಿಂಹನಿಗೆ ಕಂಡು ಬರಲಿಲ್ಲ. ಕೂಡಲೇ ಭೋಜನು ಮರುಮಾತಾಡದೆ ಅಲ್ಲಿಯೇ ಬೆಳೆದು ನಿಂತಿದ್ದ ಲತಿಗೆಯ ರಸ ತೆಗೆದು ಕುಶಕುಂಡವನ್ನು ಕತ್ತಿ ಅದನ್ನು ಆ ರಸದಲ್ಲಿ ಅದ್ದಿದನು. ಹಾಗು ತನ್ನ ಚಿಕ್ಕಪ್ಪನ ಬರೆದಿದ್ದ ಆಜ್ಞಾಪತ್ರದ ಕೆಳಗೇ:

> ಮಾಂಧಾತಾ ಚ ಮಹೀಪತಿಃ ಕೃತಯುಗಾಲಂಕಾರ ಭೂತೋಗತಃ
> ಸೇತುರ್ಯೇನ ಮಹೋದಧೌ ವಿರಚಿತಃ ಕ್ವಾಸೌ ದಶಾಸ್ಯಾಂತಕಃ
> ಅನ್ಯೇಚಾಪಿ ಯುಧಿಷ್ಠಿರ ಪ್ರಭೃತಯೋ ಯಾತಾ ದಿವಂ ಭೂಪತೇ
> ನೈಕೇನಾಪಿ ಸಮಂಗತಾ ವಸುಮತೀ ಮುಂಜತ್ವಯಾ ಯಾಸ್ಯತಿ||

(ಅರ್ಥಃ— ಕೃತಯುಗಕ್ಕೆ ಅಲಂಕಾರ ರೂಪನಾದ ಚಕ್ರವರ್ತಿ ಮಾಂಧಾತರಾಜನು ಗತಿಸಿ ಹೋದನು. ಸಾಗರಕ್ಕೆ ಸೇತುವೆ ಕಟ್ಟಿದ ಹಾಗು ರಾವಣನನ್ನು ವಧೆ ಮಾಡಿದ ರಾಮಚಂದ್ರನು ಈಗ ಅದೆಲ್ಲಿ ಇರುವನು? ಇನ್ನು ಅನ್ಯ ಯುಧಿಷ್ಠರ ಮೊದಲಾದ ನೃಪತಿಗಣವು ಸತ್ತು ಹೋಯಿತು ಆದರೆ ಈ ಜಗತ್ತು ಮಾತ್ರ ಅವರಾರ ಸಂಗಡ ಹೋಗಲಿಲ್ಲ ಎಲೈ ಮುಂಜ ರಾಜನೆ ಈ ಪೃಥ್ವಿಯು ನಿನ್ನೊಡನೆ ಬರುವದಲ್ಲವೇ?)

ಈ ಮೇಲಿನ ಶ್ಲೋಕವನ್ನು ಬರೆದು ಅಚಲಸಿಂಹನ ಕೈಗೆ ಕೊಟ್ಟು "ಸರದಾರರೆ! ಈ ಪತ್ರವನ್ನು ನನ್ನ ಪಿತೃವ್ಯನಿಗೆ ಕೊಟ್ಟು ಅವರಿಗೆ ನನ್ನ ಕೊನೆಯ ವಂದನೆಯನ್ನೂ ಇದರಲ್ಲಿ ಬರೆದ ನನ್ನ ಸಂದೇಶವನ್ನೂ ಅರ್ಪಿಸಿರಿ ತತ್ಪೂರ್ವದಲ್ಲಿ ಅಂದ? ಈಗ ನೀವು ನಿಮಗಾದ ರಾಜಾಜ್ಞೆಯನ್ನು ಪೂರ್ತಿಗೊಳಿಸಿರಿ. ನೀವು ಇದುವರೆಗೆ ನನ್ನ ಮೇಲೆ ತೋರಿಸಿದ ಮೋಹವನ್ನು ಇಂದಿನದ ನಿಮ್ಮ ಕರ್ತವ್ಯದಲ್ಲಿ ಸ್ಮರಣೆಗೆ ತಂದುಕೊಳ್ಳಬೇಡಿರಿ ಎಂದು ಹೇಳಿ ಅವನೆದುರಿನಲ್ಲಿ ಪೂರ್ವಾಭಿಮುಖವಾಗಿ ಪದ್ಮಾಸನಸ್ಥನಾಗಿ ಕುಳಿತನು. ಮತ್ತು ಅವನು "ಅಚಲಸಿಂಹರೇ! ಇನ್ನು ಅನುಮಾನ ಬೇಡ, ತೀವ್ರವೇ ನನ್ನ ಶಿರಸ್ಸನ್ನು ತರಿದು ಹಿಂದಿರುಗಿರಿ, ಇಲ್ಲಿಯ ಶಿವಲಿಂಗದ ಸಾನಿಧ್ಯದಲ್ಲಿಯೇ ನನ್ನ ಪಂಚಪ್ರಾಣಗಳು ಈ ದೇವನಲ್ಲಿ ಸಮ್ಮಿಲನಗೊಂಡರೆ ಈ ಜಗತ್ತಿನಲ್ಲಿ ನನ್ನಂಥ ಧನ್ಯನೆಂದರೆ ನಾನೇ ಎಂದು ತಿಳಿದುಕೊಳ್ಳುವೆನು. ಎಂದು ಪುನಃ ಹೇಳಲು ಅಚಲಸಿಂಹನು ಇನ್ನೂ ಬಾಲಕನ ಧೈರ್ಯವನ್ನು ಒರೆಗೆಚ್ಚಿ ನೋಡುವೆನೆಂದು ಆಗಲೇ ತಾನು ಕುಳಿತಲ್ಲಿಂದ ಮೆಲ್ಲಕ್ಕೆದ್ದನು. ಹಾಗು ತನ್ನ ಖಡ್ಗವನ್ನು ಓರೆಯಿಂದ ಹಿರಿದುಕೊಂಡು ಭೋಜನ ಎದುರಿನಲ್ಲಿ ನಿಂತು—"ಬಾಲರಾಜ! ರಾಜನ ಅಜ್ಞಾಪತ್ರವನ್ನು ನೋಡಿದ ಕೂಡಲೇ ನೀವು ಮರಣವನ್ನು ಸ್ವಾಗತಿಸುವದಕ್ಕೆ ಸಿದ್ಧರಾದಿರಲ್ಲವೇ? ಅಡ್ಡಿಯಿಲ್ಲ. ನೀವು ಶಿವಸ್ಮರಣೆಯೊಂದಿಗೆ ನಿಮ್ಮ ಚಿಕ್ಕಪ್ಪನಿಗೆ ಏನಾದರೂ ನಿರೂಪ ಕೊಡದಿದ್ದರೆ ಉಚ್ಚರಿಸಿ ಎಂದೆನ್ನಲು ಭೋಜರಾಜನು ಸರದಾರರೇ! ನನ್ನ ಸಂದೇಶವನ್ನೆಲ್ಲ ಈ ಅಜ್ಞಾಪತ್ರದ ಕೆಳಗೆ ಉಲ್ಲೇಖಿಸಿರುವೆನು. ಒಂದು ವೇಳೆ ಮಾರ್ಗದಲ್ಲಿ ಈ ಪತ್ರವು ಕಳೆದು ಹೋದರೆ ಅಥವಾ ರಾಜನು ನನ್ನ ಹಸ್ತಲಿಖಿತವನ್ನು ಓದುವದಕ್ಕೆ ಧಿಕ್ಕರಿಸಿದರೆ ನನ್ನ ಸಂದೇಶವು ನಿರರ್ಥಕವಾಗುವದು. ಆದರೆ ಹಾಗೆ ಬೇಡ, ಈಗ ಪತ್ರವನ್ನು ಒಯ್ದು ಕೊಡಿರಿ ಹಾಗೂ ನನ್ನ ಸಂದೇಶವನ್ನೂ ಅವರಿಗೆ ತಿಳಿಸಿರಿ ಅದೇನೆಂದರೆ ನನ್ನ ಪಿತೃಸ್ವರೂಪರೇ! ಇದುವರೆಗೆ ಮಾಂಧಾತ—ನಳ—ರಾಮ—ಧರ್ಮ—ಶಿಬಿ, ಇತ್ಯಾದಿ ಎಷ್ಟೋ ಪುಣ್ಯಶ್ಲೋಕಿನ ನೃಪತಿಗಳು ಈ ಪೃಥ್ವಿಯನ್ನು ಉಪಯೋಗಿಸಿದರು. ಕಟ್ಟಕಡೆಗೆ ಅವರೆಲ್ಲ ಈ ಜಗತ್ತನ್ನು ಇಲ್ಲಿಯೇ ಬಿಟ್ಟು ಬೇರೆಯವರಿಗೊಪ್ಪಿಸಿ ಪರ

ಲೋಕಕ್ಕೆ ಹೊರಟು ಹೋದರು ಆದರೆ ನೀವು ಮಾತ್ರ ನಿಮ್ಮ ಜನ್ಮದಲ್ಲಿ ಈ ಪೃಥ್ವಿಯನ್ನು ಚಿರಕಾಲ ಉಪಯೋಗಿಸಿ ಕಟ್ಟಕಡೆಗೆ ಈ ಎಲ್ಲ ವೈಭವ ದೊಡನೆ ಸ್ವರ್ಗಕ್ಕೆ ಇಲ್ಲವೆ ಪರಲೋಕಕ್ಕೆ ತೆರಳುವವರಿರುವಿರೆಂಬ ತಿಳುವಳಿಕೆ ಯಿಂದಲೇ ನಾನು ನನ್ನ ಪ್ರಾಣವನ್ನು ಜಗದೀಶನಿಗೆ ಒಪ್ಪಿಸುವೆನು. ತಾವು ರಾಜ್ಯೈಶ್ವರ ಸಹಿತವಾಗಿ ಪರಲೋಕಕ್ಕೆ ಬರುವದಾಗಬೇಕು. ಇದೇ ನನ್ನ ನಿಕೃಷ್ಟವಾದ ಬಯಕೆಯಿರುವದು. ಈ ನನ್ನ ಆಕೆಯನ್ನು ಪೂರೈಸುವಲ್ಲಿ ತಾವು ಅಣುಮಾತ್ರವೂ ಅನುಮಾನವನ್ನವಲಂಭಿಸಲಿಕ್ಕಿಲ್ಲೆಂಬದಾಗಿ ನಂಬಿರು ವೆನು ಸಂದೇಶಾಂತ್ಯದಲ್ಲಿ ಹಿರಿಯರಾದ ತಮಗೆ ನನ್ನ ಆನಂದವಾದ ಹಾಗು ಅಕ್ಷಯವಾದ ವಂದನೆಗಳಿರಲಿ.

ನನ್ನ ಪ್ರೇಮದ ಅಚಲಸಿಂಹರೇ ! ನನ್ನ ಚಿಕ್ಕಪ್ಪನವರಿಗೆ ಸಲ್ಲಿಸುವ ನನ್ನ ನಿರೂಪದ ಹೇಳಿಕೆಯಿದಾಗಿರುವದು ನೀವು ನಿಮಗೆ ರಾಜನು ಒಪ್ಪಿ ಸಿದ ನನ್ನ ವಧೆಯ ಕರ್ತವ್ಯವನ್ನು ಜಾಗ್ರತೆಯಾಗಿ ಕೊನೆಗಾಣಿಸಿರಿ ಎಂದು ನುಡಿದು ತಾನು ಕುಳಿತಲ್ಲಿಂದ ಕಡಲಡೆ ಕೆಳಗೆ ಶಿರವನ್ನು ಬಗ್ಗಿಸಿಕೊಂಡು ಕುಳಿತನು.

ಭೋಜರಾಜನ ಮಹೋಪಸರ್ಗವನ್ನರಿತು ಅಚಲಸಿಂಹನು ಹೃದಯ ದಿಂದ ಬಹಳೇ ತಳಮಳಿಸಹತ್ತಿದನು. ಅವನ ಕಣ್ಣುಗಳಿಂದ ಬಳಬಳನೆ ಸಂತಾಪಾಶ್ರುಗಳು ಸುರಿಯಹತ್ತಿದವು. ಕೂಡಲೇ ಅವನು ತನ್ನ ಕೈಯಲ್ಲಿ ಹಿಡಿದಿದ್ದ ಖಡ್ಗವನ್ನು ದರರಕ್ಕೆ ಬಿಸುಟಿ ಚೆಲ್ಲಿದನು. ಹಾಗು ಆ ಬಾಲರಾಜ ಭೋಜನ ಪಾದಗಳ ಮೇಲೆ ತನ್ನ ಹಣಿಯನ್ನಿಟ್ಟು—

"ಧನ್ಯ! ಧನ್ಯ !! ಸಿಂಧುಲ ರಾಜಕುಮಾರಾ ! ನೀನೇ ಸುಧನ್ಯನು ! ನಿಮ್ಮಲ್ಲಿ ಸಹಜವಾಗಿ ಇರುವ ಔದಾರ್ಯ, ಧೈರ್ಯಗಳು ಅನುಪಮವೂ ಆದರಣೀಯುಳ್ಳವೂ ಆಗಿರುವವು ಮುಂಜರಾಜನ ಮೋಸಗಾರಿಕೆಯ ಕೃತಿಯು ಮೊಟ್ಟಮೊದಲಿಗೆ ನನಗೆ ಗೊತ್ತಾಯಿತು. ಈ ಹೊಲ್ಲದ ಕೆಲಸ ಕೈಕೊಳ್ಳಲು ಆತನು ನನಗೆ ವಿಧಿಸಿದ ಕೂಡಲೇ ಒಪ್ಪಿಕೊಂಡೆನು. ಹಾಗೂ ಅದರಂತೆ ಕಾರ್ಯಪ್ರವೃತ್ತನಾದೆನು. ಮುಖ್ಯವಾಗಿ ಬಾಲರಾಜಾ ! ನಿಮ್ಮ ಪ್ರಾಣರ ಕ್ಷಣೆಯ ಧ್ಯೇಯ ಒಂದನ್ನೇ ಗುರಿಯಾಗಿಟ್ಟುಕೊಂಡು ನಾನು ಈ ರಹಸ್ಯ

ಮಯ ಕಾರ್ಯದ ರೂಪರೇಷೆಯನ್ನು ಲೇಖಿಸಿಕೊಂಡೆನು. ಅದರಂತೆ ಈ ಕ್ಷಣದವರೆಗೂ ನನ್ನ ನಿರ್ಧಾರವನ್ನು ಅಚಲವಾಗಿರಿಸಿಕೊಂಡು ನಿಮ್ಮನ್ನು ರಕ್ಷಿಸಿದೆನು. ಇನ್ನಾದರೂ ನನ್ನ ಜೀವಮಾನದ ವರೆಗೂ ನನ್ನ ಧ್ಯೇಯ ದಿಂದ ಪರಾಙ್ಮುಖನಾಗಲಾರೆನು. ಸಾಂಪ್ರತು ನೀವು ನನ್ನನ್ನು ಬೆಂಬಳಿಸಿ ಪುನ: ಧಾರಾ ನಗರಕ್ಕೆ ಹಿಂತೆಳರಬೇಕು. ನಿಮ್ಮ ಚಿಕ್ಕಪ್ಪನ ಹೃದಯ ಪವಿತ್ರವೂ ಪರಿವರ್ತನೆಯೂ ಆಗುವ ವರೆಗೆ ನೀವು ಇನ್ನಾರೂ ಅರಿಯದಂತೆ ಗೌಪ್ಯವಾಗಿ ನನ್ನ ಮಂದಿರದಲ್ಲಿ ವಾಸ್ತವ್ಯ ಮಾಡಿಕೊಂಡು ಇದ್ದುಬಿಡಬೇಕು. ನಿಮ್ಮ ಬಳಿಯಲ್ಲಿ ಇದಕ್ಕಿಂತಲೂ ಹೆಚ್ಚಿನ ಬೇಡಿಕೆ ನನ್ನದಿರುವದಿಲ್ಲ ಎಂದು ಅಚಲಸಿಂಹನು ತನ್ನ ಹೃದ್ಗತವನ್ನು ಆತನಿಗೆ ನಿವೇದಿಸಿದನು. ಹಾಗು ಅವನನ್ನು ಅತ್ಯಂತ ಪ್ರೇಮದಿಂದ ಆಲಂಗಿಸಿಕೊಂಡನು.

ನಂತರ ಆ ಸ್ವಾಮಿ ಸೇವಕನು ಕಾನನದ ಆ ಶಿವಮಂದಿರದಲ್ಲಿಯೇ ರವಿಯಸ್ತವಾಗುವ ವರೆಗೂ ಕಾಲ ಕಳೆದರು. ಹೊತ್ತು ಮುಳುಗಿ ಮಬ್ಬುಗತ್ತಲೆ ಕವಿಯಿತು. ಇಬ್ಬರೂ ಕುದುರೆಯನ್ನೇರಿಕೊಂಡು ಮನೋವೇಗದಿಂದ ಮಾರ್ಗ ಕ್ರಮಿಸುತ್ತ ಧಾರಾ ನಗರದ ಮಹಾದ್ವಾರಕ್ಕೆ ಬಂದರು.

ಮಧ್ಯರಾತ್ರಿಯು ನಕ್ತ ರಾಕ್ಷಸನ ರಾಜ್ಯದಾಳಿಕೆಯು ಒಳ್ಳೇ ದುರಂಧರವಾಗಿ ನಡೆದಿದೆ. ಕತ್ತಲೆಯು ತನ್ನ ಹುಟ್ಟುವೈರಿಯಾದ ರವಿಯನ್ನು ಹಣೆಯುವದಕ್ಕಾಗಿ ಜೊತೆಗೆ ಆಗಸದ ತಾರೆಗಳ ಬಳಗದೊಂದಿಗೆ ದಿಗ್ವಿಜಯಕ್ಕೆ ಸಾಗಿರುವದೋ ಏನೋ ಎನ್ನುವಂತೆ ಅಂಧಕಾರವು ಮೂಳ್ಮೊನೆ, ಎಳ್ಗೊನೆಗಗಳಲ್ಲೆಲ್ಲ ತುಂಬಿ ವ್ಯಾಪಿಸಿಬಿಟ್ಟಿದೆ. ನಗರದ ರಾಜಬೀದಿ ಮೊದಲ್ಗೊಂಡು ಯಾವ ಓಣಿ ಕೇರಿಗಳಲ್ಲಿ ಲೋಕಸಂಚಾರವೇ ಕಾಡುಬರುತ್ತಿರಲಿಲ್ಲ ಇಂಥ ದುಃಸ್ವಮಯುಕ್ತ ರಾತ್ರಿಯಲ್ಲಿಯೇ ಭೋಜ ಅಚಲಸಿಂಹರು ತಮ್ಮತಮ್ಮ ಅಶ್ವಗಳನ್ನು ಮೆಲ್ಲ ಮೆಲ್ಲನೆ ಸಾಗಿಸುತ್ತ ವಿಧಿಚಲಿತರಾದರು. ತುಸು ವೇಳೆಯಲ್ಲಿಯೇ ಅವರಿಬ್ಬರು ಅಚಲ ಸಿಂಹನ ಮಂದಿರಕ್ಕೆ ಬಂದು ತಲುಪಿದರು. ಒಳಸೇರಿದರು. ಕೂಡಲೇ ಆ ಸರದಾರನು ತನ್ನ ಮನೆಯ ಭೂಗರ್ಭ ನಿಲಯವನ್ನು ಕೇವಲ ಭೋಜರಾಜನಿಗಾಗಿ ಅತ್ಯುತ್ತಮ ರೀತಿಯಿಂದ ವ್ಯವಸ್ಥೆಗೊಳಿ

ಸಿದನು. ನಿತ್ಯದ ಇರುವಿಕೆಗೆ ಸ್ವಲ್ಪ ಸಹ ವ್ಯತ್ಯಯ ಬಾರದಂತೆ ಎಲ್ಲ ವಸ್ತುಗಳನ್ನು ಸಂಗ್ರಹಿಸಿ ಅಲ್ಲಿರಿಸಿದನು. ಭೋಜರಾಜನು ಅಚಲಸಿಂಹನು ತನ್ನ ಪ್ರಾಣಪಾಯ ನೀಗಿಸುವದಕ್ಕೆ ಮಾಡಿದ ವ್ಯವಸ್ಥೆಯನ್ನು ನೋಡಿ ದಂಗಾದನು. ಹಾಗೂ ಅಲ್ಲಿ ಅಂದರೆ ನೆಲಮನೆಯಲ್ಲಿ ನಿಶ್ಶಂಕಿತ ಮನಸ್ಸಿನಿಂದ ಇರಹತ್ತಿದನು.

ರಾಜಮಂದಿರದಲ್ಲಿ ಮುಂಜರಾಜನು "ಭೋಜನು ಯಾರಿಗೂ ಗೊತ್ತಾಗದಂತೆ ಧಾರಾನಗರದಿಂದ ಅಂತರಿಸಿ ದೂರ ದೇಶಕ್ಕೆ ಹೋಗಿರುವನು ಎಂಬುದಾಗಿ ಸುಳ್ಳುಸುದ್ದಿಯನ್ನು ಹಬ್ಬಿಸಿ ಬಿಟ್ಟನು. ಈ ಸುದ್ದಿಯನ್ನು ಪ್ರಸಿದ್ಧ ಮಾಡಿದನಷ್ಟೇ ಅಲ್ಲ, ತನ್ನ ನಿರ್ದೋಷವನ್ನೂ ತಾನು ಭೋಜರಾಜನ ಮೇಲೆ ತೋರಿಸುತ್ತ ಪ್ರೀತಿಯನ್ನೂ ಜಗತ್ತಿಗೆ ತಿಳಿಸುವದಕ್ಕಾಗಿಯೇ ಏನೋ ಎಂಬಂತೆ ರಾಜ್ಯಾಂತರ್ಗತ ಮುಖ್ಯ ಮುಖ್ಯ ನಗರಗಳಿಗೆ ಭೋಜನನ್ನು ಶೋಧಿಸುವದಕ್ಕೆ ಬಹುಜನ ಸೇವಕರನ್ನು ಕಳಿಸಿದನು. ಹೇಗಿದೆ ನೋಡಿರಿ ಮುಂಜನ ಗತ್ತು !

ಭೋಜನು ಅಚಲಸಿಂಹನಿಂದ ಆದರಾತಿಥ್ಯ ಪಡೆಯುತ್ತ ಆವನ ಅಂತರ್ಯದ ಮನೆಯಲ್ಲಿಯೇ ಸ್ವಸ್ಥವಿದ್ದನು.

ಅರಣ್ಯದಿಂದ ಹಿಂತಿರುಗಿ ಧಾರಾ ನಗರಕ್ಕೆ ಬಂದಕೂಡಲೇ ಅಚಲಸಿಂಹನು ಒಂದು ಅಡವೀ ಮೃಗವನ್ನು ತುಂಡರಿಸಿದನು. ಅದರ ಹರಿಯುತ್ತಿರುವ ರಕ್ತದಲ್ಲಿ ಭೋಜರಾಜನ ಒಂದೆರಡು ಅರಿವೆಗಳನ್ನು ಅದ್ದಿ ಸಂಗಡ ತೆಗೆದುಕೊಂಡು ಹೋಗಿ ಏಕಾಂತದಲ್ಲಿ ಮುಂಜರಾಜನ ಮುಂದಿಟ್ಟು ನಿಂತುಕೊಂಡನು. ಮುಂಜನು ಆ ರಕ್ತದ ಅರಿವೆಗಳು ಭೋಜನ ವಸ್ತ್ರಗಳೇ ಎಂದು ಅರಿತನು, ಇಷ್ಟೆ ಅಲ್ಲ ಆ ಸಮಯಕ್ಕೆ ಅವನಿಗುಂಟಾದ ಹರುಷಕ್ಕೆ ಎಣೆಯಿಲ್ಲದಾಯಿತು. ಅದರ ಭರದಲ್ಲಿಯೇ ಅವನು—

"ಶಹಬ್ಬಾಸ್! ಅಚಲಸಿಂಹನೇ! ನಿಜಕ್ಕೂ ನೀನು ಸಿಂಹನೇ ಅಹುದು ಹಾಗೂ ಅಚಲನೂ ಅಹುದು. ಈ ದಿನ ನೀನೇ ನನಗೂ ನನ್ನ ಮುಂದಿನ

ಪೀಳಿಗೆಗೂ ಉಪಯೋಗವಾಗುವದಕ್ಕೆಂದು ಧಾರಾ ರಾಜ್ಯವನ್ನು ದೊರಕಿಸಿ ನೀಡಿದಿ ಎಂದು ನಾನು ಭಾವಿಸುವೆನು. ಎಂದು ಬಲು ಉಲ್ಲಾಸದಿಂದ ಆ ಸರದಾರನನ್ನು ಗೌರವಿಸಿ ಮಾತಾಡಿದನು. ಹಾಗು ಅವನಿಗೆ ಮನವೆಚ್ಚುವಂತೆ ವಸ್ತ್ರಭೂಷಣಗಳನ್ನು ಕೊಟ್ಟು ಸತ್ಕರಿಸಿದನು ಮೊದಲು ತಾನು ವಚನ ಕೊಟ್ಟಿದುದನ್ನು ತಾನೇ ಆ ಸರದಾರನ ಸ್ಮರಣೆಗೆ ತಂದುಕೊಟ್ಟು:— "ಅಚಲಸಿಂಹ ಇನ್ನು ಅಲ್ಪಾವಧಿಯಲ್ಲಿಯೇ ನಿನ್ನನ್ನು ಪ್ರಥಮ ವರ್ಗದ ಸರದಾರರಲ್ಲಿ ಶ್ರೇಷ್ಠನೆಂದು ಭಾವಿಸುವೆನು, ಹಾಗು ಅದಕ್ಕೆ ತಕ್ಕ ಉಂಬಳಿ ಮೊದಲಾದವುಗಳನ್ನು ಕೊಡುವೆನು" ಎಂದು ಅಭಯ ವಚನಗಳನ್ನಿತ್ತೇ ಅವನನ್ನು ಬೀಳ್ಕೊಟ್ಟನು.

ಆಯಿತು. ಮುಂಜುರಾಜನಿಗೆ ಭೋಜನ ಮರಣದಿಂದ ಸಂತೃಪ್ತಿಯಾಯಿತು ಹಾಗು ಭೋಜನು ಅದೆಲ್ಲಿಗೂ ದೇಶಾಂತರಕ್ಕೆ ಹೋಗಿರುವನೆಂದು ಮುಂಜನು ಹುಲುಬಿಸಿದ ವಾರ್ತೆಯಿಂದ ಧಾರಾನಗರದ ನಿವಾಸಿಗಳೆಲ್ಲರೂ ಪರಿತಪ್ತರಾದರು.

ಈ ಮಾತಿಗೆ ಮುಂದೆ ನಾಲ್ಕಾರು ದಿನಗಳು ಕಳೆದವು ಒಂದು ದಿನ ಮುಂಜನು ಏಕಾಕಿಯಾಗಿ ಕುಳಿತಿರುವಾಗ ತನ್ನ ಬಂಧು ಪುತ್ರನ ಮರಣದಿಂದ ರಾಜ್ಯಸೂತ್ರವು ನಿಷ್ಕಂಟವಾಗಿ ನನ್ನ ಪೀಳಿಗೆಗೆ ಸಾಗುವಂತಾಯಿತೆಂದು ಒಳ್ಳೇ ಸಮಾಧಾನಪಟ್ಟನು. ಮರುಕ್ಷಣದಲ್ಲಿಯೇ ಅವನು ತನ್ನ ವಿಚಾರಲಹರಿಯನ್ನು ಮುಂದೆ ಸಾಗಿಸಿ ತನ್ನಲ್ಲಿ— "ಅಯ್ಯೋ! ನಿಷ್ಕಲ್ಮಷ ಬಾಲಕ ಭೋಜನನ್ನು ವಧೆಮಾಡಿಸಿ ಹಿಂಸಾ ದೋಷವನ್ನು ಪದರಿನಲ್ಲಿ ಭದ್ರವಾಗಿ ಬಂಧಿಸಿಕೊಂಡೆನಲ್ಲ. ಈ ಪಾಪವು ನನ್ನಿಂದ ಅದಾವ ಉಪಾಯ ಪ್ರಾಯಶ್ಚಿತ್ತಗಳಿಂದ ದೂರಾಗುವದು? ಹಾಗು ಇದರ ಫಲ_ಪರಿಣಾಮಗಳೇನು? ಎಂದು ತನ್ನಲ್ಲಿ ತಾನೇ ಪ್ರಶ್ನೆ ಕೇಳಿಕೊಳ್ಳುತ್ತ ಉತ್ತರ ಶೋಧಿಸಲು ಆತುರ ಪಡುತ್ತಿರುವಷ್ಟರಲ್ಲಿಯೇ ಅವನ ಈ ಪ್ರಶ್ನೆಗಳ ಎರಡೂ ಉತ್ತರಗಳು ಅವನ ಎದುರಿನಲ್ಲಿ ಥುತ್ತೆಂದು ನಿಂತಂತಾಯಿತು. ಪಾಪ ನಿವಾರಣೆಯು ದೇಹಾಂತ ಪ್ರಾಯಶ್ಚಿತ್ತದಿಂದ ದೂರಾಗುವದೆಂದೂ ಈ ಪಾಪದ ಪರಿಣಾಮವಾಗಿ ಹಿಂಸಾಚಾರಿಯ ವಂಶ ನಿರ್ವಂಶವಾಗುವದೆಂದೂ ಒಮ್ಮೆಲೇ ಅವನ

ಸ್ಮರಣೆಯಿಂದ ಹೊರಬಿದ್ದು ಅವನು ಅತ್ಯಂತ ವ್ಯಾಕುಲತೆಗೆ ಗುರಿಯಾದನು. ಈ ಚಿಂತೆಯೇ ದಿನದಿನವೂ ಅವನನ್ನು ಉದ್ವೇಗಕರವಾಗಿ ಬಾಧಿಸಹತ್ತಿತ. ತತ್ಪರಿಣಾಮವಾಗಿ ಮುಂದೆ ಕೆಲವೇ ದಿನಗಳಲ್ಲಿ ಅವನು ಅಸಹನೀಯ ಬೇನೆಗೆ ಗುರಿಯಾದನು. ಹಾ ಹಾ ಎನ್ನುವಷ್ಟರಲ್ಲಿಯೇ ಅವನಿಗೆ ತನ್ನ ಮರಣ ಕಾಲವು ಸಮೀಪಿಸಿತೆನ್ನುವಂತೆ ಭಾಸವಾಗಹತ್ತಿತು ಆಗ ಅವನು ವಧೆ ಮಾಡಲು ಕಳಿಸಿದ ಅಚಲಸಿಂಹ ಸರದಾರರನ್ನು ಕರೆಯಿಸಿ:— "ಸರದಾರ! ನನ್ನ ಭೋಜ ರಾಜನು ಅಂತ್ಯ ಕಾಲದ ತನ್ನ ನಿರೂಪವನ್ನು ಏನಾದರೂ ತಿಳಿಸಿರುವನೇ?" ಎಂದು ಕೇಳಿದನು ಆಗ ಸರದಾರನು ಭೋಜರಾಜನು ಬರೆದಿದ್ದ ಸಂದೇಶ ಪತ್ರವನ್ನು ಅವನ ಕೈಗೆ ಕೊಟ್ಟನಲ್ಲದೆ ಅವನು ಸಮ್ಮುಖದಿಂದ ಹೇಳಿದ ನಿರೂಪವನ್ನೆಲ್ಲ ಅಕ್ಷರಶ: ಬಿಡದೆ ಹೇಳಿದನು. ಅಚಲಸಿಂಹನು ಹೇಳ ಹೇಳುತ್ತಿರುವಾಗಲೇ ಮುಂಜರಾಜನು ಸ್ಮೃತಿಗೆಟ್ಟು ನೆಲಕ್ಕುರುಳಿದನು. ಅವನು ಬದುಕುವ ಆಸೆಯೇ ಉಳಿಯಲಿಲ್ಲ. ಆಗ ಅವನು ತನ್ನ ಮುಖದಿಂದ ಒಂದೇ ಸವನೆ "ಅಕಟಾ! ನನ್ನ ಚತುರ ಭೋಜ ಕುಮಾರಾ! ಈಗ ನೀನು ನನಗೆ ಅದಾವ ರೀತಿಯಿಂದ ದರ್ಶನ ಕೊಡುವಿ?" ಎಂದು ಉಚ್ಚರಿಸುತ್ತ ಗಡಗಡನೆ ನೆಲದ ಮೇಲೆ ಉರುಳಾಡಹತ್ತಿದನು. ಪಶ್ಚಾತ್ತಾಪಾಗ್ನಿಯಿಂದ ಅವನ ಹೃದಯವು ಒಂದೇ ಸವನೇ ಹುರುಪುಳಿಸಹತ್ತಿತು.

ಮುಂಜರಾಜನ ಸ್ಥಿತಿಯು ಒಮ್ಮೆಲೇ ಪಲ್ಲಟವಾಗಿ ಪ್ರಾಣಾಂತ್ಯಕ ಗುರಿಯಾದುದನ್ನು ಕಂಡು ಅಚಲ ಸಿಂಹನು ತನ್ನಲ್ಲಿ- ಇನ್ನು ಹಿಂದೆ ಮುಂದೆ ನೋಡಿದರೆ ತನ್ನ ಕೆಲಸ ಕೆಟ್ಟು ಘಾತವಾಗುವ ಸಂಭವವುಂಟು. ಈಗಲೇ ನಾನು ಅಪ್ರಕಟೀತನಾಗಿದ್ದ ಭೋಜರಾಜನನ್ನು ಕರೆತಂದು ಇವನಿಗೆ ದರ್ಶನ ಮಾಡಿಸುವದೇ ಸೂಕ್ತ ಮಾರ್ಗವು ಎಂದು ನಿರ್ಧರಿಸಿ ಆಗಲೇ ಹಿಂತಿರುಗಿ ಮಂದಿರಕ್ಕೆ ಬಂದನು. ನೆಲಮನೆಯಲ್ಲಿದ್ದ ಭೋಜರಾಜನಿಗೆ ಮೇಲ್ತರದ ಉಡುಪು ತೊಡಪುಗಳನ್ನು ಹಾಕಿಸಿ ಸಿಂಗರಿಸಿದನು. ಆಗಲೆ ಅವನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಮುಂಜರಾಜನು ಮಲಗಿದ್ದ ಅರಮನೆಗೆ ಬಂದನು.

ಹಾಗೆಯೇ ಭೋಜನನ್ನು ತನನ್ನು ಹಿಂಬಾಲಿಸಿ ಕರೆದೊಯ್ದು ನನಳ ತ್ತ ನೆಲಕ್ಕೆ ಬಿದ್ದಿರುವ ಮುಂಜರಾಜನ ಮುಂನೆ ನಿಲ್ಲಿಸಿ–"ಮಹಾರಾಜಾ! ಕಣ್ತೆರೆಯಿರಿ. ನಿಮ್ಮ ಮೋಹದ ಕುಮಾರ ಭೋಜರಾಜನನ್ನು ನಿರೀಕ್ಷಿಸಿ" ಎಂದು ಉಚ್ಚರಿಸಿ ತಾನು ಒಂದೆಡೆಗೆ ನಿಂತನು.

ಅಚಲಸಿಂಹನ ಮಾತು ಶ್ರವಣಪುಟಕ್ಕೆ ತಾಗಿದ ಕೂಡಲೇ ಬೊಕ್ಕ ಬೋರಲಾಗಿ ಬಿದ್ದಿದ್ದ ಮುಂಜರಾಜನು ತನ್ನ ತಲೆಯನ್ನು ಮೇಲೆತ್ತಿ ಭೋಜನನ್ನು ಕಂಡನು. ನಿಶ್ಶಕ್ತವಾಗಿದ್ದ ತನ್ನ ದೇಹವನ್ನು ಸಾವರಿಸಿಕೊಂಡು ಮೇಲಕ್ಕೆದ್ದು ಮುಂದೆ ಬಂದು ಕುಮಾರ ಭೋಜನನ್ನು ಬಿಗಿಯಾಗಿ ಅಪ್ಪಿಕೊಂಡನು. ತುಂಬಿ ಬಂದ ತನ್ನ ಕಂಠದಿಂದ ಕಣ್ಣೀರು ಸುರಿಸಿ ಆ ಬಾಲಕನ ನೆತ್ತಿಯನ್ನು ತೊಯ್ಯಿಸಿದನು. ಆಗಿನ ಅವರಿಬ್ಬರ ಪುನರ್ಮಿಲನದ ದೃಶ್ಯವನ್ನು ಕಂಡು ಬದಿಯಲ್ಲಿ ನಿಂತು ಅಚಲಸಿಂಹ ಸರದಾರ ಮೊದಲಾದವರ ಕಣ್ಣುಗಳು ಒದ್ದೆಯಾಗದಿರಲಿಲ್ಲ.

ಬಳಿಕ ಮುಂಜರಾಜನು ತನ್ನ ಕರ್ಮದ ಬಗೆಗೆ ಬಾಲಕನಾದರೂ ಆ ಭೋಜರಾಜನಿಂದ ಕ್ಷಮೆಯನ್ನು ಯಾಚಿಸಹತ್ತಿದನು.

ಈ ಪ್ರಸಂಗಕ್ಕೆ ಮುಂದೆ ನಾಲ್ಕಾರು ದಿನಗಳು ಕಳೆದವು ನಂತರ ಮುಂಜರಾಜನು ಭೋಜರಾಜನನ್ನು ಪಟ್ಟಕ್ಕೆ ಕುಳ್ಳಿರಿಸಿ ತಾನೂ ತಪಸ್ಸಿಗಾಗಿ ವನಕ್ಕೆ ತೆರಳಿದನು.

ನಂತರ ಭೋಜರಾಜನು ಅವಂತೀ ನಗರದ ರಾಜಪುತ್ರಿ ಲೀಲಾವತಿ ಎಂಬ ಕುಲವಧುವನ್ನು ಸ್ವಯಂವರದಿಂದ ವರಿಸಿಕೊಂಡು ಧಾರಾ ನಗರಕ್ಕೆ ಬಂದನು. ಬಹು ಚಾತುರ್ಯದಿಂದ ತನ್ನ ರಾಜ್ಯಕಾರಭಾರವನ್ನು ಏನೊಂದು ಕೊಂಕು–ಕೊರತೆಗಳಿಲ್ಲದೆ ಸಾಗಿಸಹತ್ತಿದನು.

ಭೋಜರಾಜನು ಸ್ವಭಾವತಃ ವಿದ್ವಾಂಸನು. ಆದ್ದರಿಂದಲೇ ಅವನ ಆಶ್ರಯವನ್ನು ಬಯಸಿ ದಿಗ್ದೇಶದ ಪಂಡಿತರೂ, ಕವಿಗಳೂ, ವಾಗ್ಮಿಗಳೂ ಬಂದು ಅವನ ದರಬಾರಿನ ಮನ್ನಣೆಗೊಳಗಾಗಿ ಧಾರಾ ನಗರದಲ್ಲಿಯೇ ಚಿರಸ್ಥಾಯಿಯಾಗಿ ಇರಹತ್ತಿದರು.

ಆ ಬಗೆಯಾಗಿಯೇ ಭೋಜರಾಜನ ಸಭೆಯಲ್ಲಿ ಸಮ್ಮಿಲಿತರಾಗಿರುವ ಸನ್ಮಾನ ಪಂಡಿತರಲ್ಲೆಲ್ಲ 'ಕವಿಕುಲ ಮುಕುಟಮಣಿ' ಎನ್ನಿಸಿದ 'ಕಾಳೀದಾಸ' ಕವಿಯು ರಾಜನಿಂದ ಅಗ್ರಸ್ಥಾನವನ್ನು ಪಡೆದನು. ಆ ಮಹಾ ವಿದ್ವದ್ವರ್ಯನ ಚರಿತ್ರೆಯನ್ನೂ ಅವನ ಹಾಗೂ ಭೋಜರಾಜ ಅವರ ನಡುವೆ ನಡೆದ ಸರಸ ಚಾತುರ್ಯ ಬೋಧಕ ಕಥಾಸರಿತ್ಸಾಗರವನ್ನೂ ಇನ್ನು ಮುಂದೆ ಕ್ರಮಶಃ ಬರೆಯುವೆವು.



## ೨. ಕಾಳೀದಾಸನ ಪೂರ್ವ ಚರಿತ್ರೆ

ಇಂದಿಗೂ ನಮ್ಮ ದೇಶಗಳಲ್ಲಿ ಪ್ರಚಲಿತವಿರುವ ಸಂಸ್ಕೃತ ಕಾವ್ಯನಾಟಕಗಳಲ್ಲಿ ರಘುವಂಶ, ಕುಮಾರವ್ಯಾಸ, ಮೇಘದೂತ, ಶಾಕುಂತಲ ಮೊದಲಾದ ಗ್ರಂಥಗಳು ಮೊದಲಿನಿಂದಲೂ ಪಂಡಿತರಿಂದ ಪ್ರಾಶಸ್ತ್ಯ ಪಡೆಯುತ್ತ ಬಂದಿರುವವು. ಇವುಗಳನ್ನು ವಿಕ್ರಮಾದಿತ್ಯನ ಸಮಕಾಲೀನ ವಿದ್ವದ್ವರ್ಯ ಕವಿ ಕಾಳಿದಾಸನೆಂಬ ಕನೋಜಿ ಬ್ರಾಹ್ಮಣನು ವಿರಚಿಸಿದನು. ಅವನೇ ಮಹಾ ಪಂಡಿತ ನಿದರ್ಶಕನು. ಅವನ ಕೀರ್ತಿಯು ಆಸೇತು ಹಿಮಾಚಲ ಪರಿಯಂತವೂ ವ್ಯಾಪಿಸಿದ್ದಲ್ಲದೆ ವಿದೇಶದಲ್ಲಿ ವಿದ್ವಾಂಸರಿಂದ ಹೊಗಳಿಕೆಗೆ ಪಾತ್ರವಾಗಿರುವರು.

ಒಂದಾನೊಂದು ಕಾಲದಲ್ಲಿ ಭಾರತೀಯ ವಿದ್ವಾಂಸರೆಲ್ಲರೂ ಮಿಲಿತರಾಗಿ ತಮ್ಮ ಕಾಲದ ವರೆಗಿನ ಸಂಸ್ಕೃತ ಕವಿಗಳ ಹೆಸರುಗಳನ್ನು ಸೇರಿಸಿ ಕಾವ್ಯರಮಣಿಯೊಬ್ಬಳನ್ನು ನಿರ್ಮಾಣಗೊಳಿಸಿದರು ಆ ಲಲನೆಯ ಒಂದೊಂದು ಅಂತರ್ಬಹಿರಿಂದ್ರಿಯ ಅವಯವಗಳಿಗೆ ಬೇರೆ ಬೇರೆ ಕವಿಗಳ ಹೆಸರುಗಳನ್ನು ರೂಪಿಸಿ ಒಂದೇ ಒಂದಾದ ಶ್ಲೋಕದಿಂದ ಪ್ರಚುರಪಡಿಸದರು. ಆ ಶ್ಲೋಕವದಾವುದೆಂಬುದನ್ನು ಇದರಡಿಯಲ್ಲಿ ಬರೆದಿದೆ.

ಯಸ್ಯಾಶ್ಚೋರ ಚಿಕುರ ನಿಕರೋ ಕರ್ಣಪೂರೋ ಮಯೂರಃ |
ಭಾಸೋಹಾಸಃ ಕವಿಕುಲಗುರು ಕಾಲಿದಾಸೋ ವಿಲಾಸ ||
ಹರ್ಷೋಹರ್ಷಃ ಹೃದಯವಸತಿಃ ಪಂಚ ಬಾಣಸ್ತು ಬಾಣಃ |
ಕೇಷಾನ್ನೈಷಾಂ ಕಥೆಯ ಕವಿತಾ ಕಾಮಿನೀ ಕೌತುಕಾಯ ||

ಈ ಶ್ಲೋಕದಿಂದ ಚೋರ ಮೊದಲಾದ ಸುಪ್ರಸಿದ್ಧ ಸಂಸ್ಕೃತ ಕವಿಗಳ ನಾಮ ನಿರ್ದೇಶಿತವಾಗಿದೆ. ಇವರೆಲ್ಲರಿಂದ ಅನ್ವಯಿಸಿ ವರ್ಣಿಸಲಾಗಿದೆ. ಆ ಕವಿತಾ ಕಾಮಿನಿಯ ಭಾವನೆ ವಿಲಾಸವೆಂದು ಕಾಲಿದಾಸನನ್ನು ರೂಪಿಸಿ ಅವನನ್ನು "ಕವಿಕುಲಗುರು" ಎಂಬ ಅನ್ವರ್ಥಕ ವಿಶೇಷಣದಿಂದ ವಿದ್ವಾಂಸರೆಲ್ಲ ಮರ್ಯಾದಿಸಿ ಮೇಲ್ಪಂಕ್ತಿಯಲ್ಲಿ ಕುಳ್ಳಿರಿಸಿರುವರು.

ಇಂಥ ಮಹಾನ್ ಪಂಡಿತ ಕಾಲಿದಾಸನು ಕವಿ ಶ್ರೇಷ್ಠನಾಗಿ ಧಾರಾನಗರದ ವಿದ್ವದ್ರಾಜ ಭೋಜರಾಜನ ವಿದ್ವತ್ಸಭೆಯ ಅಗ್ರಸ್ಥಾನದಲ್ಲಿ ಅಲಂಕೃತನಾಗಿ ಮೆರೆದನು. ಆ ಕಾಲಿದಾಸನ ಅಖ್ಯಾತಿಕೆಯು ಸುಪ್ರಸಿದ್ಧವಾದುದಾಗಿರುವದು, ಅದೆಂತೆಂದರೆ:—

"ಕಾಲಿದಾಸನು ಕನೋಜೀ ಬ್ರಾಹ್ಮಣನೆಂದ ಮೇಲೆ ಹೇಳಿದೆ. ಇತ್ತಿತ್ತಲಾಗಿ ಕೆಲ ಪಂಡಿತರು ಕಾಲಿದಾಸನು ಮೌಢನಿದ್ದುದರಿಂದ ಅವನು ಕುರುಬನು" ಕಾಲಿದಾಸನಲ್ಲಿ ಕವಿತ್ವ ರಚನೆಯ ಜಾಣ್ಮೆಯಿದ್ದುದರಿಂದ ಅವನು ಗಂಗೆಯ ಮಕ್ಕಳೆನಿಸಿದ ಅಂಬಿಗ ಅಥವಾ ಕಬ್ಬಿಗನು" ಇನ್ನೂ ಕೆಲವರು "ಕಾಲಿದಾಸನು ಚತುರೋಕ್ತಿಗಳನ್ನು ನಿರ್ಮಾಣಗೊಳಿಸಿ ವಿಶ್ವವಂದ್ಯ ಕವಿಯಾದುದರಿಂದ ವಿಶ್ವಕರ್ಮನು "ಹೀಗೆ ಬೇರೆ ಬೇರೆ ಪಂಡಿತರು ಕಾಳಿದಾಸನ ಬಗೆಗೆ ಮತಭಿನ್ನತೆಯಿಂದ ಅವನನ್ನು ತಮತಮಗೆ ಸರಿಕಂಡ ಜಾತಿಗೆ ಎಳೆದೊಯ್ದಿರುವರು.

ಸಾವಿರ ವರುಷಗಳ ಹಿಂದಿನ ಮಾತು. ಕಾಲಿದಾಸನ ಗ್ರಂಥಗಳಲ್ಲಿ ಅವನು ತನ್ನ ಜಾತಿ ಕುಲಾದಿಗಳ ಮತ ಭೇದ ಗೊಂದಲಕ್ಕೆ ಬೀಳದೆ ಅವನು ಕನೋಜೀ ಬ್ರಾಹ್ಮಣನೆಂದರಿತೇ ಇನ್ನು ಮುಂದೆ ಅವನ ಚರಿತ್ರೆಯನ್ನು ನಿರೀಕ್ಷಿಸೋಣ.

"ಭೋಜರಾಜನ ಸಮಕಾಲೀನ ವಂಗದೇಶವು ಅಸ್ತಿತ್ವದಲ್ಲಿದ್ದಿತು. ಆ ದೇಶದ ಅಧಿಪತಿಗೆ "ಇಂದುಮತಿ" ಎಂಬ ಓರ್ವ ಸುಸ್ವರೂಪಿಣಿಯಾದ ಮಗಳಿದ್ದಳು. ಆಕೆ ಮದುವೆಗೆ ತಕ್ಕ ವಯಸ್ಸಿನಲ್ಲಿ ಬರಲು ಯೋಗ್ಯ ವರನನ್ನು ಶೋಧಿಸುವದಕ್ಕಾಗಿ ರಾಜನು ವೃದ್ಧ ಮಂತ್ರಿಯನ್ನು ದಿಗ್ದೇಶಗಳಿಗೆ ಕಳಿಸಿದನು. ಆತನು ಸುತ್ತಾಡಿ ಸುತ್ತಾಡಿ ತಂದ ಯಾವ ವರನೂ ಆ ರಾಜಪುತ್ರಿಯ ಮನಸ್ಸಿಗೆ ಬರಲಿಲ್ಲ. ಒಂದು ವೇಳೆ ಅವನ ಮನ ಒಪ್ಪುವಂಥವರು ದೊರಕಿದರೂ ಕುಲ ಶೀಲ ಯೋಗ್ಯತೆಯ ದೃಷ್ಟಿಯಲ್ಲಿ ಆಕೆಯ ತಾಯ್ತಂದೆಗಳು ನಿರಾಕರಿಸಿ ಬಿಡುತ್ತಿದ್ದರು. ಹೀಗಾಗಿ ಎಷ್ಟೋ ದಿನಗಳವರೆಗೂ ಆಕೆಗೆ ವರವೇ ಗೊತ್ತಾಗಲಿಲ್ಲ

ಇದಕ್ಕೂ ಮೊದಲೇ ಆ ವೃದ್ಧ ಮಂತ್ರಿಯ ಮಗನು ಇಂದುಮತಿಯನ್ನು ತಾನು ವರಿಸುವ ಇಚ್ಛೆಯನ್ನು ಅವಳೆದುರು ವ್ಯಕ್ತಪಡಿಸಿ ನಿರಾಶೆಗೊಂಡಿದ್ದನು. ಆಕೆ ಅವನನ್ನು ಕುರಿತು—ನೀನು ಚೆಲುವನಿರುವಿ, ಜಾಣನಿರುವಿ, ಸುಪರಿಚಿತನಿರುವಿ, ನನಗೆ ಸರಿಸಮಾನ ವಿದ್ಯಾವಂತನಿರುವಿ, ಆದರೆ ನಿನ್ನ ತಂದೆಯು ನನ್ನ ತಂದೆಯ ಸೇವಕನು ಆ ಸೇವಕನ ಮಗನಾದ ನಿನ್ನನ್ನು ನಾನು ಯಾವ ಬಗೆಯಿಂದಲೂ ವರಿಸಲಾರೆನು. ಒಂದು ವೇಳೆ ನೀನು ಅತ್ಯಾಗ್ರಹ ತೋರಿದ್ದಾದರೆ ನನ್ನ ತಂದೆಯಿಂದ ನಿನ್ನನ್ನು ಉಗ್ರ ಶಿಕ್ಷೆಗೊಳಪಡಿಸುವೆನು. ಎಂದು ಬೆದರಿಕೆಯನ್ನು ಬೀರಿಬಿಟ್ಟಳು. ಆದ್ದರಿಂದ ಆ ಮಂತ್ರಿ ಪುತ್ರನು ನಿರುಪಾಯನಾಗಿ ಆಕೆಯನ್ನು ವರಿಸುವ ತನ್ನ ಹವ್ಯಾಸದಿಂದ ಹೊರತಾದನು. ಆದರೂ ಆಕೆಯು ತನಗಾಡಿದ ಸೇವಕನ ಮಗನು ಎಂಬೊಂದು ಮಾತಿನಿಂದಲೇ ಅವನು ತನಗೆ ಅವಮಾನವಾಯಿತೆಂದು ಭಾವಿಸಿದನು. ಹಾಗು ಅದರ ಪರಿವರ್ತಾರ್ಜನೆಯನ್ನು ಏನೊಂದು ಬಗೆಯಿಂದ ಮಾಡಿ ಸೇಡು ತೀರಿಸಿಕೊಳ್ಳುವ ಸಮಯ ಕಾಯುತ್ತಲಿದ್ದನು. ಇದೀಗ ಮಾತ್ರ ಅವಳಿಗೆ ಎಲ್ಲಿಯೂ ವರನು ಗೊತ್ತಾಗದಿರುವದನ್ನರಿತು ಅವನು ತನ್ನ ವಿಚಾರದಿಂದ ಒಂದು ಕುಹಕ ಯುಕ್ತಿಯನ್ನು ಕಂಡುಕೊಂಡನು. ಅದಾವುದೆಂದರೆ —

"ಒಂದು ದಿನ ಮಂತ್ರಿ ಪುತ್ರನು ತನ್ನ ತಂದೆಯನ್ನು ಏಕಾಂತದಲ್ಲಿ ಕಂಡು—ತಾತ! ರಾಜಪುತ್ರಿ ಇಂದುಮತಿಯಿಂದ ನನಗೆ ಅಸಹ್ಯವಾದ ಅಪ

ಮಾನವಾಗಿದೆ ಈ ಅಪವಾದದ ಪರಿಮಾರ್ಜನೆಯು ದರಬಾರಿನಲ್ಲಿ ಪ್ರವೇಶವಿರದ ನನಗೆ ಅಸಾಧ್ಯವಾಗಿದೆ. ರಾಜಪುತ್ರಿಗೆ ವರ ಶೋಧಿಸುವ ಮುಕ್ತಾರ್ಯವನ್ನು ರಾಜನು ನಿಮಗೆ ಒಪ್ಪಿಸಿರುವೆನು. ನಿಮ್ಮ ಮನಬಂದ ವರನನ್ನು ರಾಜನು ತಿರಸ್ಕರಿಸಲಿಕ್ಕಿಲ್ಲವೆಂದು ನನಗೂ ಮನದಟ್ಟಾಗಿದೆ ಆದ್ದರಿಂದ ನೀವು ಇನ್ನೊಂದು ಬಾರಿ ರಾಜಾಜ್ಞೆ ಪಡೆದು ವರಶೋಧನೆಗೆ ಹೋಗಿರಿ ಎಲ್ಲ ದೃಷ್ಟಿಯಿಂದಲೂ ಹೀನಾಯನಾಗಿದ್ದ ವರನನ್ನು ತಂದು ಇಂದುಮತಿಯೊಡನೆ ಮದುವೆ ಮಾಡಿಸಿರಿ. ಇದರಲ್ಲಿ ನೀವು ನಿಮಗೆ ಸರಿಕಂಡಂತೆ ಕೃತಕ ಮೋಸ ಸುಳ್ಳುಗಳನ್ನು ಅವಲಂಬಿಸಿದರೂ ಅದೇನು ನಮಗಾದ ಅವಮಾನಕ್ಕಿಂತ ಹೆಚ್ಚಿನದಲ್ಲ. ವರ ಶೋಧನೆಯಲ್ಲಿ ಒಂದು ವೇಳೆ ಆಕೆಗೆ ಯೋಗ್ಯ ವರನು ನಿಮಗೆ ಕಂಡು ಬಂದರೂ ನೀವು ಧಿಕ್ಕರಿಸಿ ಮೂರ್ಖವರನನ್ನೇ ಗೊತ್ತುಮಾಡಿರಿ. ಜಾತಿ, ಕುಲ, ಗುಣಶೀಲ, ವಿದ್ಯೆ ಬುದ್ಧಿ ಇವಾವುದನ್ನೂ ವಿಚಾರಿಸಬೇಡಿರಿ ಎಲ್ಲ ಬಗೆಯಿಂದಲೂ ವರನು ಅವಲಕ್ಷಣನಾಗಿಯೇ ಇರಬೇಕು. ತಾತ! ತಾವು ಇಷ್ಟೊಂದು ಮಾಡಿದರೆ ನನ್ನ ಹೃದಯದ ತಳಮಳಿಕೆ ಶಾಂತವಾಗುವದು. ಹಾಗು ಆ ರಾಜಪುತ್ರಿಯು ನಮ್ಮ ವಂಶವನ್ನೇ ಕೀಳ್ತರನೆಂದು ನುಡಿದು ಅವಮಾನಗೊಳಿಸಿದ ಕಳಂಕ ದೂರಾಗುವದು. ತಾತ! ಇನ್ನು ಕೊನೆಯದಾಗಿ ತಮಗೆ ಬಿನ್ನೈಸುವದೇನೆಂದರೆ ನನ್ನ ಮನೋಭಿಲಾಷೆಯಂತೆ ನೀವು ಪ್ರಯತ್ನ ಮಾಡದಿದ್ದರೆ ನಿಮ್ಮ ಮಗನಾದ ನನ್ನ ಇಹಲೋಕಯಾತ್ರೆಯು ಮುಕ್ತಾಯವನ್ನು ಕಾಣುವ ದುಷ್ಟಯೋಗವನ್ನು ತಂದುಕೊಳ್ಳಬಾರದು. ನನ್ನ ನಿಶ್ಚಯವು ಯಾವಾಗಲೂ ದೃಢವೆಂಬುದನ್ನು ನಿಮಗೆ ಈ ಮೊದಲು ಹಲವು ಬಾರಿ ಅನುಭವಕ್ಕೆ ತಂದುಕೊಟ್ಟಿರುವೆನು. ಎಂದು ಹೇಳಿ ಸುಮ್ಮನಾದನು.

ಮಗನ ನಿರ್ವಾಣಯುಕ್ತ ನುಡಿಗಳನ್ನು ಕೇಳಿ ವೃದ್ಧ ಮಂತ್ರಿಯು ಒಳ್ಳೆ ವಿಚಾರಕ್ಕೊಳಗಾದನು. ತನಗೆ ಏಕಮೇವ ಪುತ್ರನಾದುದರಿಂದ ಅವನ ಮಾತನ್ನು ಮೀರುವದು ಅವನಿಗೆ ಅಸಾಧ್ಯವೆನ್ನಿಸಿತು. ಇನ್ನು ರಾಜನ ಮನಸ್ಸನ್ನು ಒಪ್ಪುವಂಥ ವರನನ್ನು ಶೋಧಮಾಡಿಕೊಂಡು ಬರ

ಲಿಕ್ಕೇಬೇಕು. ಇನ್ನೇನು ಮಾಡಲಿ ಈ ವಿಚಾರದೊಳಗೇ ಅಂದಿನ ಇರುಳನ್ನು ಕಣ್ಣಿಗೆ ಕಣ್ಣು ಹಚ್ಚದೆ ನೂಕಿದನು.

ಎಂದಿನಂತೆ ಮರುದಿನ ವರಶೋಧನೆಗಾಗಿ ಹೋಗುವದಕ್ಕೆ ಮಂತ್ರಿಗೆ ರಾಜಾಜ್ಞೆಯಾಯಿತು. ಕೂಡಲೇ ಅವನು ತಾನೊಬ್ಬನೇ ಪ್ರಯಾಣ ಬೆಳೆಸಿದನು. ಮಾರ್ಗದಲ್ಲಿ ಅವನು ತನ್ನ ಮಗನು ಹೇಳಿದಂಥ ವರನನ್ನು ಶೋಧಿಸಬೇಕೇ? ಇಂದುಮತಿಗೆ ತಕ್ಕ ವರನನ್ನು ಶೋಧಿಸಬೇಕೇ? ಇವೇ ಎರಡು ವಿಚಾರ ಪ್ರಶ್ನೆಗಳ ಉತ್ತರವನ್ನು ಹುಡುಕುತ್ತ ನಡೆದನು. ಯಾವುದಕ್ಕೂ ಅವನ ಮನದ ನಿರ್ಧಾರವಾಗಲಿಲ್ಲ. ಕಟ್ಟಕಡೆಗೆ ತನ್ನ ಮಗನ ವಿಚಾರಕ್ಕೆ ಸೋತು ಮುಂದೆ ಮಾರ್ಗ ಕ್ರಮಿಸಿದನು. ಸಂಜೆಗೆ ಒಂದೂರಿನಲ್ಲಿ ವಸತಿ ಮಾಡಿದನು.

ಮಾರನೆಯ ದಿನ ಮತ್ತೆ ಮುಂದೆ ಸಾಗಿದನು. ಒಂದು ಅರಣ್ಯದ ಮಾರ್ಗದಿಂದ ಹೋಗುತ್ತಿರುವಾಗ ತನ್ನ ಮಗನು ಹೇಳಿದ ಲಕ್ಷಣಗಳುಳ್ಳ ಒಬ್ಬ ಕಟ್ಟಿಗೆ ಕಡಿಯುವ ಯುವಕನನ್ನು ಆತನು ಕಂಡನು. ಆ ಯುವಕನು ಒಂದು ಮರದ ಟೊಂಗೆಯ ತುದಿಯಲ್ಲಿ ನಿಂತು ತನ್ನ ಕೋಲಿನಿಂದ ಅದರ ಕೆಳಟೊಂಗೆಯನ್ನು ಕಡಿಯುತ್ತಿದ್ದನು. ಮಂತ್ರಿಯು ಅವನ ಹುಚ್ಚತನದ ಕೃತಿಯನ್ನು ನೋಡಿ ನಗುತ್ತ ಅವನ ಬಳಿಗೆ ಹೋದನು. ಅವನು ಆ ಯುವಕನನ್ನು ಕುರಿತು — ಎಲೋ ನೀನು ಇದೇನು ನಡೆಸಿರುವಿ? ತುದಿಯ ಮೇಲೆ ಕುಳಿತು ಟೊಂಗೆಯನ್ನು ಕಡಿಯುವ ನೀನು ಕೆಳಕ್ಕೆ ಬೀಳುವ ಅರಿವು ನಿನಗಿಲ್ಲವೇ? ಈ ವಿಚಾರ ನಿನಗೇಕೆ ಹೊಳೆಯಲಿಲ್ಲ? ಎಂದೆನ್ನಲು ಆ ಯುವಕನು ತನ್ನನ್ನು ಮಾತನಾಡಿಸುವ ಮಂತ್ರಿಯನ್ನು ನೋಡಿ ಆ ಮರದಲ್ಲಿಂದಲೇ —ಮಹಾರಾಜ! ಬುದ್ಧಿಪೂರ್ವಕವಾಗಿ ನಾನು ಈ ಮರದ ಮೇಲಿನಿಂದ ಕೆಳಕ್ಕೆ ಬೀಳುವ ಉದ್ದೇಶದಿಂದಲೇ ಈ ಕೆಲಸ ಕೈಕೊಂಡಿರುವೆನು. ಯಾಕೆಂದರೆ ಈ ಟೊಂಗೆಯಿಂದ ಮೇಲೇರಿ ಬರುವದು ಬಲು ಸುಲಭವಾಯಿತು. ಈಗ ನನಗೆ ಕೆಳಗಿಳಿಯಲು ಸಾಧ್ಯವಾಗದುದರಿಂದ ಹೀಗೆ ಟೊಂಗೆಯನ್ನು ತುಂಡರಿಸುತ್ತಿರುವೆನು. ನಾನು ಕಾಯುತ್ತಿರುವ ಕುರಿ ಆಡುಗಳು ಕಣ್ತಪ್ಪಿಸಿ ದೂರ ಹೋಗುವದರಿಂದ ಅವುಗಳನ್ನು

ನೋಡುವದಕ್ಕಾಗಿ ಈ ಮರವನ್ನೇರಿವೆನು. ಈ ಜೊತ್ತೆ ಬಿದ್ದ ಕೂಡಲೇ ನಾನು ಅನಾಯಾಸವಾಗಿ ಅದರೊಡನೆ ಕೆಳಗೆ ಬೀಳುವೆನು. ಕೂಡಲೇ ಅಲ್ಲಿಂದ ಎದ್ದು ಓಡಿ ಹೋಗಿ ದೂರದಲ್ಲಿಯು ಹೊಲದಲ್ಲಿ ಮೇಯುತ್ತಿರುವ ನನ್ನ ಕುರಿ--ಆಡುಗಳನ್ನು ತಿರುವಿಕೊಂಡು ಬರುವೆನು ಎಂದು ಹೇಳಿದನು.

ಈ ಪ್ರಕಾರ ಯುವಕನು ನುಡಿದ ಮಾತುಗಳನ್ನು ಕೇಳಿ ಮಂತ್ರಿಯು ಅವನ ಮೂರ್ಖತನಕ್ಕೆ ನಕ್ಕನು. ಹಾಗೂ ಅವನ ಮುಖಚರ್ಯೆ--ಲಕ್ಷಣ ಗಳಿಂದ ನಿಜವಾಗಿಯೂ ಇವನು ಮೂರ್ಖ ಶಿರೋಮಣಿಯಾಗಿರುವನೆಂದು ನಿಶ್ಚಯಿಸಿದನು ಅವನು ಆಗಲೇ ತನ್ನ ಸೇವಕರಿಂದ ಆ ಯುವಕನನ್ನು ಮರದಿಂದ ಕೆಳಗಿಳಿಸಿಕೊಂಡನು. ಆತನ ಕುರಿ ಆಡುಗಳನ್ನು ಹೊಲದಿಂದ ತಿರುವಿಸಿ ತರಿಸಿದನು. ಬಳಿಕ ಮಂತ್ರಿಯು ಆ ಯುವಕನ ಜೊತೆ ಸೇರಿ ಅವನ ಮನೆಗೆ ಹೋದನು. ಮನೆಯಲ್ಲಿದ್ದ ಅವನ ತಂದೆಯನ್ನು ಕುರಿತು ಕೆಲವು ಪ್ರಶ್ನೆಗಳನ್ನು ಮಾಡಿ ಆ ಯುವಕನ ಸಂಬಂಧವಾಗಿರುವ ಸಂಗತಿ ಗಳನ್ನೆಲ್ಲ ಅರಿತುಕೊಂಡನು. ಆ ಯುವಕನು ಬ್ರಾಹ್ಮಣನ ಮಗನೆಂಬುದೂ, ಅವನು ಬುದ್ಧಿಗೇಡಿಯಾದುದರಿಂದ ತಂದೆ ತಾಯಿಗಳಿಂದ ತಿರಸ್ಕೃತನಾಗಿ ಕೇವಲ ದನ ಕುರಿ ಆಡುಗಳನ್ನು ಕಾಯುತ್ತಿರುವನೆಂದೂ ಆ ಮಂತ್ರಿಗೆ ಗೊತ್ತಾಯಿತು. ಬಳಿಕ ಮಂತ್ರಿಯು ಆ ಯುವಕನ ತಂದೆ ತಾಯಿಗಳಿಗೆ ಹೇಳಿ ಅವನನ್ನು ತನ್ನ ಜೊತೆಗೆ ಕರೆದುಕೊಂಡು ಹಿಂದುರಿಗಿದನು. ತನ್ನ ಮನೆಗೆ ಕರೆದೊಯ್ದು ಆ ಯುವಕನಿಗೆ ರಾಜಕುಮಾರನಂತೆ ವರ್ತಿ ಸುವದಕ್ಕೆ ಕಲಿಸಿದನು. ಆ ಮೇಲೆ ಅವನ ಸೇವೆಗಾಗಿ ನಾಲ್ವರು ಸೇವಕ ರನ್ನು ನಿಯಮಿಸಿದನು. ಮತ್ತು "ನಾನು ಬ್ರಹ್ಮ ದೇಶದ ರಾಜಪುತ್ರ"- ನೆಂದು ಕೇಳಿದವರಿಗೆ ಹೇಳುವಂತೆ ತಿಳಿಸಿದನು. ಇಷ್ಟೆಲ್ಲ ಬಗೆಯಿಂದ ಮಂತ್ರಿಯು ಅವನನ್ನು ತರಬೇತುಗೊಳಿಸಿದ ನಂತರ ಅವನನ್ನು ಹಾಗೆಯೇ ಅರಮನೆಗೆ ಕರೆದೊಯ್ದು--"ರಾಜನ್! ಇವನೇ ನಿಮಗೆ ತಕ್ಕ ಅಳಿಯನಾಗುವನು. ಇವನು ಬ್ರಹ್ಮದೇಶದ ರಾಜಪುತ್ರನು, ಇದು ವರೆಗೆ ಶೋಧೆಯಲ್ಲಿ ನಾವು ನೋಡಿದ ಎಲ್ಲ ವರಗಳಲ್ಲಿ ಇವನೇ ಲಕ್ಷಣವಂತ ನೆಂದು ನನ್ನ ಅಭಿಪ್ರಾಯವಿದೆ" ಎಂದು ಹೇಳಿದನು. ರಾಜನು ವರನ

ಸುಸ್ವರೂಪವನ್ನು ನೋಡಿ ಬಲು ಆನಂದಪಟ್ಟನು. ವಸ್ತು ಆಗಲೇ ಲಗ್ನದ ಸಿದ್ಧತೆ ಮಾಡಿದನು. ಮರುದಿನ ಶುಭಮುಹೂರ್ತದಲ್ಲಿ ವಿಧಿ ಪೂರ್ವಕ ಮದುವೆ ಮಾಡಿಯೇ ಬಿಟ್ಟನು.

ಬಳಿಕ ಒಂದು ದಿನ ರಾತ್ರಿಯಲ್ಲಿ ಆ ಯುವಕನನ್ನು ರಾಜಕನ್ಯೆಯ ಮಂದಿರಕ್ಕೆ ಕಳಿಸಿದನು. ಅವನು ಅಲ್ಲಿಗೆ ಹೋಗಿ ನೋಡುತ್ತಾನೆ. ಯಾರೂ ಇದ್ದಿರಲಿಲ್ಲ. ಆದರಿಂದಾಗಿ ಅವನು ಬೆದರಿ ಕಕ್ಕಾವಿಕ್ಕಿಯಾಗಿ ಅತ್ತಿತ್ತ ನೋಡಹತ್ತಿದನು. "ನಾನು ಇನ್ನೇನು ಮಾಡಬೇಕು?" ಇದೇ ವಿಚಾರವು ಅವನ ತಲೆಯಲ್ಲಿ ಸುತ್ತಾಡಹತ್ತಿತು. ಅಂದಿನ ದಿನವೆಲ್ಲ ಪ್ರಸ್ತ ಸಮಾರಂಭದ ಗಡಿಬಿಡಿಯಲ್ಲಿ ಕಳೆದು ಹೋಯಿತು. ನಿದ್ದೆಯು ಬಂದು ಅವನನ್ನು ಬಾಧಿಸಹತ್ತಿತು. ಬಡಬ್ರಾಹ್ಮಣನ ಪುತ್ರನಾದ ಅವನು ಮೌಢ್ಯನಾಗಿದ್ದುದರಿಂದ ಆ ಮಂದಿರದ ಐಶ್ವರ್ಯ ನೋಡಿ ಬೆರಗಾದನು. ಅಲ್ಲಿ ಅವನಿಗೆ ಮಲಗಿಕೊಳ್ಳುವದಕ್ಕಾಗಿ ಹಂಸತೂಲಿಕಾತಲ್ಪವನ್ನು ಹಾಸಿದ ಶಯ್ಯೆಯು ಸಿದ್ಧವಾಗಿದ್ದಿತು. ಈ ಬ್ರಾಹ್ಮಣ ಪುತ್ರನು ಅದರ ಮೇಲೆ ಪವಡಿಸಲಿಲ್ಲ. ಆ ಮಂದಿರದ ಒಂದು ಮೂಲೆಯಲ್ಲಿ ಸೇರಿ ತನ್ನ ತಲೆಗೆ ಸುತ್ತಿದ್ದ ರುಮಾಲನ್ನು ತಲೆದಿಂಬಾಗಿ ಇಟ್ಟುಕೊಂಡು ಮಲಗಿದನು. ಕೂಡಲೇ ಅವನಿಗೆ ಸುಖ ನಿದ್ರೆಯು ಪ್ರಾಪ್ತವಾಯಿತು. ನಿದ್ದೆ ಹತ್ತಿದ ಕೂಡಲೇ ಅವನು ಘೋರ ಸಪ್ಪಳದಿಂದ "ಗುರ್--ಗುರ್" ನಿದ್ದೆ ಮಾಡಹತ್ತಿದನು. ಆ ಸಪ್ಪಳವನ್ನು ಇನ್ನೊಬ್ಬರು ಕೇಳುವದಕ್ಕೂ ಕೂಡ ಭಯವೆನಿಸುವಂತಿದ್ದಿತು

ಅಷ್ಟರಲ್ಲಿ ರಾಜಪುತ್ರಿ ಇಂದುಮತಿಯು ಶೃಂಗಾರ ಸಾಹಿತ್ಯದೊಡನೆ ಬಂದು ತನ್ನ ಆ ಮಂದಿರವನ್ನು ಸೇರಿದಳು. ಒಳಗೆ ಪ್ರವೇಶಿಸಿ ನೋಡುತ್ತಾಳೆ ಆದರೆ ತನ್ನ ಪತಿಯ ದರ್ಶನವೇ ಆಗಲಿಲ್ಲ. ಕೈಯಲ್ಲಿ ಪಂಚಾರತಿಯನ್ನು ಎತ್ತಿಕೊಂಡು ಮಂದಿರದ ಎಲ್ಲ ಕಡೆಯಲ್ಲಿ ಶೋಧಿಸಿ ಬೇಸತ್ತಳು "ಇದೇನು ಕೌತುಕ?" ಎಂದು ಅವಳು ವಿಚಾರ ಮನಸ್ಕಳಾಗಿ ಕುಳಿತಿರುವಾಗ ಒಂದು ಮೂಲೆಯಲ್ಲಿ ಮಲಗಿ ಗೂರ್ ಗೊರ್ ನಿದ್ದೆ ಮಾಡುತ್ತಿದ್ದ ಪತಿಯ ನಿದ್ದೆಯ ಸಪ್ಪಳ ಕೇಳಿದಳು. ಹಾಗು ಅವನ ಹತ್ತಿರ ಹೋಗಿ

ಸಿಂತಳು. ಸೂಕ್ಷ್ಮಾವಲೋಕನದಿಂದ ಆಕೆ ಅವನನ್ನು ನಿರೀಕ್ಷಿಸಿ—ಈತನು ನಿಜವಾಗಿಯೂ ಮಹಾಮೂರ್ಖನಿರುವಂತೆ ತೋರುವದು ಎಂದರಿತಳು ಅವನ ಆ ಸ್ಥಿತಿಯನ್ನು ನೋಡಿ ನಿರಾಶೆಗೊಂಡಳು ಇನ್ನು ಆ ಜನ್ಮಪರ್ಯಂತವೂ ನಾನು ದುಃಖಿತೆಯು ಎಂದು ಅವಳ ದೃಢ ಕಲ್ಪನೆಯಾಯಿತು. ಈ ವಿಚಾರದಲ್ಲಿ ಕೆಲ ನಿಮಿಷ ಕಳೆದ ನಂತರ ಅವಳಲ್ಲಿ—"ಇವನಾವ ಜಾತಿಯವ ನಿರಬಹುದು? ಎಂಬ ಸಂಶಯಿತ ಪ್ರಶ್ನೆ ಉದ್ಭವಿಸಿತು. ಇದನ್ನು ತಿಳಿದು ಕೊಳ್ಳುವದಕ್ಕಾಗಿ ಆಕೆಯು ಅವನನ್ನು ನಿದ್ದೆಯಿಂದ ಪರಾಙ್ಮುಖನನ್ನಾಗಿ ಮಾಡುವದಕ್ಕೆ ಯತ್ನಿಸಿದಳು. ಅವಳ ಪನ್ನೀರು, ಸುಗಂಧ ದ್ರವ್ಯಾದಿ ಗಳನ್ನು ಅವನ ಮೇಲೆ ಪ್ರೋಕ್ಷಿಸಿ ಪ್ರಬೋಧ ಸ್ಥಿತಿಗೆ ತರುವ ಸೂಕ್ಷ್ಮ ವಿಚಾರ ಮಾಡಿದಳು. ಆದರೂ ಆ ಬ್ರಾಹ್ಮಣ ಪುತ್ರನು ಎಚ್ಚರಗೊಳ್ಳಲಿಲ್ಲ ಅವಳು ಇಷ್ಟಕ್ಕೇ ಬಿಡದೇ ಮೈಮೇಲೆ ಹೊದೆದುಕೊಂಡಿದ್ದ ಅವನ ವಸ್ತ್ರವನ್ನು ಹಿಡಿದೆಳೆದಳು. ಈ ಉಪಾಯದಿಂದ ಅವನು ಕಣ್ಣೊರಸಿಕೊಳ್ಳುತ್ತ ಎದ್ದು ಕುಳಿತನು. ದಂಗು ಬಡಿದವನಂತೆ ಸುತ್ತ ಮುತ್ತಲೂ ನೋಡ ಹತ್ತಿ ದನು. ಕೈಯಲ್ಲಿ ಪಂಚಾರತಿಯನ್ನು ಹಿಡಿದುಕೊಂಡು ತನ್ನೆದುರು ನಿಂತಿದ್ದ ರಾಜಪುತ್ರಿಯನ್ನು ನೋಡಿ ಬೆಚ್ಚಿ ಗದಗದನೆ ನಡುಗಹತ್ತಿದನು. ರಾಜ ಪುತ್ರಿಯು ಅವನ ಸ್ಥಿತಿಯನ್ನು ಕಂಡು—"ಎಲೈ ನೀನಾರು? ಆವಾವ ಊರಿನವನು? ನಿನ್ನ ಜಾತಿ ಯಾವದು." ಎಂದು ಇತ್ಯಾದಿ ಹಲವು ಪ್ರಶ್ನೆ ಗಳನ್ನು ಮಾಡಿದರೂ ಒಂದಕ್ಕೂ ಸಹ ಉತ್ತರ ಕೊಡಲಿಲ್ಲ ಅವನು ಅಂಜಿರ ಬಹುದೆಂಬ ಭಾವನೆಯನ್ನು ತಾಳಿ ಅವಳು ಅವನ ಹೊಂದಿಕೆಯಲ್ಲಿಯೇ ಕುಳಿತು ಅವನೊಡನೆ ಮೃದು ನುಡಿಗಳನ್ನಾಡಿ ಮಾತನಾಡುವ ಹಾಗೆ ಪ್ರಯ ತ್ನಿಸಿದಳು. ಗೋಡೆಯ ಮೇಲೆ ಲೇಖಿಸಿದ ಅನೇಕ ಚಿತ್ರ—ಗೊಂಬೆಗಳನ್ನು ಅವನಿಗೆ ತೋರಿಸಿ ಪ್ರತಿಯೊಂದರ ಬಗೆಗೆ ಸಾದ್ಯಂತವಾಗಿ ಬಣ್ಣಿಸಿ ಹೇಳಿದಳು. ಸಕಲ ಲೋಕಗಳುಳ್ಳ ನಕ್ಷೆ ಅಲ್ಲಲ್ಲಿಯ ಪ್ರಾಣಿ ವನಸ್ಪತಿಗಳ ಚಿತ್ರಗಳನ್ನು ತೋರಿಸಿದಳು ಆರ್ಯಾವರ್ತದ ದೇಶಗಳ ರಾಜಪುತ್ರರ ತಸವೀರುಗಳನ್ನು ಅವನ ಕಣ್ಣೆದುರು ಹಿಡಿದು ಅವರವರ ಸಂಬಂಧದ ಚಿಕ್ಕ ಚರಿತೆಗಳನ್ನು ಹೇಳಿದಳು. ಇಷ್ಟೆಲ್ಲ ಪ್ರತಿಪ್ರಯೆಗಳನ್ನು ಅವಳು ಮಾಡಿದರೂ ಅವನ ಮನೋಭಾವನೆಯೂ ಇತಿವೃತ್ತವೂ ಹಾಗು ಅವನ ಜಾತಿ ಕುಲಗಳೂ ಇವಾವೂ ಅವಳಿಗೆ ತಿಳಿದ್ಯ

ಬರಲಿಲ್ಲ. ಅದರಿಂದ ಅವಳು ಔದಾಸೀನ್ಯ ವ್ಯಕ್ತಗೊಳಗಾದಳು. ಆದರೂ ಆಕೆ ಕೊನೆಗೆ ಅವನಿಗೆ ದಶಾವತಾರ ಚಿತ್ರಗಳನ್ನು ತೋರಿಸಿ ಒಂದೊಂದು ಅವತಾರದ ಮಾಹಾತ್ಮ್ಯ ಕಥೆಗಳನ್ನು ಬೋಧಿಸಿದಳು. ಕೃಷ್ಣಾವತಾರದಲ್ಲಿ ಶ್ರೀ ಕೃಷ್ಣನು ತೋರಿದ ಬಾಲಲೀಲೆಯ ಚಿತ್ರಗಳನ್ನು ಅವನ ಮುಂದೆ ಹಿಡಿದಳು. ಆಗಲಾತನ ಮುಖಚರ್ಯೆಯು ವಿಲಕ್ಷಣವಾಗಿ ಒಳ್ಳೇ ಆನಂದಯುಕ್ತವಾಗಿ ತೋರ ಹತ್ತಿತು. ಅವನು ಶ್ರೀ ಕೃಷ್ಣನ ಚಿತ್ರವನ್ನು ನೋಡಿದ ಕೂಡಲೇ ಒಮ್ಮೆಲೇ ಮೇಲಕ್ಕೆದ್ದು ಥೈ ಥೈ ಕುಣಿದಾಡಹತ್ತಿದನು. ಹಾಗೂ ಆ ಚಿತ್ರ ನೋಡಿ--ಆಹಾ! ಇವನೇ ನಮ್ಮೊಡೆಯ ಗೋಪಾಲ ಕೃಷ್ಣನು ದನ ಕರುಗಳನ್ನು ಮೇಯಿಸುವ ತರುಗಾಹಿಯೇ ಇವನು ಎಂದು ಅವನು ಉಚ್ಚರಿಸಲು ಇಂದುಮತಿಯು ಇವನೊಬ್ಬ ದನಕಾಯುವವನೆಂಬುದಾಗಿ ದೃಢವಾಗಿ ತಿಳಿದಳು. ಆದರೂ ಅವಳು ಅದನ್ನು ಬದಿಗಿಟ್ಟು ಆ ಮೂರ್ಖನನ್ನು ತಾನೇ ವಧೆಮಾಡುವ ವಿಚಾರದಿಂದ ಅವನೆದುರು ಖಡ್ಗವನ್ನು ಹಿಡಿದುಕೊಂಡು ನಿಂತಳು. ಆಗ ಆಕೆಯ ರೌದ್ರ ಸ್ವರೂಪವನ್ನು ನೋಡಿ ಬ್ರಾಹ್ಮಣ ಪುತ್ರನು ಭಯಪಟ್ಟು ಈಕೆಗೆ ತನ್ನ ನಿಜ ಸಂಗತಿಯನ್ನೆಲ್ಲ ಹೇಳಿ ಇಲ್ಲಿಂದ ಪಾರಾಗಿ ಹೋಗಬೇಕು ಎಂಬ ಆಲೋಚನೆಯನ್ನು ಮಾಡಿದನು. ಹಾಗು ಆಕೆಯ ಪಾದಗಳ ಮೇಲೆ ಉರುಳಾಡಿ ಎಲೈ ಸ್ತ್ರೀಯೆ! ನಾನೊಬ್ಬ ಬಡ ಬ್ರಾಹ್ಮಣನ ಮಗನು ಎಂದು ಉಚ್ಚರಿಸಿದನು. ಅದನ್ನು ಕೇಳಿ ಇಂದುಮತಿಯು ತನ್ನಲ್ಲಿ— ಈ ದಿನ ನಾನು ಏನೊಂದು ವಿಚಾರವಿಲ್ಲದೆ ಬ್ರಹ್ಮಹತ್ಯೆಯ ದೋಷಕ್ಕೆ ಗುರಿಯಾಗುತ್ತಿದ್ದೆನು. ದೇವರೇ ನನ್ನನ್ನು ಆ ದುಷ್ಕರ್ಮದಿಂದ ಪರಾವೃತ್ತಗೊಳಿಸಿದನು. ಇನ್ನು ಈ ಮೂರ್ಖನ ಮುಖ ನಿರೀಕ್ಷಣೆಯೇ ನನಗೆ ಸಾಕು ಎಂದು ಮನಸ್ಸಿಗೆ ಹೇಳಿಕೊಂಡು ಅವಳು ಆ ಬ್ರಾಹ್ಮಣ ಪುತ್ರನನ್ನು ಕುರಿತು —ಎಲೈ ಮೂರ್ಖ ಮಂದಮತಿಯೇ ಇಂದಿನಿಂದ ನೀನು ಈ ನಗರದಲ್ಲಿ ನನ್ನ ದೃಷ್ಟಿಗೆ ಬೀಳಬೇಡ ಎಚ್ಚರಿಕೆ! ಎಂದು ಕಟ್ಟಪ್ಪಣೆ ಮಾಡಿದಳು. ಹಾಗು ಆಗಲೇ ರಾತ್ರಿಯಾಗಿದ್ದರೂ ಸಹ ಅವನ ಸೊಂಟಕ್ಕೆ ದೊಡ್ಡದೊಂದು ಹಗ್ಗದಿಂದ ಬಂಧಿಸಿದಳು ತನ್ನ ಮಂದಿರದ ಉಪ್ಪರಿಗೆಯ ಕಿಟಕಿಯಲ್ಲಿಂದ ಅವನನ್ನು ಕೆಳಕ್ಕೆ ಬಿಟ್ಟಳು. ಕೂಡಲೇ ಅವನು ನೆಲಕ್ಕೆ ಮುಟ್ಟಿ ಎದ್ದು ನಿಂತು ಕಟ್ಟಿದ್ದ

ಹಗ್ಗವನ್ನು ಬಿಚ್ಚಿಕೊಂಡು—"ಇನ್ನು ನಾನು ಇಲ್ಲಿ ಇರುವದು ಸರಿಯಲ್ಲ. ನನ್ನನ್ನು ಲಗ್ನ ಮಾಡಿಕೊಂಡ ರಾಜಪುತ್ರಿಯು ವ್ಯರ್ಥವಾಗಿ ನನ್ನ ಪ್ರಾಣವನ್ನು ತೆಗೆದುಕೊಳ್ಳುತ್ತಿದ್ದಳು. ಈ ಅರಿವು ಅವನಲ್ಲಿ ಬಹಳ ವ್ಯಥೆಯನ್ನುಂಟು ಮಾಡಿತು. ಹಾಗು ಅವನು ತನ್ನ ಮೂರ್ಖತನವನ್ನು ನೆನಪಿಗೆ ತಂದುಕೊಂಡು ಆ ದಿನದ ಕಗ್ಗತ್ತಲ್ಲಿಯೇ ಅಲ್ಲಿಂದ ಕಾಲ್ದೆಗೆದನು. ಹಾಗೆಯೇ ಭರದಿಂದ ಮುಂದೆ ಸಾಗಿ ನಗರದ ಹೊರಗೆ ಇರುವ ಒಂದು ಗುಡಿಗೆ ಬಂದನು. ಅದರೊಳಗೆ ಸೇರಿದನು.

ಗುಡಿಯೊಳಗೆ ಪ್ರವೇಶ ಮಾಡಿದ ಕೂಡಲೇ ಅವನಿಗೆ ದೇವಿಯ ದರ್ಶನವಾಯಿತು. ಅದರೊಳಗೆ ಅವನ ಸುದೈವವೂ ಪ್ರಾಪ್ತವಾಯಿತು. ನಾನೂ ಮೂರ್ಖನು, ನನಗೆ ರಾಜಪುತ್ರಿಯಿಂದ ಅವಮಾನವಾಯಿತು. ಈ ತಿಳುವಳಿಕೆಯುಂಟಾದ ಕೂಡಲೇ ಅವನು ದೇವಿಯ ಮುಂದೆ ಹೋಗಿ ಸಾಷ್ಟಾಂಗ ನಮಸ್ಕಾರ ಹಾಕಿ "ದೇವಿ! ನನಗೆ ಬುದ್ಧಿ ರೂಪ ವೈಭವವನ್ನು ಕರುಣಿಸು. ಇಲ್ಲವಾದರೆ ಇಲ್ಲಿಯೇ ನಿನ್ನೆದುರಿನಲ್ಲಿ ನಾಲಿಗೆಯನ್ನು ಹಿರಿದುಕೊಂಡು ಪ್ರಾಣ ಬಿಡುವೆನು" ಎಂದು ಪ್ರಾರ್ಥಿಸಿದನು. ಬಹಳ ಹೊತ್ತಿನವರೆಗೆ ದೇವಿಯ ಎದುರಿನಲ್ಲೇ ನಿಂತನು. ಮತ್ತೆ ಮತ್ತೆ ಕೈ ಮುಗಿದು ಬೇಡಿಕೊಳ್ಳಹತ್ತಿದನು. ಆದರೂ ಅವನ ಇಚ್ಛೆಯಂತೆ ದೇವಿಯು ಅವನಿಗೆ ಪ್ರತ್ಯಕ್ಷಳಾಗಲಿಲ್ಲ. ಕಡೆಗೆ ಅವನು ತನ್ನ ಪ್ರತಿಜ್ಞೆಯಂತೆ ದೇವಿಯ ಮುಂದೆ ನಿಂತು ತನ್ನ ನಾಲಿಗೆಯನ್ನು ಹರಿದುಕೊಂಡು ಜೀವ ಕಳೆದುಕೊಳ್ಳುವ ಪ್ರಯತ್ನ ನಡೆಯಿಸಿದನು ಆಗ ದೇವಿಯು— ಇವನು ನಿಶ್ಚಯವಾಗಿಯೂ ಪ್ರಾಣಕೊಡುವ ಮೂರ್ಖನಿರುವನು. ಇವನ ಬೇಡಿಕೆಯಂತೆ ಇವನಿಗೆ ನಾನು ಕೊಡುವ ಬುದ್ಧಿ ರೂಪ ವೈಭವವನ್ನು ಕರುಣಿಸದೆ ಗತ್ಯಂತರವಿಲ್ಲ ಎಂದು ಬಗೆದು ದೇವಿಯು ತನ್ನ ನಿಜ ರೂಪದಿಂದ ಅವನೆದುರು ನಿಂತಳು. ಹಾಗು ಅವಳು ಅವನನ್ನು ನೋಡಿ—"ಎಲೋ! ನೀನು ವ್ಯರ್ಥ ಪ್ರಾಣ ಕಳೆದುಕೊಳ್ಳಬೇಡ. ನಾನು ನಿನಗೆ ಕೊಡುವ ವರಪ್ರಸಾದದಿಂದ ಇಂದಿನಿಂದ ನೀನು ವಿದ್ವಾಂಸನಾಗುವಿ. ಕವಿ ಶಿರೋಮಣಿಯಾಗುವಿ, ನಿನ್ನ ಮುಖೋದ್ಗಳಿತ ನುಡಿಗಳು ನಿಜವಾಗಿಯೇ

ಪರಿಣಮಿಸುವವು. ಹಾಗು ಈ ಜಗತ್ತಿನಲ್ಲಿ ನೀನು ‘ಕಾಲಿದಾಸ ಎಂಬ ಹೆಸರಿನಿಂದ ಪ್ರಸಿದ್ಧನಾಗುವಿ ಹೋಗು, ಧಾರಾ ನಗರಕ್ಕೆ ಹೋಗು ಅಲ್ಲಿ ಪುಣ್ಯಶೀಲ ಭೋಜರಾಜನು ರಾಜ್ಯವಾಳುತ್ತಿರುವನು. ನೀನು ಆ ಪ್ರತಾಪ ವಂಶರಾಜನ ಆಶ್ರಯದಲ್ಲಿ ಇದ್ದುಬಿಡು. ಇಂತಾದರೆ ನೀನು ಎಲ್ಲ ಬಗೆಯ ಕಲ್ಯಾಣಗಳನ್ನು ಹೊಂದುವಿ, ಹಾಗೂ ಸಕಲ ವಿದ್ಯೆಗಳು ನಿನಗೆ ಅಂಗೈನಲ್ಲಿ ಯಂತೆ ಫಲಿತವಾಗುವವು ಈ ಪ್ರಕಾರ ಅವನಿಗೆ ದೇವಿಯು ವೇಲ್ತರದ ವರಗಳನ್ನು ನೀಡಿ ಅದೃಶ್ಯಳಾದಳು. ದೇವಿಯು ವರವಾಕ್ಯದಿಂದ ಸುಪರಿ ಣಾಮ ಸ್ಥಿತಿಯುಕ್ತನಾದ ಆ ಬ್ರಾಹ್ಮಣ ಪುತ್ರನು ಆಗಲೇ ದೇವಿಯ ಎದುರು ಕುಳಿತು ಆದಿ ಮಾಯೆಯ ಪರವಾಗಿ ಸ್ತುತಿ ಸ್ತೋತ್ರಗಳನ್ನು ಬಹು ರಮ್ಯ ವಾಗಿ ಗಾಯನ ಗೀತೆಯೊಂದಿಗೆ ಉಚ್ಚರಿಸುತ್ತ ಕುಳಿತುಕೊಂಡನು.

ಅಷ್ಟರಲ್ಲಿ ಬೆಳ್ಳನೆ ಬೆಳಗಾಯಿತು, ರವಿಯು ತನ್ನ ಹೊಂಬಣ್ಣದ ಕಿರಣ ಗಳನ್ನು ಚೆಲ್ಲುತ್ತ ಪೂರ್ವ ದಿಕ್ಕಿನ ಆಸಾಂಗಣದಲ್ಲಿ ಮೇಲೇರಿ ಬರಹತ್ತಿ ದನು. ರಾಜಪುತ್ರಿಯು ನಿತ್ಯದಂತೆ ತನ್ನ ಒಬ್ಬ ಸೇವಕಿಯೊಡನೆ ದೇವಿಯ ಪೂಜೆಗಾಗಿ ಆ ಮಂದಿರಕ್ಕೆ ಬಂದಳು. ಒಳಸೇರಿ ದೇವಿಯ ಮುಂದೆ ಹೋಗಿ ನಿಂತಳು. ನೋಡುತ್ತಾಳೆ, ಮುನ್ನಿನ ರಾತ್ರಿಯಲ್ಲಿ ತನ್ನಿಂದ ಅವಮಾನಿತ ನಾದ ತನ್ನ ಪತಿಯು ದೇವಿಯ ಸನ್ನಿಧಿಯಲ್ಲಿ ಕುಳಿತಿರುವನು. ಗಂಧರ್ವ ನಂತೆ ಗೀತ_ಗಾಯನ ನಡೆಯಿಸಿರುವನು. ಇದನ್ನು ಕಂಡು ಅವಳು ಬಹಳೇ ಚಕಿತಗೊಂಡಳು. ಅವನ ಹಾಡ ಗಾರಿಕೆಯನ್ನು ಕೇಳುತ್ತ ಅಲ್ಲಿಯೇ ಸ್ತಬ್ಧ ಳಾಗಿ ನಿಂತುಬಿಟ್ಟಳು. ಕೆಲಹೊತ್ತಿನ ನಂತರ ಅವನು ತಾನು ಉಚ್ಚರಿಸುತ್ತಿ ರುವ ಗಾಯನ ಗೀತಗಳನ್ನು ನಿಲ್ಲಿಸಿದನು. ಇನ್ನು ದೇವಿಯ ದರ್ಶನಕ್ಕೆ ಬರುವವರಿಗೆ ಅನುವು ಮಾಡುವ ಉದ್ದೇಶದಿಂದ ಒಂದೆಡೆಗೆ ಸರಿದುನಿಂತನು. ಆಗ ರಾಜಪುತ್ರಿಯು ತನ್ನ ಸೇವಕಿಯೊಂದಿಗೆ ಹೋಗಿ ಅವನೆದುರು ನಿಂತು ನೆಟ್ಟ ದೃಷ್ಟಿಯಿಂದ ಅವನನ್ನು ನಿರೀಕ್ಷಿಸಹತ್ತಿದಳು. ಆಕೆಯನ್ನು ನೋಡಿ ಕಾಳಿದಾಸನು ತನ್ನಲ್ಲಿ:—“ನನ್ನನ್ನು ವರಿಸಿ ಲಗ್ನಮಾಡಿಕೊಂಡ ಸ್ತ್ರೀಯಳೆ

ನನ್ನನ್ನು ಧಿಕ್ಕರಿಸಿ ಅಪಮಾನ_ಲಜ್ಜೆಗಳಿಗೆ ಗುರಿ ಮಾಡಿದಳು. ಈಕೆಯೇ ಈಗ ದೇವಿಯ ದರ್ಶನಕ್ಕೆಂದು ಬಂದಿರುವಳು. ಹಾಗೂ ಇವಳು ನನ್ನನ್ನು ನೋಡಿ ಈಗ ತಾನು ಲಜ್ಜಿತಳಾಗಿರುವಳು. ಇದೆಂಥ ಆಶ್ಚರ್ಯ!" ಎಂದು ತನ್ನ ಮುಖದಿಂದ ಪ್ರಕಟಿತವಾಗಿ ಉಚ್ಚರಿಸಿದನು.

ಅವನ ಮುಖೋದ್ಗಳಿತ ವಾಕ್ಯಗಳನ್ನು ಕೇಳಿದ ಕೂಡಲೇ ಇಂದು ಮತಿಯು ತನ್ನಲ್ಲಿ:_"ಈತನು ನನ್ನ ಪತಿಯು. ಮಹಾ ವಿದ್ವಾಂಸನಾಗಿರುವನು ನನ್ನನ್ನು ಪರೀಕ್ಷಿಸುವ ಉದ್ದೇಶದಿಂದಲೇ ಇವನು ತಾನು ನನ್ನ ಮಂದಿರದಲ್ಲಿ ಮೂರ್ಖನಂತೆ ನಟಿಸಿದನು. ಆದರೂ ನಾನು ಈಗ ಇವನಿಗೆ ಶರಣು ಹೋಗಿ ಕ್ಷಮೆಯನ್ನು ಯಾಚಿಸಿ ಇವನನ್ನು ಮಂದಿರಕ್ಕೆ ಕರೆದೊಯ್ಯುವದು ಸೂಕ್ತವು, ಈ ಪ್ರಕಾರ ವಿಚಾರಿಸಿ ಆಗಲೇ ಅವನ ಎದುರು ಹೋಗಿ ಅವನ ಪಾದಗಳನ್ನು ಗಟ್ಟಿಯಾಗಿ ಹಿಡಿದಳು, ತನ್ನ ಅಪರಾಧದ ಬಗೆಗೆ ಕ್ಷಮೆಯನ್ನು ಯಾಚಿಸಹತ್ತಿದಳು. ಆಗ ಕಾಳಿದಾಸನು —ಎಲೈ ರಾಜಪುತ್ರಿಯೆ! ನೀನು ಏನೊಂದು ಅಪರಾಧ ಮಾಡಿರುವಿ! ಕ್ಷಮೆಯನ್ನು ಬೇಡುವದಕ್ಕೆ? ಬಹಳ ಹೇಳುವದೇನು? ಇಂದು ನೀನು ನನಗೆ ಪೂಜ್ಯವಂದನೆಯ ಗುರುವು. ಆದ್ದರಿಂದ ನೀನು ನಿನ್ನ ಮನಸ್ಸಿನ ವಿಷಮತೆಯನ್ನು ಬಿಟ್ಟು ದೇವಿಯನ್ನು ಅರ್ಚಿಸಿ ನಿನ್ನ ಮಂದಿರಕ್ಕೆ ಹೋಗು" ಎಂದನು. ಅವನಾಡಿದ ಭಾಷಣವನ್ನು ಕೇಳಿ ಇಂದುಮತಿಯು_"ನೀವೂ ಮಂದಿರಕ್ಕೆ ಬರಲಿಕ್ಕೆಬೇಕು" ಎಂದು ಆಗ್ರಹ ತೊಟ್ಟಳು. ಏನಾದರೂ ಆತನು ಆಕೆಯ ಮಾತುಗಳನ್ನೇ ಲೆಕ್ಕಿಸಲಿಲ್ಲ ಇಷ್ಟೇ ಅಲ್ಲ ಅವನು ಆಕೆಗೆ—"ರಾಜಪುತ್ರಿ! ನನಗೆ ದೇವಿಯ ವರಪ್ರಸಾದ ಲಭಿಸುವದಕ್ಕೆ ನೀನೇ ಕಾರಣಳಾದಿ" ಎಂದು ಉಚ್ಚರಿಸಿ ಎದ್ದು ನಿಂತು ಅವಳ ಪಾದಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ಹಾಗೂ ಆಗಲೇ ಎದ್ದು ಭೋಜರಾಜನ ದರ್ಶನ ಪಡೆಯುವ ಆತುರತೆಯಿಂದ ಧಾರಾ ನಗರದ ಮಾರ್ಗ ಹಿಡಿದು ಭರ ಭರನೆ ಮುಂದೆ ಸಾಗಿದನು.

ಧಾರಾಧೀಶ ಭೋಜರಾಜನು_ವಿದ್ವಾಂಸರಿಗೆ ತನ್ನಲ್ಲಿ ಚನ್ನಾಗಿ ಆಶ್ರಯ ಕೊಡುತ್ತಿದ್ದನು. ಆದರಿಂದ ಅವನ ಕೀರ್ತಿಯು ದಿಗ್ದೇಶಗಳಲ್ಲಿ ಪಸರಿಸತ್ತು,

ಎಷ್ಟೋ ದೇಶಗಳಿಂದ ವಿದ್ವಾಂಸರು, ಕವಿಗಳು, ಪಂಡಿತರು ಹಾಗೂ ಕಲಾ ಕೋವಿದರು ಬಂದು ಆ ರಾಜನ ಆಶ್ರಿತ ವರ್ಗದವರಾಗಿ ಧಾರಾ ನಗರದ ನಿವಾಸಿಗಳಾಗಿದ್ದರು ಈಗ ಕಾಳಿದಾಸನು ವಂಗದೇಶದಿಂದ ನೇರವಾಗಿ ಬಂದು ನೇರವಾಗಿ ಭೋಜರಾಜನ ದರಬಾರಿನಲ್ಲಿ ಪ್ರವೇಶಿಸಿದನು. ಪ್ರಥಮತ: ಅವನು ರಾಜನನ್ನು ಕಂಡು ಅವನ ಶ್ರಿಯೋಭಿವೃದ್ಧಿಯಾಗಬೇಕು. ಎಂಬುದನ್ನು ಕುರಿತು:-

ಮಹಾರಾಜ ಶ್ರೀಮನ್ ಜಗತಿ ಯಶಸಾಃ ತೇ ಧವಳಿತೇ ।

ಪಯಃ ಪಾರಾವಾರಾ ಪರಮ ಪುರುಷೋಯಂ ಮೃಗಯುತೇ ॥

ಕಪರ್ದೀ ಕೈಲಾಸಂ ಕರಿವರಮ ಭೌಮಂ ಕುಲಿಶಭೃತ್ ।

ಕಲಾನಾಥಂ ರಾಹುಃ ಕಮಲ ಭುವನೋ ಹಂಸಮಧುನಾ ॥

(ಅರ್ಥಃ- "ಎಲೈ ಮಹಾರಾಜನೇ ! ನಿನ್ನ ಕೀರ್ತಿಯು ಈ ಶ್ರೀಮಂತ ಜಗತ್ತಿನ ತುಂಬೆಲ್ಲ ಪಸರಿಸಿ ಬೆಳಗುತ್ತಲಿದೆ. ಅದರ ಪ್ರಕಾಶದ ಪ್ರಭೆಯಲ್ಲಿ ಪಿಷ್ಣುವಿಗೆ ಪಾಲ್ಗಡವೂ, ಶಿವನಿಗೆ ಕೈಲಾಸವೂ, ಸುರಪತಿಗೆ ಐರಾತವೂ ಸೈಂಹಿಕೇಯನಿಗೆ ಚಂದ್ರಮನೂ ತದ್ವತ್ ಬ್ರಹ್ಮನಿಗೆ ಹಂಸವೂ ಅವರು ಎಷ್ಟು ಶೋಧಿಸಿದರೂ ಲಭಿಸದ ಸ್ಥಿತಿಯು ಅವರಲ್ಲುಂಟಾಯಿತು.)

ಈ ಪ್ರಕಾರ ಅರ್ಥಯುಕ್ತ ಪದ್ಯವನ್ನು ಸುಕಂಠದಿಂದ ಉಚ್ಚರಿಸಿ ರಾಜನ ಶ್ರೀಯೋಭಿವೃದ್ಧಿಯನ್ನು ಬಣ್ಣಿಸಿದನು.

ಕಾಳಿದಾಸನು ಸ್ವಯಂ ಸ್ಫೂರ್ತಿಯಿಂದ ಬಣ್ಣಿಸಿದ ಪದ್ಯವನ್ನಾಲಿಸಿ ಭೋಜರಾಜನು ಆಗಲೇ ಅವನಲ್ಲಿ ಅತ್ಯದ್ಭುತ ವಿದ್ವತ್ತೆಯಿರುವದೆಂಬುವನ್ನು ಮನಗಂಡನು. ಹಾಗು ಅಂದಿನಿಂದ ಅವನನ್ನು ತನ್ನ ಆಶ್ರದಲ್ಲಿರಿಸಿಕೊಂಡನು. ಈ ಬಗೆಯಾಗಿ ರಾಜನ ಪ್ರೀತಿಗೆ ಪಾತ್ರನಾದ ಕಾಳಿದಾಸನು ರಾಜ ದರಬಾರಿನಲ್ಲಿದ್ದ ಒಂಭಯ್ನೂರು ಜನ ಪಂಡಿತರಲ್ಲೆಲ್ಲ ಅಗ್ರಗಣ್ಯನಾಗಿ ರಾಜನ ಶ್ರೇಷ್ಠ ಮನ್ನಣೆಗೊಳಗಾದನು.

ಭೋಜರಾಜನ ಮುಖದಿಂದ ಹೊರ ಹೊಮ್ಮಿದ ಕಠಿಣ ಸಮಸ್ಯೆಗಳನ್ನು ಪೂರ್ಣಕರಿಸುವದೂ, ರಾಜನ ಅಂತರ್ಗತ ಸಂಗತಿಗಳನ್ನು ಸ್ಪಷ್ಟೀಕರಿಸಿ ಹೇಳುವದೂ, ಇವು ಕಾಳಿದಾಸನೊಬ್ಬನಿಗೇ ಸಾಧಿಸಿದ್ದವು.

ಭೋಜರಾಜನ ಸನ್ನಿಧಿಯಲ್ಲಿ ಕಾಳಿದಾಸನು ತನ್ನ ಕಾವ್ಯ ಶ್ಲೋಕಗಳಿಂದ ಹೇಗೆ ಮನೋರಂಜನೆ ಮಾಡುತ್ತಿದ್ದನೆಂಬುದನ್ನು ಮುಂದೆ ಹೇಳಿರುವ ಹಲವು ಸಮಯಾಗೂ ಶ್ಲೋಕಗಳಿಂದ ಕಂಡುಕೊಳ್ಳಬಹುದು.

## (೧)

ಭೋಜರಾಜನ ವಿದ್ವತ್ಸಭೆಯಲ್ಲಿ ಪ್ರಾಮುಖ್ಯವಾಗಿ ನವರತ್ನಗಳೆಂಬ ಒಂಭತ್ತು ಜನ ಘನ ವಿದ್ವಾಂಸರೂ ಒಂಬಯ್ನೂರು ಜನ ಪಂಡಿತರೂ ಸದಾವ ಕಾಲದಲ್ಲಿ ಸಮ್ಮಿಲಿತರಾಗಿರುತ್ತಿದ್ದರು. ಕಾಳಿದಾಸನ ಪಾಂಡಿತ್ಯದ ಸೊಬಗನ್ನು ಸವಿಯು ಅಂತರುದ್ದೇಶದಿಂದ ತಾವೆಲ್ಲರು ಬೇರೆ ಬೇರೆಯಾಗಿ ಭೋಜರಾಜನ ಯಶಸ್ಸನ್ನು ಬೇರೆ ಬೇರೆಯಾಗಿ ಬಣ್ಣನೆ ಮಾಡಿದರು. ಆ ಪ್ರಸಂಗದಲ್ಲಿ ಕಾಳಿದಾಸನು ಸಭೆಗೆ ಹೊಸಬನಾದುದರಿಂದ ಮೌನ ವೃತ್ತಿಯಿಂದ ತನ್ನ ಸ್ಥಾನದಲ್ಲಿಯೇ ಕುಳಿತುಕೊಂಡು ಆ ಪಂಡಿತ ವರ್ಗದವರು ಮಾಡುತ್ತಿರುವ ವರ್ಣನೆಯನ್ನು ಮುಗ್ಧ ಭಾವದಿಂದ ಶ್ರವಣ ಮಾಡುತ್ತಲಿದ್ದನು. ತರಗತಿಗನುಸರಿಸಿ ಆ ಪಂಡಿತರೆಲ್ಲರ ಬಾರಿಯು ಮುಗಿಯಿತು. ಇನ್ನು ಅಲ್ಪಾವಕಾಶದಲ್ಲಿ ಸಭೆಯು ಮುಕ್ತಾಯವಾಗುವದರಲ್ಲಿದ್ದಿತು. ಕಾಳಿದಾಸನ ಮುಖದಿಂದ ಹೊರಡುವ ಕಾವ್ಯವಾಣಿಯನ್ನು ಶ್ರವಣ ಮಾಡುವ ಸುಯೋಗವು ತಮಗೆ ಒದಗಿ ಬರಲಿಲ್ಲವಲ್ಲ! ಎಂದು ಎಲ್ಲರೂ ನಿರುತ್ಸಾಹಗೊಂಡಿರುವದನ್ನು ಅವರವರ ಮುಖಭಾವದಿಂದರಿತ ಸಭಾಧ್ಯಕ್ಷ ಭೋಜರಾಜನು ಕಾಳಿದಾಸನನ್ನು ಕುರಿತು—

“ಕವಿವರ ಕಾಳಿದಾಸ! ಇಲ್ಲಿನ ಪಂಡಿತರ ಕಾವ್ಯ ಪ್ರತಿಭಾವಾಣಿಗಳನು ನೀವು ಕೇಳಿದಿರಿ, ಎಲ್ಲರೂ ಸಾಮಾನ್ಯವಾಗಿ ಯಶಸ್ಸನ್ನೇ ಛಂದೋಪ

ನಾಲಂಕಾರಗಳಿಂದ ಯುಕ್ತ ಪದ್ಯಗಳನ್ನೇ ತಮ್ಮ ತಮ್ಮ ಬುದ್ಧಿ ಮಟ್ಟಕ್ಕೆ ಸರಿಸಿ ವರ್ಣಿಸಿದರು ಆದರೆ ಈ ವಿಷಯದಲ್ಲಿ ನಿಮ್ಮ ಮುಖದಿಂದ ಒಂದೂ ಶಬ್ದವೂ ಹೊರಡದಿದ್ದುದು ಎಲ್ಲರಿಗೂ ಆಶ್ಚರ್ಯವಾಗಿದೆ ಎಂದು ನುಡಿಯು ವಷ್ಟರಲ್ಲಿಯೇ ಕಾಳಿದಾಸನು ಎದ್ದು ನಿಂತು—

ವಿದ್ವದ್ರಾಜ ಶಿಖಾಮಣೇ ತುಲಯಿತುಂ ಧಾತಾ ತ್ವದೀಯಂ ಯಶಃ
ಕೈಲಾಸಂ ಚ ನಿರೀಕ್ಷ್ಯತತ್ರ ಲಘುತಾಂ ನಿಕ್ಷಿಪ್ತವಾನ್ ಪೂರ್ತಯೇ
ಉಕ್ಷಾಣಂ ತದೀಪರ್ಯಮಾ ಸಹಚರಿಂ ತನ್ಮೂರ್ಧ್ನಿ ಗಂಗಾಜಲಂ
ತಸ್ಯಾಗ್ರೇ ಫಣಿಪುಂಗವಂ ತದುಪರಿ ಸ್ಫಾರಂ ಸುಧಾದಿಧಿಧೀಂ ||

ಅರ್ಥಃ— "ರಾಜನ್ ! ಬ್ರಹ್ಮನು ನಿನ್ನಕೀರ್ತಿಯನ್ನು ಕೈಲಾಸಗಿರಿಗೆ ಸಮನಿಸಿ ತೂಗಿ ನೋಡಿದನು ಆಗ ನಿನ್ನ ಕೀರ್ತಿಗಿಂತ ಆ ಕೈಲಾಸವು ಹಗುರಾಗಿ ತೋರಿತು ಆ ಪರಡಿಯನ್ನು ಸಮಗೊಳಿಸಬೇಕೆಂದು ಅದರ ಮೇಲೆ ಶಿವನ ನಂದಿಯನ್ನು ನಿಲ್ಲಿಸಿದನು. ಇನ್ನೂ ಸಮತೂಕವಾಗಲಿಲ್ಲ. ನಂತರ ನಂದಿಯ ಮೇಲೆ ಶಿವನನ್ನು ಕುಳ್ಳಿರಿಸಿದನು. ಇನ್ನೂ ತೂಕ ಕಡಿಮೆಯಾಯಿತು. ಮತ್ತೆ ಆವನ ಜಡೆಯ ಗಂಗೆಯನ್ನು ಇಟ್ಟನು. ಆದರೂ ಹಗುರಾಯಿತು. ಆ ಬಳಿಕ ಕ್ರಮವಾಗಿ ಶೇಷನನ್ನೂ ಚಂದ್ರನನ್ನೂ ಪಾಸಂಗ ಕಟ್ಟಿದನು. ಇಷ್ಟಾದರೂ ಕೀರ್ತಿಯ ಪರಡಿಯೇ ಮೇಲೇಳಲಿಲ್ಲ

ಈ ಪ್ರಕಾರ ಕಾಳಿದಾಸನು ಭೋಜರಾಜನ ಕೀರ್ತಿಯ ಮಹತ್ತಿಕೆಯನ್ನು ವರ್ಣಿಸಿ ಉಚ್ಚರಿಸಿದನು. ಭೋಜರಾಜನಿಗೆ ಅತ್ಯಂತ ಹರುಷ ! ಪಂಡಿತರೆಲ್ಲರಿಗೂ ಪರಮ ಸಂತೋಷ !

ಅಂದಿನಿಂದಲೇ ಎಲ್ಲ ಪಂಡಿತರು ಕಾಳಿದಾಸನನ್ನು ಪರಿಚಿತನನ್ನಾಗಿ ಮಾಡಿಕೊಂಡರು. ಹಾಗೂ ಪ್ರತಿಯೊಬ್ಬರೂ ಅವನನ್ನು ಮನ್ನಣೆಯಿಂದ ಕಾಣುತ್ತಿದ್ದರು. ಭೋಜರಾಜನಂತೂ 'ಕಾಳಿದಾಸನು ವಿದ್ಯಾಧಿ ದೇವತೆಯ ಅಪರಾವತಾರಿಕನು' ಎಂದು ವಿಶ್ವಾಸವಿಟ್ಟು ಅವನನ್ನು ಸತತವೂ ಸ್ನೇಹಮಯ ದೃಷ್ಟಿಯಿಂದ ನಿರೀಕ್ಷಿಸುತ್ತಿದನು. ಅವನು ಕಾಳಿದಾಸನು ತನ್ನ

ಆಶ್ರಿತನೆಂಬ ಭಾವನೆ ತಂದುಕೊಳ್ಳದೆ ಇತರ ಪುರಗಳೇಡರಲ್ಲಿಯೂ ತಾನೇ ತನ್ನ ಸ್ನೇಹಿತನಾಗಿರಬೇಕೆಂದು ಸತತವೂ ಇಚ್ಛಿಸುತ್ತಿದ್ದನು. ಇಷ್ಟೇ ಅಲ್ಲ ಕೆಲಸಾರೆ ಏನೇನೋ ಕಾರಣಗಳಿಂದ ತನಗೆ ಕಾಳಿದಾಸನ ವಿಯೋಗ ಪ್ರಸಂಗ ಒದಗಿದಾಗ ದರಬಾರಿನ ಪಂಡಿತರೆದುರು ತನ್ನ ನಿರಿಚ್ಛೆಯನ್ನು ಪ್ರಕಟಿಸುತ್ತಲೇ ಇದ್ದನು.

ಒಟ್ಟಿನಲ್ಲಿ ಸಮದ್ವಯಿಸಿ ಹೇಳುವದಾದರೆ—

ಭೋಜರಾಜ ಹಾಗು ಕಾಳಿದಾಸ ಇವರಿಬ್ಬರು ಜಡದೇಹಿಗಳಿಂದ ಬೇರೆ ಬೇರೆ ಸ್ವರೂಪನಾಗಿ ತೋರುತ್ತಿದ್ದರೂ ಅವರ ಹೃದಯ ಮನಸ್ಸುಗಳು ಒಂದೊಂದೇಯಾಗಗಿದ್ದವೆಂದು ಹೇಳಿದರೆ ಲೇಶಮಾತ್ರವೂ ತಪ್ಪಾಗಲಿಕ್ಕಿಲ್ಲ.

## (೨)

ದಿನ ದಿನವೂ ಭೋಜರಾಜನ ವಿದ್ವತ್ಸಭೆಯಲ್ಲಿ ಕಾಳಿದಾಸನ ಕಾವ್ಯ ಪ್ರತಿಭೆಯು ಅವನ ನಿಷ್ಠೆಯೂ ಉತ್ತರೋತ್ತರ ಬೆಳೆಯಹತ್ತಿದವು ಅವನ ವಾಗ್ವೈಖರಿಯಿಂದ ರಾಜನ ಆನಂದಕ್ಕೆ ಎಣೆಯಿಲ್ಲದಾಯಿತು. ಕಾಳಿದಾಸ ನಂಥ ಕವಿಶ್ರೇಷ್ಠರ್‍ಯಾರೂ ಇರುವದಿಲ್ಲೆಂದು ಎಲ್ಲರೂ ಮಾತಾಡಹತ್ತಿದರು.

ಭೋಜರಾಜನ ಆಶ್ರಯದಲ್ಲಿ “ಧನಂಜಯ” ನೆಂಬ ಇನ್ನೊಬ್ಬ ಕವಿ ಯಿದ್ದನು. ತಾನು ವಿದ್ವಾಂಸನೆಂಬ ಹೆಮ್ಮೆಯು ಅವನಲ್ಲಿ ಮಿಗಿಲಾಗಿದ್ದಿತು. ಕಾಳಿದಾಸನ ಪ್ರವೇಶ ಪೂರ್ವದಲ್ಲಿ ಅವನು ತನ್ನ ಪಾಂಡಿತ್ಯದ ಹೆಚ್ಚಳವನ್ನು ಹೊಗಳಿಕೊಳ್ಳಹತ್ತಿದರೂ ನಿಚ್ಚಳವಾಗಿರಲಿಲ್ಲ. ಅವನ ವಿದ್ಯೆಯ ಬೆಳಕು ಕಾಳಿ ದಾಸನ ಕಾವ್ಯ ಪ್ರತಿಭೆಯ ಮುಂದೆ ಮಾಂದ್ಯತೆಯನ್ನೇ ಹೊಂದಹತ್ತಿತು. ಆದರಿಂದ ಆತನು ಏನಾದರೊಂದು ಪರಿಯಿಂದ ಕಾಳಿದಾಸನನ್ನು ಕೀಳ್ತರಕ್ಕೆ ಳೆಯುವಸಮಯವನ್ನೇ ಕಾಯುತ್ತಲಿದ್ದನು

ಒಂದು ದಿನ ಧನಂಜಯನು ಭೋಜ–ಕಾಳಿದಾಸರು ಬೆಸುಗೆ ಮಾಡಿದ ಪ್ರೀತಿಯನ್ನು ಕಿತ್ತೊಗೆಯುವ ದುರ್ವಿಚಾರದಿಂದ ತನ್ನ ಮನೆಯಲ್ಲಿ ಕುಳಿತು ಬೇರೆ ಬೇರೆ ಕವಿ ಗ್ರಂಥಗಳನ್ನು ಪರಿಶೋಧಿಸಿ—

ಅಪಶಬ್ದಂಶತಂ ಮಾಘೇ ಭಾರತೇ ಚ ಶತತ್ರಯಂ
ಕಾಳಿದಾಸೋ ನಗಣ್ಯಂತೇ ಕವಿರೇಕೋ ಧನಂಜಯಃ ||

(ಅರ್ಥ — ಅಪಶಬ್ದ (ಹೀನದರ್ಶಕ) ಗಳು ಮಾಘ ಕಾವ್ಯದಲ್ಲಿಒಂದು ನೂರೂ ಭಾರತದಲ್ಲಿ ಮುನ್ನೂರೂ ಕಾಳಿದಾಸನ ಕಾವ್ಯದಲ್ಲಿ ಅಸಂಖ್ಯಾತವೂ ಇರುವವು. ಆದರೆ (ನನ್ನ) ಧನಂಜಯನ ಕಾವ್ಯದಲ್ಲಿ ಒಂದರ ಹೊರತು ಇನ್ನೊಂದಿರುವದಿಲ್ಲ.

ಮೇಲೆ ಬರೆದಂತೆ ಒಂದು ಶ್ಲೋಕವನ್ನು ಸಿದ್ಧಪಡಿಸಿದನು. ಹಾಗು ಅದನ್ನು ಒಂದು ಕಾಗದದ ಮೇಲೆ ಬರೆದು ಆ ಕಾಗದವನ್ನು ತನ್ನ ಶಿಷ್ಯನಿಂದ ಭೋಜರಾಜನ ನಿರೀಕ್ಷಣೆಗಾಗಿ ಕಳಿಸಿಕೊಟ್ಟನು. ಶಿಷ್ಯನು ಆ ಕಾಗದವನ್ನು ಕೈಯಲ್ಲಿ ತಕ್ಕೊಂಡು ರಾಜಮಂದಿರದ ಕಡೆಗೆ ನಡೆದನು ದಾರಿಯಲ್ಲಿ ಆ ಶಿಷ್ಯನು ಆ ಕಾಗದದ ಮೇಲೆ ಬರೆದಿರುವ ಶ್ಲೋಕವನ್ನು ಓದುತ್ತ ಸಾವಕಾಶವಾಗಿ ಭೋಜಮಂದಿರಕ್ಕೆ ಹೋಗುತ್ತಿದ್ದನು. ಅದೇ ಮಾರ್ಗದಲ್ಲಿ ಎದುರಿನಿಂದ ಕಾಳಿದಾಸನು ಅಕಸ್ಮಾತ್ತಾಗಿ ಆ ಶಿಷ್ಯ ನಸನಿಹಕ್ಕೆ ಬಂಡನು ಅವನ ಕೈಯಲ್ಲಿದ್ದ ಧನಂಜಯನಿಂದ ಬರೆದಿದ್ದ ಲೇಖವನ್ನು ಗುರುತಿಸಿದನು ಹಾಗು ಅವನಿಂದ ಆ ಕಾಗದವನ್ನು ಇಸಿದುಕೊಂಡು ಅದರಲ್ಲಿ ಬರೆದಿದ್ದ ಶ್ಲೋಕವನ್ನು ಓದಿ ನೋಡಿದನು. "ಇದು ಕೇವಲ ಕವಿಗಳ ನಿಂದೆಯನ್ನು ವ್ಯಕ್ತಪಡಿಸುವ ಧನಂಜಯ ಕವಿಯ ಶ್ಲೋಕವು ನಿಶ್ಚಿತವು" ಎಂದು ತಿಳಿದುಕೊಂಡನು. ಹಾಗೂ ಶಿಷ್ಯನನ್ನು ಕುರಿತುಃ— "ನಿನ್ನ ಗುರು ಧನಂಜಯನು ಘನವಿದ್ವಾಂಸನು. ಅವನಿಂದ ರಚಿತವಾದ ಈ ಶ್ಲೋಕವು ನಿಜವಾಗಿಯೂ ರಾಜನಿಗೆ ಒಪ್ಪಿತವಾಗುವದು. ಇಷ್ಟೇ ಅಲ್ಲ, ಇದಕ್ಕೆ ತಕ್ಕ ಪ್ರತಿಫಲವಾದರೂ ಸಿಕ್ಕಬಹುದು. ಇದರಲ್ಲಿಯ ವರ್ಣವು ಮಾತ್ರ ನಿನ್ನ ಗುರುವಿನ ಹಸ್ತದೋಷದಿಂದ ವಿವರ್ಣವಾಗಿವೆ. ಅದನ್ನು ಸುಧಾರಿಸಿಕೊಂಡೊಯ್ದು ರಾಜನಿಗೆ ಕೊಡು ಎಂದು ಆ ಕಾಗದವನ್ನು ಶಿಷ್ಯನ

ಶಿಷ್ಯನ ಕೈಗೆ ಕೊಡಹೋಗಲು ಅವನು--ಸ್ವಾಮೀ ! ನೀವೆ ತಿದ್ದಿರಿ. ಎಂದು ಆಗ್ರಹ ಪೂರ್ವಕ ಹೇಳಿದನು. ಕೂಡಲೇ ಕಾಳಿದಾಸನು ಆ ಶ್ಲೋಕದಲ್ಲಿದ್ದ ಅಃ ಶಬ್ದದ 'ಅ' ಕಾರಕ್ಕೆ ಪರಿವರ್ತಿಸಿ ಆ ಕಾಗದವನ್ನು ಅವನ ಕೈಗೆ ಕೊಟ್ಟು ಮುಂದೆ ತೆರಳಿದನು.

ಶಿಷ್ಯನು ಹಾಗೆಯೇ ಭೋಜರಾಜನ ಮಂದಿರಕ್ಕೆ ಹೋದನು. ರಾಜನಿಗೆ ವಂದಿಸಿ ಧನಂಜಯು ಕೊಟ್ಟ ಕಾಗದವನ್ನು ರಾಜನ ಮುಂದಿಟ್ಟನು.

ಮರುದಿನ ರಾಜಸಭೆಯಲ್ಲಿ ಧನಂಜಯ ಕವಿ ಬರೆದ ಶ್ಲೋಕವನ್ನು ಓದಲಾಯಿತು. ಈ ಶ್ಲೋಕಾರ್ಥವನ್ನು ಪಂಡಿತರಾದ ನೀವೆಲ್ಲರೂ ಸ್ಪಷ್ಟ ಮಾಡಬೇಕು ಎಂದು ರಾಜನು ಹೇಳಲು ಪಂಡಿತರೆಲ್ಲರೂ—

"ಮಾಘ ಕಾವ್ಯದಲ್ಲಿ ನೀರಿಗೆ ಹೆಸರಿರುವ "ಅಪ" ಶಬ್ದವು ಒಂದು ನೂರು ಬಾರಿ ಬಂದಿದ್ದರೆ ಭಾರತದಲ್ಲಿ ಮುನ್ನೂರು ಬಾರಿ ಬಂದಿದೆ. ಕಾಳಿದಾಸನು ತನ್ನ ಕಾವ್ಯದಲ್ಲಿ ಲೆಕ್ಕವಿಲ್ಲದಷ್ಟು ಬಳಸಿರುವನು. ಧನಂಜಯನು ಮಾತ್ರ "ಜಪ" ಎಂದರೆ ನೀರು ಎಂದು ತಿಳಿದಿರುವನ.

ಎಂದು ಪಂಡಿತರೆಲ್ಲರೂ ಅದರ ಅರ್ಥವನ್ನು ಹೇಳಿದರು. ಹಾಗು ಧನಂಜಯನ ಮುಖನೋಡಿ ನಗಹತ್ತಿದರು. ಎಲ್ಲರು ಕೇವಲ ಕಾಳಿದಾಸನನ್ನು ಅಪಹಾಸ್ಯಕ್ಕೆ ಗುರಿ ಮಾಡುವ ಉದ್ದೇಶದಿಂದಲೇ ಧನಂಜಯ ಕವಿಯು ಈ ಶ್ಲೋಕ ರಚಿಸಿರುವನೆಂದು ತಿಳಿದರು. ಧನಂಜಯನು ಇಂತು ಕಾಳಿದಾಸನನ್ನು ಅಪಹಾಸ್ಯಕ್ಕೆ ಸಿಕ್ಕಿಸಹೋಗಿ ತಾನೇ ಎಲ್ಲ ಪಂಡಿತರು ಮಾಡುವ ನಿಂದೆಗೆ ಗುರಿಯಾದನು.

ಮುಂದೆ ಧನಂಜಯ ಕವಿಯು ಕಾಳಿದಾಸನಿಗೆ ವಿರೋಧ ಸಲ್ಲಿಸುವ ನೀತಿಯನ್ನು ಬಿಟ್ಟುಬಿಟ್ಟನು. ಸತತವೂ ಅವನೊಡನೆ ಮಿತ್ರತ್ವದಿಂದ ವರ್ತಿಸಹತ್ತಿದನು.

—○○—

(೨)

ಗೋದಾವರಿ ತೀರದ ಪೈಠಣ ಪಟ್ಟಣವು ವಿಪ್ರಾಗ್ರಹಾರವಾಗಿ ಎಂದಿನಿಂದಲೋ ಹೆಸರು ಪಡೆದಿತ್ತು. ಅಲ್ಲಿ ವೇದ ಬಲ್ಲ ವೈದಿಕರ ಸಂಖ್ಯೆಯು ಅತ್ಯಧಿಕವಾಗಿತ್ತು. ಶಾಂಡಿಲ್ಯಭಟ್ಟನೆಂಬ ತ್ರಿವೇದಿ ಬ್ರಾಹ್ಮಣನು ತಾನು ಏಕಪಾಠಿಯಾಗಿ ಅಲ್ಲಿ ವಾಸಿಸುತ್ತಿದ್ದನು. ಅವನು ಬಡತನದ ಬವಣೆಯಲ್ಲಿ ಸಿಕ್ಕು ನಿತ್ಯವೂ ಶುಕ್ಲ ವೃತ್ತಿಯಿಂದ ಉಪಜೀವನ ಸಾಗಿಸಿಕೊಳ್ಳುತ್ತಿದ್ದನು. ಮಾಧವಭಟ್ಟನೆಂಬ ಹೆಸರಿನ ಒಬ್ಬನೇ ಮಗನು ಇದ್ದನು.

ಮಗನು ವಿದ್ಯಾವಂತನಾಗಬೇಕೆಂದು ಶಾಂಡಿಲ್ಯನು ಬಹುಪರಿಯಿಂದ ಪ್ರಯತ್ನಿಸಿದನು. ಆದರೆ ಎಲ್ಲವೂ ನಿರರ್ಥಕವೂ ಏಕಮೇವ ಪುತ್ರನಾದುದರಿಂದ ಶಾಂಡಿಲ್ಯಭಟ್ಟನು ಪ್ರಯತ್ನಾಂತ್ಯದಲ್ಲಿ ಅವನ ಅದೃಷ್ಟವೇ ಹೀನವಾಗಿರುವದೆಂದು ಭಾವಿಸಿ ಕಲಿತಷ್ಟೇ ಸಾಕು ಮಗನು ದಡ್ಡನಾಗಿಯೇ ಇರಲಿ, ಎಂದುಕೊಂಡು ಅವನಿಗೆ ವಿದ್ಯೆ ಕಲಿಸುವ ವಿಚಾರವನ್ನೇ ಬಿಟ್ಟುಬಿಟ್ಟನು.

ಮಾಧವನು ದೊಡ್ಡವನಾದನು, ಪ್ರೌಢ ವಯಸ್ಸಿಗೆ ಬಂದನು. ತಂದೆಯು ತನ್ನಂತಿರುವ ಬಡ ಬ್ರಾಹ್ಮಣನೊಬ್ಬನ ಕನ್ಯೆಯನ್ನು ಶೋಧಿಸಿ ಮಗನ ಮದುವೆ ಮಾಡಿದನು. ಮದುವೆಯಾದ ಮರುವರುಷವೇ ಮಾಧವನ ಮಾತಾ-ಪಿತೃಗಳು ಮರಣ ಹೊಂದಿದರು. ಮಾಧವನು ನಿರಾಧಾರಿಯಾದನು. ತಂದೆಯಂತೆ ವಿದ್ವಾಂಸನೂ ಅಲ್ಲ, ಶುಕ್ಲವೃತ್ತಿಯಿಂದ ಯಾಚಿಸುವವನು ಅಲ್ಲ ದಾರಿದ್ರ್ಯವು ಬಹುದಿನಗಳಿಂದ ನೆಲೆಯೂರಿದ ಅವನ ಮನೆಯಲ್ಲಿ ಒಂದೊತ್ತು ಸಹ ಉಪಜೀವನ ಸಾಗಿಸುವ ಸಾಧನ ಸಾಹಿತ್ಯಗಳೂ ಇದ್ದಿರಲಿಲ್ಲ. ಹೀಗಾಗಿ ಎಷ್ಟೋ ಬಾರಿ ಪತ್ನೀಸಮೇತನಾಗಿ ಉಪವಾಸ ನಿರಾಹಾರಗಳ ಪರಿಚಯವನ್ನು ಕಂಡುಕೊಂಡನು.

ಧಾರಾನಗರಾಧೀಶನು ಕೊಡುಗೈ ದೊರೆಯೆಂಬ ವಾರ್ತೆಯು ಸುತ್ತಲೂ ಕೇಳಬರುತ್ತಿತ್ತು. ಮಾಧವನು ಆ ರಾಜನ ಬಳಿಗಾದರೂ ಹೋಗಿ ತನ್ನ ದಾರಿದ್ರ್ಯ ವಿಚ್ಛೇದನೆ ಮಾಡಿಕೊಳ್ಳುವ ಹಂಬಲ ತಾಳಿದನು

ಲ ರಂತೆ ಅವನು ತನ್ನ ಹೆಂಡತಿಯನ್ನು ಹೆಂಗೆಗೆಂದು ಆಕೆಯು ತೌರು ಮನೆಗೆ ನೂಕಿ ತಾನು ನೇರವಾಗಿ ಧಾರಾನಗರಕ್ಕೆ ಹೋದನು. ಅಲ್ಲಿಯ ಧರ್ಮಶಾಲೆಯಲ್ಲಿ ಅಂದಿನ ಇರುಳನ್ನು ಕಳೆದನು ಮರುದಿನ ಬೆಳಗಿನಲ್ಲಿ ಮುಖಮಾರ್ಜನಾದಿಗಳನ್ನು ಮುಗಿಸಿ ವಿದ್ವದ್ ಬ್ರಾಹ್ಮಣನಂತೆ ಭವ್ಯ ವೇಷ ದಿಂದ ದರಬಾರಿನ ಬಾಗಿಲಿಗೆ ಹೋಗಿ ನಿಂತನು. ಅವನಂತೆ ಬಹುಜನ ಪಂಡಿತರೂ ಯಾಚಕರೂ ಅಲ್ಲಿ ಕಿಕ್ಕಿರಿದಿದ್ದರು. ಸರತಿಯಂತೆ ಎಲ್ಲರೂ ಹೋಗಿ ತಮ್ಮ ತಮ್ಮಲ್ಲಿಯ ವಿದ್ಯೆಯನ್ನು ರಾಜನೆದುರು ಪ್ರಕಟಿಸಿ ದಾನ-ದಕ್ಷಿಣೆಗಳನ್ನು ಪಡೆದು ಹೋಗುತ್ತಿರುವದನ್ನು ನೋಡಿ ಮಾಧವನು ಅಲೋಚನೆಗೊಳಗಾದನು. 'ನಾನು ಮಾತ್ರ ಏನೊಂದು ವಿದ್ಯೆ ಕಲಿತವನಲ್ಲ. ಈ ರಾಜನೆದುರಿನಲ್ಲಿ ಹೋಗಿ ನಿಲ್ಲುವ ಕೊಂಚ ಯೋಗ್ಯತೆ ಸಹ ನನ್ನಲ್ಲಿಲ್ಲ ಎಂದು ಮಿಡುಕಹತ್ತಿದನು.

ಪೈಠಣದಿಂದ ಹೊರಡುವಾಗಲೇ ತಾನು ರಾಜದರ್ಶನಕ್ಕೆ ಬರಿಗೈಯಿಂದ ಹೋಗಬಾರದೆಂದು ತಿಳಿದು ಅವನು ಕೆಲವು ಕಬ್ಬಿನ ಚೂರುಗಳನ್ನು ತಕ್ಕೊಂಡು ತನ್ನ ಪಂಜೆಯಲ್ಲಿ ಸುತ್ತಿ ಕಟ್ಟಿಕೊಂಡು ತಂದಿದ್ದನು. ಧಾರಾ ನಗರದ ಧರ್ಮಶಾಲೆಯಲ್ಲಿ ಉಳಿದ ಕೊಂಡಿರುವಾಗ ಅದಾವನೋ ಪ್ರವಾಸಿಯು ಇವನ ಗಂಟಿನಲ್ಲಿದ್ದ ಆ ಕಬ್ಬಿಣ ಗಣಿಕೆಗಳನ್ನು ತಿಂದು ಅವುಗಳ ಬದಲು ನಾಲ್ಕಾರು ಉರುವಲು ಕಟ್ಟಿಗೆಯ ತುಂಡುಗಳನ್ನು ಕಟ್ಟಿಟ್ಟಿದ್ದನು. ಮಾಧವನಿಗೆ ಇದಾವುದೂ ಗೊತ್ತಿರಲಿಲ್ಲ ಆ ಗಂಟನ್ನು ಹಾಗೆಯೇ ಬಗಲಲ್ಲಿ ರಿಸಿಕೊಂಡು ಈಗ ರಾಜದ್ವಾರಕ್ಕೆ ಬಂದಿದ್ದನು.

ಎಲ್ಲ ಯಾಚಕರು ರಾಜದರ್ಶನಕ್ಕೆ ಹೋಗಿ ಮರ್ಯಾದೆ ಹೊಂದಿ ಹಿಂತಿರುಗಿದರು. ಮಾಧವನ ಸರತಿಯು ಬಂದಿತು. ಕಂಕುಳದಲ್ಲಿಯ ಗಂಟು ಸಹಿತ ರಾಜನೆದುರಿಗೆ ಹೋದನು. ರಾಜನ ವಂದನೆಯನ್ನು ಸ್ವೀಕರಿಸಿ—"ಭೋಜರಾಜನ್!......." ಎಂದು ಉಚ್ಚರಿಸುತ್ತ ಬಗಲಲ್ಲಿಯ ಗಂಟನ್ನು ಬಿಚ್ಚಿ ರಾಜನ ಮುಂದಿಟ್ಟು ಹೌಹಾರಿ ನಿಂತನು ಕಬ್ಬಿನ ಗಣಿಕೆಗಳ ಬದಲಾಗಿ ಕಟ್ಟಿಗೆ ತುಣುಕುಗಳಿರುವದನ್ನು ನೋಡಿ ತಾನೇ ತನ್ನನ್ನು ನಂಬದಾದನು. ರಾಜನು ಬ್ರಾಹ್ಮಣನು ತನ್ನ ಮುಂದಿಟ್ಟ ಉರುವಲು ಕಟ್ಟಿಗೆ ನೋಡಿ—"ಮೂರ್ಖ ಬ್ರಾಹ್ಮಣ! ಇದೇನು! ನೀನ್ನ

ತನ್ನ ಕಾಣಿಕೆಯೇ?" ಎಂದು ಗದ್ದರಿಸಿ ಕೇಳಲು ಮಾಧವನು ಮುಖಭಂಗಿತನಾಗಿ ನಿಂತುಬಿಟ್ಟನು. ರಾಜನ ಬದಿಯಲ್ಲಿಯೇ ಕುಳಿತ ಕಾಳಿದಾಸನು ಬ್ರಾಹ್ಮಣನ ಹುಚ್ಚುಕಳೆಯನ್ನೂ ರಾಜನಲ್ಲಿ ಹೆಚ್ಚುತ್ತಿರು ಕೋಪದ ಅವಿರ್ಭಾವವನ್ನೂ ಕಂಡನು. ಇನ್ನು ಈ ಬ್ರಾಹ್ಮಣನ ಮರ್ಯಾದೆಯುಳಿಯದು. ಇದನ್ನು ಪರಿಹಾರ ಮಾಡಿ ರಾಜನನ್ನು ಆನಂದದಲ್ಲಿ ತಂಪಿಳಿಸಬೇಕು. ಎಂಬ ವಿಚಾರದಿಂದ ಆಗಲೇ ಅವನು ತನ್ನ ಸ್ಥಾನದಿಂದ ಎದ್ದು ಮುಂದೆ ಬಂದು—

"ರಾಜನ್! ಪೈರಣಾಗ್ರಹಾರದಿಂದ ಬಂದ ಈ ವಿಪ್ರೋತ್ತಮನ ಅತ್ಯಧಿಕ ಅನುಭವಿಗನೂ ಶಿಷ್ಯಸಾಂಪ್ರದಾಯಕನೂ ಹಾಗೂ ಪೂಜ್ಯನೂ ಆಗಿರುವನು. ರಾಜದರ್ಶನಕ್ಕೆ ರಿಕ್ತಹಸ್ತದಿಂದ ಗಮನಿಸಬಾರದೆಂಬ ನೀತಿಯ ಮರ್ಮವನ್ನು ಇವನು ಚನ್ನಾಗಿ ಅರಿತವನಾದುದರಿಂದಲೇ 'ಕಾಷ್ಠ ಕಾಣಿಕೆ' ಯೆಂದು ಈ ಉರುವಲ ಕಟ್ಟಿಗೆಯನ್ನು ತಮ್ಮೆದುರು ತಂದು ಸುರುವಿದುದು ಸುಮಂಗಲತೆಯನ್ನು ಸೂಚಿಸುವದು" ಎಂನು ಹೇಳುವದನ್ನು ಕೇಳಿ ರಾಜನು—"ಅದು ಹೇಗೆ?" ಎಂದು ಬ್ರಾಹ್ಮಣನಿಗೆ ಪ್ರಶ್ನೆ ಮಾಡುತ್ತಿರುವಾಗಲೇ ಕಾಳಿದಾಸನು, ಮಹಾರಾಜ!

||ದಗ್ಧಂ ಖಾಂಡವಮರ್ಜುನೇನ ಹೀ ವೃಥಾ ಕಲ್ಪದ್ರುಮೈರ್ಭೂಷಿತಮ್
ದಗ್ಧಾ ವಾಯುಸುತೇನ ಹೇಮನಗರೀ ಲಂಕಾಪುರೀ ಸ್ವರ್ಣಭೂ ||
ದಗ್ಧೋ ಲೋಕಸುಖೋ ಹರೇಣ ಮದನೋ ಕಿಂತೇನ ಯುಕ್ತಂ ಕೃತಮ್
ದಾರಿದ್ರ್ಯ ಜನತಾಪಹಾರಕಮಿದಂ ಕೇನಾಪಿ ದಗ್ಧಂ ನಹಿ ||

(ಅರ್ಥ— ಅರ್ಜುನನು ಕಲ್ಪವೃಕ್ಷಗಳಿಂದ ಬೆಳೆದು ಮೆರೆಯುವ ಖಾಂಡವ ವನವನ್ನು ಸುಟ್ಟನು. ಅದರಂತೆ ಹನುಮಂತನು ರಾವಣನ ಚಿನ್ನದ ಪಟ್ಟಣವೆನ್ನಿಸಿದ ಲಂಕೆಯನ್ನು ಸುಟ್ಟನು. ಹಾಗೆಯೇ ಶಿವನು ಪ್ರಾಣಿಗಳಿಗೆ ಕ್ಷಣಿಕ ಸುಖ ನೀಡುವ ಕಾಮನುವನ್ನು ಸುಟ್ಟು ಬೂದಿ ಮಾಡಿದನು ಆದರೂ ಈ ಮೂವರೂ ಮಾಡಿದ ಕ್ರಿಯೆಗಳಿಂದ ಜನತೆಗೆ ತಾಪ ನೀಡುತಿ

ರುವ ದಾರಿದ್ರ್ಯವು ಮಾತ್ರ ಸುಟ್ಟು ಹೋಗಲಿಲ್ಲ. ನೀನು ಈ ಉರುವಲ ಕಟ್ಟಿಗೆ ಸ್ವೀಕರಿಸಿ ನನ್ನ ಬಡತನವನ್ನು ಸುಡು ಎಂದು ಬ್ರಾಹ್ಮಣನ ಹೇಳಿಕೆಯ ಆಶಯವಿದೆ) ಎಂದು ಕಾಳಿದಾಸನು ಸ್ಪಷ್ಟೀಕರಿಸಿದನು.

ಈ ಪ್ರಕಾರ ಕಾಳಿದಾಸನು ಆ ಬ್ರಾಹ್ಮಣನಿಗೊದಗಿದ ವಿಪತ್ತಿನ ಸಮಯವನ್ನು ತನ್ನಲ್ಲಿಯ ವಿದ್ವತ್ ಚಾತುರ್ಯದಿಂದ ಪರಿಹಸಿದನು. ಆಗ ಭೋಜರಾಜನಿಗೆ ಹಿಡಿಸಲಾರದಷ್ಟು ಆನಂದ! ಆ ಭರದಲ್ಲಿಯೇ ಅವನು ಮಾಧವ ಬ್ರಾಹ್ಮಣನನ್ನು ತಕ್ಕ ಬಗೆಯಿಂದ ಸತ್ಕರಿಸಿ ಅವನನ್ನು ಬೀಳ್ಕೊಟ್ಟನು.

## (೪)

ವಿದ್ಯಾಶೀಲನೂ ಜನ್ಮದರಿದ್ರನು ಆಗಿರುವ ಮಾಧವ ಬ್ರಾಹ್ಮಣನಿಗೆ ಭೋಜರಾಜನಿಂದ ಧನ-ಮಾನ-ಮರ್ಯಾದೆಗಳ ಪಾರಿತೋಷಕವು ದೊರೆತುದನ್ನು ಕೇಳಿ ಗೋದಾ ತೀರದ ನಿವಾಸಿಯಾದ ಇನ್ನೊಬ್ಬ ಬ್ರಾಹ್ಮಣನು ತಾನು ಭೋಜರಾಜನ ದರ್ಶನಕ್ಕೆಂದು ಧಾರಾನಗರಿಗೆ ಪ್ರಯಾಣ ಬೆಳಿಸಿದನು. ಇವನು ಮಾಧವ ಬ್ರಾಹ್ಮಣನಷ್ಟು ಕಲಿತವನಿಲ್ಲದಿದ್ದರೂ ಅವನಷ್ಟೇ ದರಿದ್ರನೂ ದಡ್ಡನೂ ಆಗಿದ್ದನು. ಧಾರಾನಗರಕ್ಕೆ ಹೋಗುತ್ತಲೇ ಮಾಧವನಿಗೆ ಕಾಳಿದಾಸನ ಚಾತುರ್ಯದಿಂದ ಧನ- ಮಾನಗಳ ಪ್ರಾಪ್ತಿಯಾಯಿತೆಂದು ಜನದಿಂದಣಿಯಿಂದ ತಿಳಿದನು ಹೀಗಿದ್ದ ಮೇಲೆ 'ನಾನು ಕಾಳಿದಾಸನನ್ನು ಕಂಡು ಅವನ ಸಹಾಯ ದೊರಕಿಸಿಕೊಂಡು ರಾಜನಲ್ಲಿಗೆ ಹೋಗುವದು ಯೋಗ್ಯವು' ಎಂದು ವಿಚಾರಿಸಿ ಕಾಳಿದಾಸನು ತನ್ನ ಮಂದಿರದಲ್ಲಿರುವಾಗಲೇ ಹೋಗಿ ಅವನ ಭೆಟ್ಟಿಯಾದನು. ಅವನನ್ನು ಕುರಿತು "ಸ್ವಾಮಿ! ನಾನು ದರಿದ್ರನು ವಿದ್ಯೆ ಕಲಿತವನಲ್ಲ. ಉಪಜೀವಿಕೆಯ ಸಾಧನವೇನೂ ನನಗಿರುವದಿಲ್ಲ. ಸ್ವಗ್ರಾಮದಲ್ಲಿ ಯಾಚಕವೃತ್ತಿಯಿಂದ ಏನೂ ದೊರಕುವಂತಿಲ್ಲ. ಶ್ರಮಜೀವಿಯಾಗಿ ಹೊಟ್ಟೆತುಂಬಿಕೊಳ್ಳುವ ಸಾಮರ್ಥ್ಯವೂ ನನ್ನಲ್ಲಿಲ್ಲ. ಆದರಿಂದ ನಾನು ಗ್ರಾಮ ತ್ಯಾಗ ಮಾಡಿ

ಇಲ್ಲಿಗೆ ಬಂದಿರುವೆನು ಭೋಜರಾಜನ ಔದಾರ್ಯವು ಸುತ್ತಲೂ ಜನಗಳಿಂದ ಹೊಗಳಲ್ಪಡುತ್ತಿರುವದು. ರಾಜನಿಂದ ನನಗೆ ಸ್ವಲ್ಪಾದರೂ ಸಂಭಾವನೆಯನ್ನು ಕೊಡಿಸಿದ್ದಾದರೆ ನಿಮ್ಮನ್ನು ಮರೆಯಲಾರೆನು." ಎಂದು ನುಡಿಯಲು ಕಾಳಿದಾಸನು ದಯಾರ್ದ್ರನಾಗಿ— "ವಿಪ್ರನೇ! ರಾಜನನ್ನು ಕಾಣಲು ಹೋಗುವದಕ್ಕೆ ಸ್ವಲ್ಪಾದರೂ ಕಾಣಿಕೆಯಿರಬೇಕು ಇಲ್ಲವೆ ಜಾಣ್ಮೆ ಇರಬೇಕು, ಅವಾವುದೂ ಇಲ್ಲದ ನೀನು ಅದಾವ ರೀತಿಯಿಂದ ಸನ್ಮಾನ ಪಡೆಯುವಿ? ನಿನಗೆ ಏನಾದರೂ ಬರುವದೇ" ಎಂದು ಕೇಳಲು ಆ ಬ್ರಾಹ್ಮಣನು— "ಸ್ವಾಮೀ! ನನ್ನ ತಂದೆಯು ನಾನು ಸಣ್ಣವನಿದ್ದಾಗ ತಿಥಿ-ವಾರ-ತಾರೆಗಳ ಹೆಸರುಗಳನ್ನು ಮಾತ್ರ ನನಗೆ ಕಂಠಪಾಠ ಮಾಡಿಸಿದ್ದನು ಪ್ರಪಂಚ ಪಾಶವು ಕೊರಳಿಗೆ ಬಿದ್ದ ಮೇಲಂತೂ ನಾನು ಮಾಡಿದ ಕಂಠಪಾಠವು ಕುಂಠಿತವಾಗಿದೆ" ಎನ್ನಲು ಕಾಳಿದಾಸನು ಬ್ರಾಹ್ಮಣಾ! ಹಾಗೇ ಬೇಡ, ನೀನು ಆಗ ಕಂಠಪಾಠ ಮಾಡಿದುದನ್ನು ಪುನಃ ಸ್ಮರಣೆಗೆ ತಂದುಕೊಳ್ಳು ಆನಂತರ ನನ್ನೊಡನೆ ನಿನ್ನನ್ನು ಸಭೆಗೆ ಕರೆದೊಯ್ದು ನಿನಗ ಸಂಭಾವನೆ ಕೊಡಿಸುವೆನು ಎಂದು ಹೇಳಲು ಬ್ರಾಹ್ಮಣನು ಕಾಳಿದಾಸನ ಮಂದಿರದ ಮೇಲಿನ ಉಪ್ಪರಿಗೆಯ ಅಂಕಣದಲ್ಲಿ ಒಬ್ಬನೇ ಕುಳಿತನು, ಹಾಗ ತಿಥಿವಾರಾದಿಗಳ ಹೆಸರುಗಳನ್ನು ಪುನರ್ವಾಚಿಸಿದನು. ಕ್ರಮವಾಗಿ ಯಾಗಲಿ ಕ್ರಮ ತಪ್ಪಿಯಾಗಲಿ ಅವನು ಎಲ್ಲ ಹೆಸರುಗಳನ್ನು ಮುಖದಿಂದ ಉಚ್ಚರಿಸಿ ಸ್ಮೃತಿಯಲ್ಲಿ ಇಟ್ಟುಕೊಂಡನು.

ಮುಂದೆ ತಾಸೆರಡು ತಾಸಿನ ಮೇಲೆ ಕಾಳಿದಾಸನು ಸಭೆಗೆ ಹೊರಟನು. ಆತನನ್ನು ಹಿಂಬಾಲಿಸಿ ಈ ಬ್ರಾಹ್ಮಣನು ನಡೆದನು. ಇಬ್ಬರೂ ಸಭೆಯಲ್ಲಿ ಪ್ರವೇಶಿಸಿದರು. ಕಾಳಿದಾಸನು ಭೋಜನಿಗೆ ಆ ಬ್ರಾಹ್ಮಣನನ್ನು ತೋರಿಸಿ— "ರಾಜನ್! ಈ ಬ್ರಾಹ್ಮಣೋತ್ತಮನು ಯೋಗ್ಯನಿರುವನು. ಎಂದಿಷ್ಟೇ ಹೇಳಿ ತನ್ನ ಸ್ಥಾನಕ್ಕೆ ಕುಳಿತನು. ಬಳಿಕ ಭೋಜರಾಜನು ಆ ಬ್ರಾಹ್ಮಣನನ್ನು ಕುರಿತು— "ನಿಮ್ಮ ಅಧ್ಯಯನವೆಷ್ಟಾಗಿದೆ?" ಎಂದು ಕೇಳಿದನು. ಬ್ರಾಹ್ಮಣನು ಅದಕ್ಕೆ ತಕ್ಕ ಉತ್ತರ ಕೊಡದೆ ರಾಜಾ! ಅಶ್ವಿನಿ, ನುಡಿದು ದಂಗುಗೊಂಡು ನಿಂತುಬಿಟ್ಟನು. ಅವನು ಉಚ್ಚರಿಸಿದ್ದನು.

ಅವನನ್ನು ಕಂಡು ಎಲ್ಲರೂ ಇವನೆಂಥ ಬ್ರಾಹ್ಮಣನು ಎಂದು ಬೆರಗಗೊಂಡಿದ ಮಾತನಾಡಿದರು. ಭೋಜರಾಜನಂತೂ ಕಾಳಿದಾಸನನ್ನು ನೋಡಿ— ಇದೇನು ಕಾಳಿದಾಸರೇ! ಇವನು ಯೋಗ್ಯ ಬ್ರಾಹ್ಮಣೋತ್ತಮನು ಎಂದು ಮೇಲ್ಗೈಸಿ ಹೇಳಿದ ಈ ಬ್ರಾಹ್ಮಣನಿಗೆ ನಕ್ಷತ್ರಗಳ ನಾಮಗಳೇ ಗೊತ್ತಿಲ್ಲವೆಂಬಂತೆ ತೋರುವದು. ನೀವು ಇವನ ಸಂಬಂಧವಾಗಿ ಮಾಡಿದ ಹೊಗಳಿಕೆಯು ನಮ್ಮ ಪಂಡಿತ ವರ್ಗದವರಿಂದ ತೆಗಳಿಕೆಯ ಸ್ವರೂಪಕ್ಕೆ ಬಂದಿಳಿಯಿತಲ್ಲ! ಈ ಬ್ರಾಹ್ಮಣನು ಉಚ್ಚರಿಸಿದ್ದಲ್ಲಿ ಏನಾದರೂ ಸತ್ಯಾಂಶವಿರದೇ ಹೋದರೂ ತಥ್ಯಾಂಶವಿರುವದೇ? ಎಂದು ಕೇಳಲು ಕಾಳಿದಾಸನು—

"ವಿದ್ವತ್ ಪ್ರಭುವೇ! ಪೂರ್ಣ ವಿಚಾರ ಮಾಡದೇ ಯಾರಿಗೂ ಯಾವುದಕ್ಕೂ ಹೆಸರಿಡಬಾರದೆಂಬ ನೀತಿಯನ್ನು ನೀವು ಅಲ್ಲಗಳೆಯಲಿಕ್ಕಿಲ್ಲೆಂಬ ನನ್ನ ಭರವಸೆಯನ್ನು ಮಣ್ಣುಗೂಡಿಸಬೇಡಿರಿ. ಮಹಾಜ್ಞಾನಿಯಾದ ಈ ಬ್ರಾಹ್ಮಣನು ತಾರೆಗಳ ನಾಮಗಳನ್ನು ಉಚ್ಚರಿಸಿ ತಮಗೆ ಮಂಗಲಾಶೀರ್ವಾದವನ್ನು ಮಾಡಿದ್ದನ್ನು ನೀವು ಅರಿತುಕೊಳ್ಳದೆ ಇದ್ದುದು ನಿಮಗಲ್ಲ, ಈ ಒಂಭತ್ತುನೂರಾ ಒಂಭತ್ತು ಜನ ಪಂಡಿತರಿಗೆ ದೋಷವೆಂದು ನನ್ನ ಅಭಿಮತವಿದೆ. ಎಂದು ಹೇಳಲು ರಾಜನು— "ಕವಿವರ! ಈ ಬ್ರಾಹ್ಮಣನ ಮುಖದಿಂದ ಹೊರಟ ನಾಲ್ಕೂ ತಾರೆಗಳೆಂಬ ಮುಕ್ತಾ ಫಲಗಳನು ನೀನಾವ ಅಭರಣದಲ್ಲಿ ಸೇರಿಸುವಿ? ಎಂದು ಕೇಳಲು ಕಾಳಿದಾಸನು—

"ಮಹಾರಾಜ! ಈ ನಾಲ್ಕೂ ಮುತ್ತುಗಳು ಅಮೂಲ್ಯವಾದಂಥವು. ನಿಮ್ಮ ಸಂಪತ್ತು-ಸಿರಿ-ದೈವಶಕ್ತಿ-ಶೌರ್ಯ ಈ ನಾಲ್ಕುಗಳಿಂದ ಯುಕ್ತ. ನಿನ್ನ ಕಂಠಾಭರಣಕ್ಕೆ ಇವು ಮನೋಹರವಾಗುವವು" ಎಂದೆನ್ನಲು ರಾಜನು— "ಅದು ಹೇಗೆ ಸ್ಪಷ್ಟೀಕರಿಸಬೇಕು" ಎಂದನು ಕೂಡಲೇ ಕಾಳಿದಾಸನ ಭೋಜರಾಜನ ಕಡೆಗೆ ಕೈಯೆತ್ತಿ—

|| ಅಶ್ವಿನೀ ವಸತು ತೇ ನೃಪ ಮಂದಿರೇ
ಮಂದಿರೇ ವಸತು ತೇ ಪುನರ್ವಸು ||
ರೇವತೀಪತಿ ಕನಿಷ್ಠ ಸೇವಯಾ
ಕೃತ್ತಿಕಾ ತನಯದ ಕ್ರಮೋ ಭವ ||

(ಅರ್ಥ:— "ರಾಜಾ ನಿನ್ನ ಮಂದಿರದಲ್ಲಿ ಸತತವು ಅಶ್ವ ಸಂಪತ್ತೂ, ವಿಪುಲ ಧನವೂ, ಇದ್ದಿರಲಿ ಅದರಂತೆ ನೀನು ಶ್ರೀ ಕೃಷ್ಣನ ಸೇವೆ ಮಾಡು ಮತ್ತು ಪಾರ್ವತೀ ಕುಮಾರನಂತೆ ಪರಾಕ್ರಮಿಯಾಗು)

"ರಾಜನ್! ಈ ಭಾವನೆಯಿಂದಲೇ ಬ್ರಾಹ್ಮಣನು ಆ ನಾಲ್ಕೂ ನಕ್ಷತ್ರ ಶಬ್ದಗಳನ್ನು ಉಚ್ಚರಿಸಿದನು" ಎಂದು ವಿವರಿಸಿ ಹೇಳಿದನು. ರಾಜನು ಕಾಳಿದಾಸನು ಮಾಡಿದ ಸ್ಪಷ್ಟೀಕರಣದಿಂದ ಸಂತುಷ್ಟನಾಗಿ ಆ ಬ್ರಾಹ್ಮಣನನ್ನು ಧನ—ಕನಕಗಳಿಂದ ಸತ್ಕರಿಸಿ ಅವನನ್ನು ಬೀಳ್ಕೊಟ್ಟನು.

ಬ್ರಾಹ್ಮಣನು ಕಾಳಿದಾಸನ ಉಪಕಾರವನ್ನು ಸ್ಮರಿಸುತ್ತ ತನ್ನ ಗ್ರಾಮಕ್ಕೆ ಹೋದನು.

## (೫)

ದಾರಿದ್ರ್ಯದ ಬವಣೆಗೊಳಗಾದವರಲ್ಲಿ ಸಮಸ್ಥಿತಿಯನ್ನು ಕಾಯ್ದುಕೊಂಡು ಕಾಲಹರಣ ಮಾಡುವವರೇ ವಿರಳ. ನನ್ನ ಬಡತನವು ನನಗೇ ಇರಲಿ ಅದು ನನ್ನ ಕರ್ಮಭೋಗವು. ಈ ತಿಳುವಳಿಕೆಯುಳ್ಳವರು ನಿರ್ದುಷ್ಟರು. ಆದರೆ ಸಿರಿವಂತರನ್ನು ನೋಡಿ ಮಾತ್ಸರ್ಯಭಾವನೆ ತಾಳುವವರು ಅತ್ಯಂತ ನೀಚರು. ಈ ನೀತಿಗೊಂದು ಉದಾಹರಣೆಯು ಕವಿ ರಾಜನ ಕಾಲದಲ್ಲಿ ವರ್ತಿಸಿತು ಅದಾವದೆಂದರೆ—

ಧಾರಾನಗರದ ಅತ್ಯಂತ ನೀಚ ಬಡ ಬ್ರಾಹ್ಮಣನೊಬ್ಬನಿದ್ದನು. ರಾಜನ ಸಿರಿವಂತಿಕೆಯನ್ನು ನೋಡಿ ಆವನು ಯಾವಾಗಲೂ ಸಂತಾಪಗೊಳ್ಳುತ್ತಿದ್ದನು. ದೇವರು ಪ್ರಾಣಿಗಳನ್ನು ಸಮನತೆಯಿಂದ ರಕ್ಷಿಸುತ್ತಿದ್ದರೆ ದಾರಿದ್ರ್ಯ ಪೀಡೆಯು ನನಗಷ್ಟೇ ಏಕೆ? ಈ ರಾಜನಿಗೇಕೆ ನನ್ನಂಥ ಪೀಡೆ ಇರಬಾರದು? ಎಂಬುದಾಗಿ ಅವನು ಪ್ರತ್ಯಕ್ಷವಾಗಿ ಜನತೆಯ ಮುಂದೆ ಮಾತನಾಡುತ್ತಿದ್ದನು. ಅವನ ಈ ನುಡಿಯು ಕರ್ಣೋಪಕರ್ಣವಾಗಿ ಕಾಳಿದಾಸನ ಕಿವಿಯವರೆಗೂ ತಲುಪಿತು.

ಕಾಳಿದಾಸನು ಯಾವಾಗಲೂ ದರಿದ್ರರ ಪಕ್ಷಪಾತಿಯು. ಏನಾದರೊಂದು ಯುಕ್ತಿಯಿಂದ ತನ್ನಲ್ಲಿ ಬಂದ ಬಡ ಯಾಚಕರಿಗೆ ರಾಜನಿಂದ ಸಹಾಯ ಮರ್ಯಾದೆಗಳನ್ನು ಒದಗಿಸಿಕೊಡುತ್ತಿದ್ದನು. ಸದ್ಯದ ನೀಚ ಬ್ರಾಹ್ಮಣನಿಂದ ರಾಜ್ಯನನ್ನು ಕುರಿತು ಹೊರಡುವ ದುರ್ವಾಕ್ಯಗಳನ್ನು ಕೇಳಿ ಕಾಳಿದಾಸನಲ್ಲಿ ಆ ಬ್ರಾಹ್ಮಣನ ಬಗೆಗೆ ಅಸಹ್ಯತೆ ಹುಟ್ಟಿತು. ಆದರೂ ಅದನ್ನು ತಡೆದು ಆ ಬ್ರಾಹ್ಮಣನಿಗೆ ಬುದ್ಧಿವಾದ ಹೇಳಬೇಕೆಂಬ ಉದ್ದೇಶದಿಂದ ಅವನನ್ನು ತನ್ನ ಬಳಿಗೆ ಕರೆಯಿಸಿದನು. ರಾಜನು ಪ್ರತ್ಯಕ್ಷ ದೇವಾಂಶನು ಅವನನ್ನು ನಿಂದಿಸಬಾರದು ಎಂದು ಬೋಧಿಸಿದರೂ ಅವನು ಕೇಳಲಿಲ್ಲ. ನಾನೇಕೆ ಬಡತನದಲ್ಲಿರಬೇಕು? ರಾಜನೇಕೆ ಸಿರಿವಂತನಾಗಿರಬೇಕು ? ಇವೇ ಮೂರ್ಖತನದ ಪ್ರಶ್ನೆಗಳನ್ನು ಕಾಳಿದಾಸನ ಮುಂದಿಟ್ಟನು. ಕಾಳಿದಾಸನು ತನ್ನಲ್ಲಿ—ಇವನು ಕೇವಲ ದಾರಿದ್ರ್ಯದ ತಾಪಯುಕ್ತನಾದುದರಿಂದ ಕಂಗಾಲನಾಗಿ ನುಡಿಯುವನು. ಇವನಿಗೆ ರಾಜನಿಂದ ಹೆಚ್ಚಿಗೆ ಧನವನ್ನು ಕೊಡಿಸಿದರೆ ರಾಜನ ಬಗೆಗೆ ಇವನಲ್ಲುಂಟಾದ ಮತ್ಸರ ಉಳಿಯಲಾರದು ಎಂದು ತಿಳಿದನು. ಹಾಗು ಬ್ರಾಹ್ಮಣನನ್ನು ಕುರಿತು—"ಬ್ರಾಹ್ಮಣಾ! ನಿನ್ನ ಬಡತನ ದೂರಾಗುವದಕ್ಕೆ ರಾಜನಿಂದ ಸಹಾಯ ಮಾಡಿಸುವೆನು. ಆದರೆ ನೀನು ನನ್ನೊಡನೆ ಸಭೆಗೆ ಬರಬೇಕು ನೆರೆದ ಬ್ರಾಹ್ಮಣರಲ್ಲಿ ಸೇರಿ ನಿನ್ನ ಸರತಿಯು ಬಂದ ಕೂಡಲೇ ರಾಜನೆದುರು ಹೋಗಿ— ರಾಜಾ! ನಿನಗೆ ಜಯವಾಗಲಿ ಎಂದಿಷ್ಟೇ ಆಶೀರ್ವಚನ ನುಡಿದು ಬಿಡು ಇಷ್ಟರಿಂದಲೇ ನಿನ್ನ ದಾರಿದ್ರ್ಯದ ಕೆಲವಂಶ ದೂರಾಗುವಷ್ಟು ದ್ರವ್ಯವು ಮೆಚ್ಚುಗೆಯಾಗಿ ಸಿಕ್ಕೇ ಸಿಗುತ್ತದೆ ಎಂದು ಹೇಳಿ ಅವನನ್ನು ಕರಕೊಂಡು ಹೋಗಿ ಬ್ರಾಹ್ಮಣರ ಗುಂಪಿನ ಕಡೆಗೆ ಕಳಿಸಿದನು.

ಆ ಬ್ರಾಹ್ಮಣನು ಮೊದಲೇ ನಿಂತನು. ರಾಜನನ್ನು ಪ್ರತ್ಯಕ್ಷ ಕಂಡು ಧಿಕ್ಕರಿಸುವ ಸಮಯವು ಇದುವರೆಗೂ ಆತನಿಗೆ ದೊರೆತಿರಲಿಲ್ಲ ಕಾಳಿದಾಸನು ಹೇಳಿದಂತೆ ಆಶೀರ್ವಾದ ಮಾಡುವ ಬದಲು ರಾಜನನ್ನು ಶಪಿಸಿ ಬರುವದೇ ಯುಕ್ತ ಎಂದು ನಿರ್ಧರಿಸಿದನು.

ಆಯಿತು ಕೂಡಿದ ಬ್ರಾಹ್ಮಣರೆಲ್ಲರು ಸರತಿಯಂತೆ ರಾಜನೆದುರ ಹೋಗಿ ಆಶೀರ್ವದಿಸಿ ಮೆಚ್ಚುಗೆ ಪಡೆದುಕೊಂಡು ಹಿಂದಿರುಗಿದರು. ಕಡೆಗೆ

ಈ ನೀಚ ಬ್ರಾಹ್ಮಣನ ಸರತಿಯು ಬಂದಿತು. ಅವನು ಬೆಚ್ಚದೆ ಬೆದರದೆ ಹೋಗಿ ರಾಜನೆದುರು ನಿಂತ ರಾಜಾ! ನಿನಗೆ ಕ್ರಿಪೀಡಾಸ್ತು ದಿನೇ ದಿನೇ ಎಂದು ಗಟ್ಟಿಯಾಗಿ ಉಚ್ಚರಿಸಿದನು. ರಾಜನು ವಿಚಾರಕ್ಕೊಳಗಾದನು. ಕೂಡಿದವರೆಲ್ಲ ಆ ನೀಚ ಬ್ರಾಹ್ಮಣನನ್ನು ನಿಂದಿಸಹತ್ತಿದರು. ಕಾಳಿದಾಸನು ತನ್ನಲ್ಲಿ— "ಈ ಬ್ರಾಹ್ಮಣನ ನೀಚತನದ ವೃತ್ತಿಯು ದೂರವಾಗುವ ಸಮಯ ಬಂದೊದಗಿತು ಎಂದರಿತುಕೊಂಡು ಕಿಲಕಿಲು ನಗುತ್ತ ಕುಳಿತಿದ್ದನು.

ಬ್ರಾಹ್ಮಣನು ತನಗೆ ಶಪಿಸಿದನಲ್ಲ! ಎಂದು ರಾಜನು ಆಲೋಚನೆ ಮಾಡುತ್ತ ಅತ್ತಿತ್ತ ನೋಡುವಷ್ಟರಲ್ಲಿ ಅವನ ದೃಷ್ಟಿಯು ಕಾಳಿದಾಸನ ಮೇಲೆ ಬಿದ್ದಿತು. ಅವನ ಹಸನ್ಮುಖವನ್ನು ಕಂಡು ಭೋಜರಾಜನು ಸಿಟ್ಟಿನ ಅಭಿಪ್ರಾಯವನ್ನು ವ್ಯಕ್ತಪಡಿಸಿ—ಇದೇನು ಕಾಳಿದಾಸ! ಈ ದುಷ್ಟ ಬ್ರಾಹ್ಮಣನು ನನ್ನನ್ನು ಶಪಿಸಿದುದಕ್ಕೆ ನಿನಗೆ ಸಂತೋಷವೇ? (ರಾಜದೂತರನ್ನು ಕುರಿತು— "ಎಲೋ! ಈ ಕಾಳಿದಾಸನನ್ನು ಮೊದಲು ಸಭೆಯಿಂದ ಹೊರ ನೂಕಿ ಈ ನೀಚ ಬ್ರಾಹ್ಮಣನನ್ನು ಸೆರೆ ಹಾಕಿರಿ, ಎಂದು ಆಜ್ಞೆ ಮಾಡಿದನು. ನೀಚ ಬ್ರಾಹ್ಮಣನು ಗದಗದನೇ ನಡುಗಹತ್ತಿದನು. ಕಾಳಿದಾಸನ ರಾಜಾಜ್ಞೆಗೆ ಬೆದರದೆ ರಾಜನ ಮುಂದೆ ನಿಂತು—

"ರಾಜನ್! ಅಜ್ಞಾನ ವಶದಿಂದ ಸಿಟ್ಟಿನ ಕೈಯಲ್ಲಿ ಬುದ್ಧಿಯನ್ನು ಕೊಡುವ ಮೂರ್ಖರುಂಟೇ? ಈ ಬ್ರಾಹ್ಮಣನು ಧಾರಾನಗರದ ಪ್ರತಿಷ್ಠಿತ ವಿಪ್ರನು. ಇದುವರೆಗೂ ಈ ಸಭೆಯ ಪ್ರವೇಶವು ಅವನಿಗಿರಲಿಲ್ಲ. ಇಂದಿನ ಶುಭ ದಿನದಲ್ಲಿ ರಾಜನಿಗೆ ಆಶೀರ್ವಾದ ಮಾಡಿ ಕೃತಾರ್ಥನಾಗಬೇಕೆಂದ ಬಂದ ಇವನಿಗೆ ಕಾರಾಗ್ರಹವಾಸವೇ? ಸಾಕು! ಸಾಕು! ನಿಮ್ಮ ದೂತರು ನನ್ನನ್ನು ಸ್ಪರ್ಶ ಮಾಡುವ ಮುನ್ನವೇ ಈ ಸಭೆಯಿಂದ ಅಷ್ಟೇ ಏಕೆ ನಿನ್ನ ರಾಜ್ಯದಿಂದ ಹೊರ ಹೊರಟು ಹೋಗುವೆನು." ನುಡಿಯುತ್ತಿರುವಾಗಲೇ ಭೋಜರಾಜನು "ಕಾಳಿದಾಸ! ಸೈರಿಸು, ಸೈರಿಸು, ಈ ಬ್ರಾಹ್ಮಣನ ಶಾಪವನ್ನು ನಾನು ಅದಾವ ಕಾರಣದಿಂದ ಪದರಿಗೆ ಹಾಕಿಕೊಳ್ಳಲಿ? ಶಾಪಿತ ವಾಕ್ಯವು ಅನರ್ಥಕವಲ್ಲವೇ?" ಎಂದು ಕೇಳಲು ಕಾಳಿದಾಸನು—

"ರಾಜ! ನಿನ್ನ ... ಯದ್ದರಿಂದ ಅನರ್ಥಕವೆಂದು ನಾನು ಅನಿವಾರ್ಯವಾಗಿ ಹೇಳಬೇಕಾಯಿತು. ಇದಕ್ಕೊ ನನ್ನನ್ನ ಕ್ಷಮಿಸ ಬೇಡಿರಿ" ಎಂದೆನ್ನಲು ಭೋಜರಾಜನು:— "ಕವಿವರ! ಕಾಳಿದಾಸ! ನೀನು ನನಗೆ ಅಜ್ಞಾನಿ ಎಂದು ಬಗೆದು ನುಡಿದುದು ಈ ಬ್ರಾಹ್ಮಣನು ಉಚ್ಚರಿಸಿದ ಶಾಪ ವಚನದಿಂದ ಹೆಚ್ಚಿನ ತಾಪದಾಯಕವು ಶಾಪ ವಚನವಲ್ಲ ಆಶೀರ್ವಚನವು. ಇದನ್ನು ಶನಃ ಶನಃ ನಿಮಗೆ ತಿಳಿಸುವೆನು" ಎಂದೆನ್ನಲು ಭೋಜರಾಜನು— "ವಿದ್ವದ್ರತ್ನವೇ! ಅಂದೆಂತು? ಸ್ಪಷ್ಟವಾಗಿ ಹೇಳಬೇಕು" ಎಂದನು. ಆಗ ಕಾಳಿದಾಸನು— ಧಾರಾಪಟ್ಟಣಾಧೀಶನೇ! (ಎಂದ್ರಾ ಕೈಯೆತ್ತಿ)

ಪ್ರದಾನೇ ವಿಪ್ರಪೀಡಾಸ್ತು ।
ಪುತ್ರಪೀಡಾಸ್ತು ಭೋಜನೆ ॥
ಶಯನೇ ಪತ್ನಿ ಪೀಡಾಸ್ತು ।
ತ್ರಿಪೀಡಾಸ್ತು ದಿನೇ ದಿನೇ ॥

(ಅರ್ಥ— ರಾಜನ್! 'ದಾನ ಕೊಡು' ಎಂದು ನಿನ್ನನ್ನು ಬ್ರಾಹ್ಮಣರು ಪೀಡಿಸಲಿ, ನೀನು ಭೋಜನಕ್ಕೆ ಕುಳಿತಾಗ ನಿನ್ನನ್ನು ನಿನ್ನ ಮಕ್ಕಳು ಕಾಡಿಸಲಿ, ಹಾಗು ನಿಶ್ಚಿಂತೆಯಿಂದ ಮಲಗಿರುವಾಗ ನಿನಗೆ ನಿನ್ನ ಹೆಂಡತಿಯ ಉಪದ್ರವವಾಗಲಿ" ಈ ಪ್ರಕಾರ ಮೂರು ಪೀಡೆಗಳು ನಿತ್ಯವೂ ನಿನ್ನನ್ನು ಬಾಧಿಸುತ್ತಲೇ ಇರಲಿ.)

ರಾಜಾ! ಈ ಪ್ರಕಾರ ಬ್ರಾಹ್ಮಣನು ಮಾಡುವ ಆಶೀರ್ವಚನ ವ್ಯಕ್ತವಿದೆ ಎಂದು ಕಾಳಿದಾಸನು ವಿವರಣೆ ಮಾಡಿದುದನ್ನು ಕೇಳಿ ಭೋಜರಾಜನೂ ಎಲ್ಲ ಪಂಡಿತರೂ ಸೈ ಸೈ ಎಂದರು.

ತದನಂತರ ಭೋಜರಾಜನು ಆ ಬ್ರಾಹ್ಮಣನಿಗೆ ಕಾಳಿದಾಸನ ಹೇಳಿಕೆಯಂತೆ ಹತ್ತು ಸಾವಿರ ಹೊನ್ನುಗಳನ್ನು ಮೆಚ್ಚುಗೆಯಾಗಿ ಕೊಟ್ಟನು.

ನೀಚತನದ ಶಿಖರಕ್ಕೇರಿದ ಬ್ರಾಹ್ಮಣನ ದುರ್ನೀತಿಯೂ ದರ್ಗುಣಗಳೂ ದಾರಿದ್ರ್ಯವೂ ವಿಚ್ಛೇದನವಾದವು. ಅವನೊಬ್ಬ ಧಾರಾನಗರದಲ್ಲಿಯೆ ಶ್ರೇಷ್ಠ ಗೃಹಸ್ಥನಾಗಿ ಎಲ್ಲರ ಹೊಗಳಿಕೆಗೆ ತಕ್ಕವನಾದನು.

## (೬)

ಭೋಜರಾಜನ ಸಭೆಯಲ್ಲಿ ಹಲವು ಪಂಡಿತರಿದ್ದರು. ಅವರಲ್ಲಿಯ ಕೆಲವರು ಮಾತ್ರ ಕಾಳಿದಾಸನೊಡನೆ ಅಹಿತ ವೃತ್ತಿಯಿಂದ ವರ್ತಿಸುತ್ತಿದ್ದರು. ಅವರು ಕಾಳಿದಾಸನ ಮಾನಖಂಡನೆಯಾಗುವ ದಿನವನ್ನು ಜಾತಕಪಕ್ಷಿಯೋಪಾದಿ ಎದುರು ನೋಡುತ್ತಿದ್ದರು. ಆದರೆ ಅವರ ಉಪೇಕ್ಷೆ ಸಫಲವಾಗುವ ಸಮಯವು ಇದುವರೆಗೆ ಒಂದು ಬಾರಿಯೂ ಸಹ ಪ್ರಾಪ್ತವಾಗಿರಲಿಲ್ಲ.

ಒಂದು ದಿವಸ ಒಬ್ಬ ಬಡ ಬ್ರಾಹ್ಮಣನು ದ್ರವ್ಯಾಪೇಕ್ಷೆಯಾಗಿ ಧಾರಾನಗರಕ್ಕೆ ಬಂದನು. ಅವನು ನೋಡುವದಕ್ಕೆ ಸುಂದರನೂ ಗಟ್ಟಿಮುಟ್ಟನೂ ಆಗಿದ್ದನು. ಮಾತ್ರ ಅವನಲ್ಲಿ ವಿದ್ಯೆ-ಬುದ್ಧಿಗಳೂ ಲವಲೇಶವಿದ್ದಿರಲಿಲ್ಲ. ಇಂಥ ಬ್ರಾಹ್ಮಣನು ಅಲ್ಲಿಗೆ ಹೋಗಿ ಭೋಜರಾಜನ ಸಭೆಯಲ್ಲಿಯ ನಾಲ್ಕಾರು ಜನ ವಿದ್ವಾಂಸರಿಗೆ ಭೆಟ್ಟಿಯಾಗಿ—"ನನಗೆ ಭೋಜರಾಜನಿಂದ ದ್ರವ್ಯ ದಾನ ಕೊಡಿಸಬೇಕು" ಎಂದು ಕೇಳಿಕೊಂಡನು. ಹಾಗೂ ಅವರಿಗೆ ನಿರಭಿಮಾನದಿಂದ ತಾನು ಕಲಿತವನಲ್ಲವೆಂದೂ ಯಾವದೊಂದು ಚತುರತೆಯು ಇಲ್ಲದವನೆಂದೂ ಅವರಿಗೆ ಹೇಳಿಕೊಂಡನು. ಆದರೆ ಅವರಿಂದೇನಾಗಬೇಕಾದುದು? ರಾಜನಿಂದ ಆ ಬ್ರಾಹ್ಮಣನಿಗೆ ಸಂಭಾವನೆಯೊದಗಿಸಿ ಕೊಡುವ ಜಾಣ್ತನವೇ ಅವರಲ್ಲಿದ್ದಿರಲಿಲ್ಲ. ಅವರೆಲ್ಲರೂ ಕೇವಲ ಕಾಳಿದಾಸನನ್ನು ಗೇಲಿಮಾಡುವ ವಿಚಾರದಲ್ಲಿ ಬಲ್ಲಿದವರಾಗಿದ್ದರು. ಈಗ ದ್ರವ್ಯಾಪೇಕ್ಷರಾಗಿ ಬಂದಿದ್ದ ಬ್ರಾಹ್ಮಣನನ್ನು ಪ್ರೇರೆಪಿಸಿ ಆ ಕಾರ್ಯ ಸಾಧಿಸುವದಕ್ಕೆ ಮನಸ್ಸು ಮಾಡಿದರು. ಅವರೆಲ್ಲರೂ ಆ ಬ್ರಾಹ್ಮಣನನ್ನು ಕುರಿತು—"ಬ್ರಾಹ್ಮಣ! ನಾವು ಹೇಳಿದಂತೆ ನೀನು ಕೇಳಿದಿಯಾದರೆ ನಿನಗೆ ವಿಪುಲ ದ್ರವ್ಯ ದೊರೆಯುವದು. ಅದಾವುದೆಂದರೆ ನೀನು ಯೋಗಿಯ ವೇಷ ಧರಿಸಿ ಒಂದು ಶಿವಾಲಯದಲ್ಲಿ ಕುಳಿತುಕೊಳ್ಳು ನಮ್ಮಲ್ಲಿಯ ನಾಲ್ವರು ನಿನ್ನ ಶಿಷ್ಯರಾಗಿ ನಿನ್ನ ಬಳಿಯಲ್ಲಿ ಸೇವೆ ಮಾಡಿಕೊಂಡು ಇರುವರು. ಹಾಗು

ಬಂದ ಜನರಿಗೆಲ್ಲ ನಾವು ಈ ಯೋಗಿಯು ಕಾಳಿದಾಸನ ಗುರುವು ಎಂದು ಹೇಳುವೆವು. ನೀನು ಮಾತ್ರ ಯಾರೊಡನೆಯೂ ಮಾತಾಡಬೇಡ. ಕೇವಲ ತಲೆಯನ್ನಲ್ಲಾಡಿಸಿ 'ಆಹುದು' 'ಅಲ್ಲ' ಎಂಬ ಭಾವವನ್ನು ಮಾತ್ರ ಸೂಚಿಸಬೇಕು. ಇಷ್ಟೊಂದು ನಿನ್ನ ಒಪ್ಪಿಗೆಯಾದರೆ ನಾವು ನಿನಗೆ ದ್ರವ್ಯಪ್ರಾಪ್ತಿಯಾಗುವ ಬಗೆಗೆ ಮುಂದಿನ ವ್ಯವಸ್ಥೆ ಮಾಡುವೆವು. ಎಂದು ಹೇಳಲು ಆ ಬ್ರಾಹ್ಮಣನು ಕುಹಕರಾದ ಆ ಪಂಡಿತರ ವಾಗ್ಜಾಲಕ್ಕೆ ಮೋಹಿಸಿ 'ಅಂತೆಯೇ ಆಗಲಿ' ಎಂದು ಒಪ್ಪಿಕೊಂಡನು. ಬಳಿಕ ಪಂಡಿತರು ತಮ್ಮಲ್ಲಿಯ ನಾಲ್ವರನ್ನು ಶಿಷ್ಯರನ್ನಾಗಿಸಿ ಆ ಬ್ರಾಹ್ಮಣ ಜೊತೆಗೆ ಕಳಿಸಿಕೊಟ್ಟರಲ್ಲದೆ ವೆಚ್ಚಕ್ಕಾಗಿ ಸ್ವಲ್ಪ ಹಣವನ್ನು ತಮ್ಮಲ್ಲಿ ವಂತಿಕೆಯಿಂದ ಕೂಡಿಸಿ ಆ ಬ್ರಾಹ್ಮಣನ ಕೈಗೆ ಕೊಟ್ಟು ಕಳಿಸಿದರು.

ಬ್ರಾಹ್ಮಣನೂ ಆತನ ನಾಲ್ವರು ಕೃತಕ ಶಿಷ್ಯರೂ ಅಲ್ಲಿಂದ ನೇರವಾಗಿ ನಗರದ ಹೊರಗಿನ ಒಂದು ದೇವಾಲಯಕ್ಕೆ ಬಂದರು. ಗರ್ಭಗುಡಿಯಲ್ಲಿ ಸೇರಿ ಆ ಬ್ರಾಹ್ಮಣನನ್ನು ಯೋಗಿಯ ಸ್ವರೂಪಕ್ಕೆ ವೇಶಾಂತರಿಸಿದರು. ನಂತರ ದೇವಾಲಯದ ಒಂದು ವಿಶಾಲ ಸ್ಥಳದಲ್ಲಿ ಆ ಯೋಗಿಯನ್ನು ಬಲು ಅಟ್ಟಹಾಸದಲ್ಲಿ ಕುಳ್ಳಿರಿಸಿದರು. ಮರುದಿನ ದೇವದರ್ಶನಕ್ಕೆ ಬಂದವರು ಅಂಕಣದಲ್ಲಿ ಕುಳಿತಿರುವ ಯೋಗಿಯನ್ನು ಕುತೂಹಲಪೂರ್ವಕ ನೋಡಹತ್ತಿದರು. ಹಾಗು ಮುಂದೆ ಬಂದು ಆ ಶಿಷ್ಯ ವರ್ಗದವರಿಂದ ಯೋಗಿಯ ವೃತ್ತಾಂತವನ್ನು ಕೇಳಿಕೊಳ್ಳಹತ್ತಿದರು. 'ಇವರು ಕಾಳಿದಾಸ ಕವಿವರನ ಗುರುಗಳು. ನಾವು ಈ ಯೋಗಿಗಳ ಶಿಷ್ಯರು. ನಿನ್ನೆಯ ಉತ್ತರ ಭಾರತದಲ್ಲಿಯ ತೀರ್ಥಗಳನ್ನು ಸಂಚರಿಸಿ ಇಲ್ಲಿಗೆ ಬಂದಿರುವೆವು ಇಲ್ಲಿ ಒಂದೆರಡು ದಿನ ಕಳೆದು ದಕ್ಷಿಣದಲ್ಲಿಯ ರಾಮೇಶ್ವರದತ್ತ ಹೋಗುವೆವು' ಎಂದು ಕೇಳಿದವರಿಗೆಲ್ಲ ಅವರು ಇದೇ ಪ್ರಕಾರ ಹೇಳುತ್ತಿದ್ದರಲ್ಲದೇ "ಈ ನಮ್ಮ ಯೋಗಿಗಳು ತೀರ್ಥಾಟನೆ ಮುಕ್ತಾಯಗೊಳ್ಳುವವರೆಗೂ ಮೌನವ್ರತದಿಂದ ಕಾಲ ಕಳೆಯುವರು. ಯಾರೂ ಇವರನ್ನು ಮಾತಾಡಿಸಿ ಇವರ ವ್ರತಕ್ಕೆ ವ್ಯತ್ಯಯ ಇರಕೂಡದು" ಎಂದು ಸ್ಪಷ್ಟವಾಗಿ ಹೇಳಹತ್ತಿದರು. ಇದರಂತೆ ಒಂದೆರಡು ದಿನ ಕಳೆಯಲು ಯೋಗಿಯ ಆಗಮನದ

ವಾರ್ತೆಯು ನಗರದಲ್ಲೆಲ್ಲ ಹರಡಿತು. ಪ್ರತ್ಯಕ್ಷ ದೇವಾಲಯದಲ್ಲಿ ತನ್ನ ಶಿಷ್ಯರೊಡನೆ ಬಂದಿಳಿದಿರುವನೆಂಬ ವಾರ್ತೆಯು ಭೋಜರಾಜನ ಕಿವಿಯ ವರೆಗೂ ತಾಗಿತು. ಕಾಳಿದಾಸನಿಗೆ ಮಾತ್ರ ತಿಳಿದಿರಲಿಲ್ಲ. ರಾಜನು ಆಗಲೇ ಕಾಳಿದಾಸನನ್ನು ಕರೆಯಿಸಿ—"ಕಾಳಿದಾಸ! ಈ ನಮ್ಮ ನಗರಕ್ಕೆ ನಿನ್ನ ಗುರುಮೂರ್ತಿಯು ಆಗಮನವಾಗಿದೆ ಎಂದು ವಾರ್ತೆಯು ಹಸರಿಸಿದೆ. ನೀನು ನಮಗೇಕೆ ಹೇಳಲಿಲ್ಲ?" ಎಂದು ಕೇಳಲು ಕಾಳಿದಾಸನು ಆಶ್ಚರ್ಯಚಕಿತನಾಗಿ ಅಂತರ್ದೃಷ್ಟಿಯಿಂದ ಆ ಗುರುಮೂರ್ತಿಯ ನಾಟಕವನ್ನೂ ಆ ನಾಟಕಕ್ಕೆ ಪ್ರೋಪಕರಾದವರನ್ನೂ ನಿರೀಕ್ಷಿಸಿ ಅರಿತುಕೊಂಡನು. ಹಾಗೂ ಅವನು ರಾಜನನ್ನು ಕುರಿತು—"ಮಹಾರಾಜಾ! ನನ್ನ ಗುರುಮೂರ್ತಿಯ ಆಗಮನದ ವಾರ್ತೆಯು ಇದುವರೆಗೂ ನನಗೆ ತಿಳಿದಿರಲಿಲ್ಲ. ವಿಚಾರ ಮಾಡಿಕೊಂಡು ಬಂದು ನಿಮಗೆ ಶ್ರುತಪಡಿಸುವೆನು" ಎಂದು ಹೇಳಿದನು. ನಂತರ ಅವನು ರಾತ್ರಿಯಲ್ಲಿ ಆ ಗುರುಮೂರ್ತಿಯಿರುವ ಸ್ಥಾನವನ್ನು ತಿಳಿದು ಅಲ್ಲಿಗೇ ಹೋದನು. ಆ ಯೋಗಿವರ್ಯನಿಗೆ ನಮಸ್ಕರಿಸಿದನು. ಅವನ ಸುತ್ತಲೂ ಕೈಕಟ್ಟಿಕೊಂಡು ನಿಂತ ನಾಲ್ವರು ಶಿಷ್ಯರನ್ನೂ ಹೊರಕ್ಕೆ ಕಳಿಸಿದನು. ಬಳಿಕ ಆತನನ್ನು ಕುರಿತು—"ಎಲೈ ಬ್ರಾಹ್ಮಣನೇ! ನಾನು ಯಾರೆಂಬುದನ್ನು ನೀನು ಗುರುತಿಸುವಿಯಾ? ಕಾಳಿದಾಸನ ಗುರುವು ನಾನೆಂದು ನೀನು ಹೇಳಿಕೊಳ್ಳುವಿಯಲ್ಲವೇ. ಅದೇ ಕಾಳಿದಾಸ ನಾನು" ಎಂದು ಕಾಳಿದಾಸನು ನಾನು" ಎಂದು ಕಾಳಿದಾಸನು ನುಡಿಯಲು ಆ ಬ್ರಾಹ್ಮಣನು ಭಯದಿಂದ ಭಯಬೆದರಿ "ಮಹಾಶಯ! ಇಲ್ಲಿಯ ಆಸ್ಥಾನದ ನಾಲ್ಕಾರು ಜನ ಪಂಡಿತರ ಸಲಹೆ ಹಾಗೂ ಪ್ರಯತ್ನದ ಮೇರೆಗೆ ನಾನು ಕೇವಲ ದ್ರವ್ಯದಾಸೆಯ ಉದ್ದೇಶವನ್ನಿಟ್ಟುಕೊಂಡೇ ವೇಷಾಂತರಿಸಿ ಇಲ್ಲಿ ಕುಳಿತಿರುವೆನು. ಅವರ ಹೇಳಿಕೆಯನ್ನು ನಂಬಿ ನಾನು ಈ ಕಪಟತನವನ್ನು ಅನುಸರಿಸಿದ್ದೇನೆ ಇದು ನನ್ನ ಅಪರಾಧವಾಯಿತು ಕ್ಷಮಿಸಿರಿ" ಎಂದು ಆ ಬ್ರಾಹ್ಮಣನು ದೀನವಾಣಿಯಿಂದ ಯಾಚಿಸಿದನು ಅದರಿಂದ ಕಾಳಿದಾಸನಲ್ಲಿ ಕರುಣೆ ಹುಟ್ಟಿ—"ಎಲೋ ಬ್ರಾಹ್ಮಣ! ನೀನು ಕೇವಲ ದುಡ್ಡಿನ ಆಶೆಯನ್ನಿಟ್ಟು ಕೊಂಡಿರುವದರಿಂದ ನಾನು ನಿನ್ನನ್ನು ಕ್ಷಮಿಸುವೆನು. ಇನ್ನು ನಾನು ಹೇಳಿದಂತೆ ನೀನು ವರ್ತಿಸು. ಅದಾವ ಹೇಳಿಕೆಯೆಂದರೆ— ಭೋಜರಾಜನು ಬಹು ಮರ್ಯಾದೆ ಪೂರ್ವಕ ನಿನ್ನನ್ನು

ಸಭೆಗೆ ಕರೆಯಿಸಿ ಸ್ವಾಗತಿಸುವನು. ಆಗ ಆ ರಾಜನು ನಿನಗೆ ಏನಾದರೂ ಪ್ರಶ್ನೆ ಮಾಡಿದರೆ ಉತ್ತರ ಕೊಡುವ ಸಾಹಸ ಮಾಡಬೇಡ ಮೌನವಾಗಿಯೇ ಇರಬೇಕು. ಪ್ರಸಂಗವು ತೀರಾ ಮೀರಿ ಬಂದಲ್ಲಿ ಏನೊಂದು ಮಾತಾಡದೆ ನನ್ನ ಕಡೆಗೆ ಬೆರಳು ಮಾಡಿ ನನ್ನನ್ನು ತೋರಿಸು. ಅಂದರೆ ನೀನು ಇನ್ನರೆಗೆ ಧರಿಸಿದ ವೇಷದ ಪರಿಣಾಮ ಫಲವು ಸಿದ್ಧಿಸುವದು, ಎಂದು ಹೇಳಲು ಬ್ರಾಹ್ಮಣನು ಕಾಳಿದಾಸನ ಹೇಳಿಕೆಗೆ ಒಡಂಬಟ್ಟನು. ನಂತರ ಕಾಳಿದಾಸನು ತನ್ನ ಮನೆಗೆ ಹಿಂದಿರುಗಿದನು.

ಮರುದಿನ ಭೋಜರಾಜನು ಕಾಳಿದಾಸನ ಗುರುವಿನನ್ನು ರಾಜವೈಭವದಿಂದ ದರಬಾರಿಗೆ ಕರೆಯಿಸಿಕೊಂಡನು. ಬಹು ಅಮೂಲ್ಯ ರತ್ನಖಚಿತ ಸಿಂಹಾಸನದ ಮೇಲೆ ಕುಳ್ಳಿರಿಸಿದನು. ಆ ಮೇಲೆ ಭೋಜರಾಜನು ಕಾಳಿದಾಸನನ್ನು ಕುರಿತು--"ಕವಿವರ! ನಿನ್ನ ಗುರುವಿನೊಡನೆ ಭಾಷಣ ಮಾಡಿ ಧನ್ಯನಾಗಬೇಕೆಂಬ ಬಯಕೆ ನನ್ನದಾಗಿದೆ" ಎಂದೆನ್ನಲು ಕಾಳಿದಾಸನು-- ಪ್ರಭುವೆ! ನನ್ನ ಗುರುಗಳು ಸಮರ್ಥರೇ ಇರುವರು ಎಂದು ಹೇಳಿದನು. ಆಗ ಭೋಜರಾಜನು ಮಹಾನ್! ಲಂಕಾಧೀಶ ದಶಮುಖನನ್ನು ಕೆಲವರು "ರಾವಣ ಕೆಲವರು ರಾಮಣ" ಹೀಗೆ ಬೇರೆ ಬೇರೆ ನಾಮಗಳಿಂದ ಉಚ್ಚರಿಸುವವರು. ಇವೆರಡೂ ನಾಮಗಳಲ್ಲಿ ನೈಜವಾದ ನಾಮಧೇಯವೇನು? ಎಂದು ಕೇಳಿದನು. ಆ ಬ್ರಾಹ್ಮಣನು ಈ ಮೊದಲು ಎಂದೂ ಇಂಥ ಸಭೆಯನ್ನೇ ಕಂಡಿರಲಿಲ್ಲ ಹಾಗೂ ಸಭೆಯಲ್ಲಿ ಮಾಂದ್ಯನಾದ ಅವನಿಗೆ ಮಾತಾಡುವ ಪ್ರಸಂಗವೂ ಬಂದಿರಲಿಲ್ಲ. ಆದರಿಂದಾಗಿ ಅವನು ಕಕ್ಕಾವಿಕ್ಕಿಯಾಗಿ ದಿಗಿಲುಗೊಂಡನು. ಕಾಳಿದಾಸನು ಅವನಿಗೆ ಸೂಚಿಸಿದಂತೆ ಅವನನ್ನು ತನ್ನ ಬೆರಳಿನಿಂದ ನಿರ್ದೇಶಿಸುವದನ್ನೂ ಮರೆತುಬಿಟ್ಟನು. ಮೇಲಾಗಿ ಭೋಜರಾಜನು ಅವನೆದುರಿನಲ್ಲಿ ಕುಳಿತು ಉತ್ತರ ಶ್ರವಣ ಮಾಡುವ ತನ್ನ ಆತ್ಮಾತುರತೆಯನ್ನು ವ್ಯಕ್ತಪಡಿಸುತ್ತಿದ್ದನು. ಈ ಎಲ್ಲ ಕಾರಣಗಳ ಮೂಲಕ ಅವನಲ್ಲಿ ಕಾಳಿದಾಸನು ತನಗೆ ವಿಧಿಸಿದ ನಿಯಂತ್ರಣವೇ ಉಳಿಯಲಿಲ್ಲ. ಆದರಿಂದ ಅವನು ಭೋಜರಾಜನ ಪ್ರಶ್ನೆಗೆ ತಡ ಮಾಡದೇ "ರಾಭಣ" ಎಂಬುದಾಗಿ

ಒಂದೆ. ಟೊಣಪ ಉತ್ತರವನ್ನು ಕೊಟ್ಟು ಹೌಹಾರಿ ಕುಳಿತನು.

ಕಾಳಿದಾಸನ ಗುರುಮುಖದಿಂದ ಉದ್ಗಳಿತವಾದ ಉತ್ತರವನ್ನು ಕೇಳಿ ರಾಜನು ಚಕಿತನಾಗಿ ಮತ್ತೆ ಅವನನ್ನು ಕುರಿತು "ಸ್ವಾಮೀನ್ ! ತಾವು "ರಾಭಣ" ಎಂಬುದಾಗಿ ರಾವಣನ ಹೆಸರಿಗೆ ಪ್ರತಿಯಾಗಿ ಹೇಳಿದಿರಿ. ಆದರೆ ಅದು ಹೇಗೆ ?" ಎಂದು ಕೇಳಲು ಆ ವೇಷಧಾರಿಯು ಕಾಳಿದಾಸನನ್ನು ತನ್ನ ಬೆರಳಿನಿಂದ ರಾಜನಿಗೆ ತೋರಿಸಿದನು.

ಬ್ರಾಹ್ಮಣನು ತನ್ನನ್ನು ತೋರಿಸುವದೊಂದೇ ತಡ, ಕಾಳಿದಾಸನು ಭೋಜರಾಜನು ಮರುಮಾತಾಡಲು ಅವಕಾಶ ಕೊಡದೇ ಅವನನ್ನು ಕುರಿತು–

ಭ ಕಾರೋ ಕುಂಭಕರ್ಣ
ಭಕಾರಶ್ಚ ವಿಭೀಷಣಂ ||
ತಯೋರ್ಜ್ಯೇಷ್ಠ: ಕುಲಶ್ರೇಷ್ಠೋ
ಭಕಾರೋ ಕಿಂಚನ ವಿದ್ಯತೇ ||

(ಅರ್ಥ–ರಾಜಾ! ಕುಂಭಕರ್ಣನ ಹೆಸರಿನಲ್ಲಿ ಭಕಾರವಿರುವದು, ಅದ ಅದರಂತೆ ವಿಭೀಷಣನ ಹೆಸರಿನಲ್ಲಿ ಭಕಾರವಿರುವದು. ಅಂದಮೇಲೆ ಇಬ್ಬರಿಗಿಂತಲೂ ಹಿರಿಯ ಸಹೋದರ ರಾವಣನ ಹೆಸರಿನಲ್ಲಿ ಭಕಾರವಿರಬಾರದೇಕೆ?)

ರಾಜನ್ ಇದನ್ನರಿತೇ ನನ್ನ ಗುರುಮೂರ್ತಿಗಳು ರಾವಣನ ನಾಮಕ್ಕೆ ಪ್ರತಿಯಾಗಿ "ರಾಭಣ" ಎಂದು ಹೇಳಿದುದು ಎಷ್ಟೊಂದು ಸಂಯುಕ್ತವು ? ಇದನ್ನು ನೀವೇ ವಿಚಾರ ಮಾಡಿರಿ. ಹಾಗೂ ಇದರ ಸತ್ಯಾಸತ್ಯತೆಯ ಬಗೆಗೆ ಈ ವಿದ್ವತ್ಸಭೆಯಲ್ಲಿ ಮಂಡಿತರಾದ ಕೆಲ ಪಂಡಿತರ ಅನುಮತಿಯನ್ನು ಪಡೆಯಿರಿ ಯಾಕಂದರೆ ಆ ಪಂಡಿತರು ಕೆಲ ಕಾಲ ಈ ನಮ್ಮ ಗುರುಮೂರ್ತಿಯ ಶಿಷ್ಯರಾಗಿ ಸೇವೆ ಮಾಡಿದ್ದರಿಂದ ನನ್ನ ಗುರುಗಳಲ್ಲಿಯ ಅಪಾರ ವಿದ್ಯೆಯ ಎಷ್ಟೋ ಭಾಗವು ಪ್ರಾಪ್ತವಾಗಿದೆ" ಎಂದು ಹೇಳಿ ಆ ಬ್ರಾಹ್ಮಣನನು

ಯೋಗಿಯಾಗಲು ಪ್ರಚೋದಿಸಿದ ಪಂಡಿತರನ್ನು ಕಾಳಿದಾಸನು ಭೋಜರಾಜ ನಿಗೆ ತೋರಿಸಿದನು.

ಬಳಿಕ ಭೋಜರಾಜನು ಕಾಳಿದಾಸನ ಗುರುವಿಗೆ ನವರತ್ನ ಹಾರವನ್ನು ವಿಪುಲ ದ್ರವ್ಯವನ್ನು ಕೊಟ್ಟು ಬೀಳ್ಕೊಟ್ಟನು. ವೇಷಧಾರಿ ಬ್ರಾಹ್ಮಣನು ಇನ್ನಾವ ಪಂಡಿತನಿಗೆ ಭೆಟ್ಟಿಯಾಗದೆ ಕಾಳಿದಾಸನ ಉಪಕಾರವನ್ನು ಸ್ಮರಿಸುತ್ತ ತನ್ನ ಗ್ರಾಮಕ್ಕೆ ಹೋದನು.



(೭)

ತನ್ನ ರಾಜ್ಯದಲ್ಲಿ ಸಂಸ್ಕೃತ ವಾಙ್ಮಯವು ಅಭಿವೃದ್ಧಿಯಾಗಲಿ ಎಲ್ಲರೂ ವಿದ್ಯಾ ವಿನಯ ಸಂಪನ್ನರಾಗಲಿ, ಈ ಸದ್ಧೇತುಗಳಿಂದ ಯುಕ್ತ ರಾಜನು ಭೋಜರಾಜನ ಹೊರತು ಯಾವ ಕಾಲದಲ್ಲಿಯೂ ಆಗಲಿಲ್ಲ. ಹಾಗೆ ಯಾವ ರಾಜ್ಯದಲ್ಲಿಯೂ ತಲೆದೋರಲಿಲ್ಲ.

ಒಂದು ಬಾರಿ ಆ ವಿದ್ವದ್ರಾಜನು ನನ್ನ ರಾಜ್ಯದಲ್ಲಿ ಅಥವಾ ನೆರೆಯ ರಾಜ್ಯಗಳಲ್ಲಿ ಸಂಸ್ಕೃತ ಭಾಷೆಯ ವ್ಯಾಸಂಗದಲ್ಲಿ ಕಾಲಕಳೆಯುತ್ತಿದ್ದ ಪಂಡಿತರು ಹೊಸ ಹೊಸ ಶ್ಲೋಕಗಳನ್ನು ರಚಿಸಿಕೊಂಡು ಬಂದು ನಮ್ಮ ಪಂಡಿತರಿಂದ ಮಂಡಿತರಾದ ಸಭೆಯಲ್ಲಿ ಪ್ರಕಟಿಸಿದ್ದಾದರೆ ಆ ಶ್ಲೋಕವನ್ನು ಒಂದು ಲಕ್ಷ ಹೊನ್ನುಗಳ ಪಾರಿತೋಷಕವನ್ನಿತ್ತು ಮರ್ಯಾದಿಸುವೆವು. ಮಾತ್ರ ವಿರಚಿತ ಶ್ಲೋಕವು ಅಪೂರ್ವವಾದದ್ದಿರಬೇಕು ಎಂದು ಡಂಗುರದಿಂದ ದೇಶ ವಿದೇಶಗಳಲ್ಲಿ ಸಾರಿದರು.

ರಾಜನು ಆಶಿಸಿದಂತೆ ಎಷ್ಟೊ ಪಂಡಿತರು ತಮತಮಗೆ ತೋಳಿದಂತೆ ಶ್ಲೋಕಗಳನ್ನು ರಚಿಸಿಕೊಂಡು ನಿತ್ಯವೂ ರಾಜಸಭೆಗೆ ತೆರಪಿಲ್ಲದೇ ಬರಹತ್ತಿದರು. ಪಂಡಿತರೆದುರಿನಲ್ಲಿ ತಾವು ಮಾಡಿದ ಶ್ಲೋಕಗಳನ್ನು ಹೇಳುವರು, ಕೂಡಲೇ ನಿರ್ಣಾಯಕರು "ಇದು ಹಳೆಯುದು" ಎಂದು ಹೇಳಿ ಅವರನ್ನು ಮುಖಭಂಗಿತರನ್ನಾಗಿ ಮಾಡಿ ಕಳಿಸುವರು. ಇದರಂತೆಯೇ ಅಲ್ಲಿಗೆ ಶ್ಲೋಕ

ರಾಕೆಯೇ ಅಲ್ಲಿಗೆ ಶ್ಲೋಕ ರಚಿಸಿಕೊಂಡು ಎಲ್ಲ ವಿದ್ವಾಂಸರ ಗತಿಯಾಗ ಹತ್ತಿತು ಪ್ರಕಟಿಸಿದ ಪಾರಿತೋಷಕವು ಯಾರಿಗೂ ಸಿಗಲಿಲ್ಲ. ಇದಕ್ಕೆ ಕಾರಣವೇನೆಂದರೆ—

"ಆ ಸಭೆಯಲ್ಲಿ ಸಾವಿರಾರು ಪಂಡಿತರೂ, ಕವಿಗಳೂ, ದಿನಾಲೂ ಇದ್ದೆ ಇರತಕ್ಕವರು. ಅವರಲ್ಲಿ ಏಕಪಾಠಿ, ದ್ವಿಪಾಠಿ, ಇತ್ಯಾದಿ ಪಂಡಿತರು ತಮ್ಮ ಪರಿನೆಯ ಬಗೆಯಿಂದ ಹಲವು ತರಗತಿಯ ವಿದ್ವಾಂಸರಿದ್ದರು. ಯಾವನೊಬ್ಬ ನೂತನ ಕವಿಯು ಉಚ್ಚರಿಸಿದ ಶ್ಲೋಕವನ್ನು ಏಕಪಾಠಿ ಪಂಡಿತನು ಅದನ್ನು ಕೇಳಿ 'ಈ ಶ್ಲೋಕ ನನಗೆ ಎಂದೋ ಅವಗತವಾಗಿದೆ. ಆದ್ದರಿಂದ ಇದು ಹಳೆಯ ಶ್ಲೋಕ' ಎಂದೆನ್ನುವನು. ಅದನ್ನು ಕೇಳಿ ನೂತನ ಕವಿಯು ಮರುಮಾತಾಡದೆ ಹಿಂದಿರುಗುತ್ತಿದ್ದನು. ಇದರಂತೆ ಎರಡು ಸಾರಿ ಕೇಳಿದ ದ್ವಿಪಾಠಿಯೂ ಮೂರು ಬಾರಿ ಉಚ್ಚರಿಸಿದುದನ್ನು ಕೇಳಿ ತ್ರಿಪಾಠಿಯೂ ಆಗ ಇದು ಹಳೆಯ ಶ್ಲೋಕವು ಎಂದು ಹೇಳಿ ಬಿಡುತ್ತಿದ್ದರು. ಇದರಂತೆ ಉಳಿದ ಪಾಠಿಗಳ ಬಗೆಯಿದ್ದಿತು. ಈ ಕಾರಣದಿಂದಲೇ ಯಾವ ಕವಿಯ ಶ್ಲೋಕವೂ ಹೊಸದಾಗಲಿಲ್ಲ. ಯಾವ ಕವಿಗೂ ನಿಯಮಿತ ಪಾರಿತೋಷಕವೂ ದೊರೆಯಲಿಲ್ಲ.

ಕವಿಗಳ ಈ ದುಸ್ಥಿತಿಯನ್ನು ಕಂಡು ಕಾಳಿದಾಸನು ಮರುಗಿದನು. ರಾಜನು ಪ್ರಕಟಿಸಿದ ಪ್ರಕಟನೆಯಿಂದ ಅದನ್ನು ಅಸಹ್ಯ ಪಡಹತ್ತಿದನು. ಏನಾದರೊಂದು ಬಗೆಯಿಂದ ರಾಜ ಬೊಕ್ಕಸದ ಲಕ್ಷ ಹೊನ್ನುಗಳನ್ನು ಹೊರತೆಗೆಯಿಸಿ ಯಾವನೊಬ್ಬ ದರಿದ್ರ ಬ್ರಾಹ್ಮಣನಿಗೆ ದೊರಕಿಸಿ ಕೊಡ ಬೇಕು ಎಂಬುದಾಗಿ ವಿಚಾರ ಮಾಡಿದನು. ಆಗ ಅವನು ವೃದ್ಧನೂ ದರಿದ್ರನೂ ಆಗಿರುವ ಬ್ರಾಹ್ಮಣನನ್ನು ಕರೆದು ಅವನ ಕೈಯಲ್ಲಿ ಒಂದು ಶ್ಲೋಕವನ್ನು ಬರೆದುಕೊಟ್ಟನು. ಹಾಗು ಅವನಿಗೆ—ಬ್ರಾಹ್ಮಣ! ನೀನು ಈಗ ಶ್ಲೋಕವನ್ನು ತೆಗೆದುಕೊಂಡು ಹೋಗಿ ಆ ಸ್ಥಾನದ ಪಂಡಿತರೆದುರಿನಲ್ಲಿ ಓದಿ ತೋರಿಸು ಇದರಿಂದ ನಿನಗೆ ಲಕ್ಷ ಹೊನ್ನುಗಳು ನಿಶ್ಚಯವಾಗಿ ದೊರಕುವವು ಎಂದು ಹೇಳಿ ಆ ಶ್ಲೋಕ ಬರೆದ ಕಾಗದ ಸಹಿತ ಅವನನ್ನು ಆಸ್ಥಾನಕ್ಕೆ ಕಳಿಸಿದನು.

ಬ್ರಾಹ್ಮಣನು ಹಾಗೆಯೇ ಭೋಜರಾಜನ ಸಭೆಗೆ ಹೋದನು ರಾಜ ನನ್ನು ಕಂಡು – ಜಿಯಾ! ನನ್ನ ಶ್ಲೋಕವನ್ನು ಪಠಿಸುವೆನು ಶ್ರವಣ ಮಾಡ ಬೇಕು ಎಂದೆನ್ನಲು ರಾಜನು ಹಾಗೇ ಆಗಲಿ ಎಂದು ಅನುಮತಿಸಿದನು. ಆಗ ಬ್ರಾಹ್ಮಣನು ರಾಜನ ಹಾಗು ಪಂಡಿತರ ಎದುರಿನಲ್ಲಿ ನಿಂತು:—

ಸ್ವಸ್ತಿ ಶ್ರೀ ಭೋಜರಾಜಾ ತ್ರಿಭುವನ ವಿದಿತೇ ಧಾರ್ಮಿಕಃ
ಸತ್ಯಾವಕ್ತಾ,
ಪಿತ್ರಾತೇ ಸಂಗ್ರಹೀತಾ ನವನವತ್ಯಾಧಿಕ್ಯಾ ರತ್ನಕೋಟ್ಯೋ
ಮದೀಯಾಃ ||
ತಾಸ್ತ್ವಂ ದೇಹಿತಿ ರಾಜನ್ ಸಕಲ ಬುಧಜನ್ವೈಃ ಜ್ಞಾಯತೇ
ಸತ್ಯವೇತತ್
ನೋವಾ ಜಾನಂತಿ ಯತ್ತತ್ ವ ಮಕೃತಿವಾಥವಾ ದೇಹಿ
ಲಕ್ಷಂ ತತೋಮೇ ||

(ಅರ್ಥ-- "ಎಲೈ ಭೋಜರಾಜ! ನೀನು ಧಾರ್ಮಿಕನೂ ಸತ್ಯವಂತನೂ ಆಗಿರುವಿ ಎಂದು ಮೂರು ಲೋಕದಲ್ಲಿಯೂ ನಿನ್ನ ಕೀರ್ತಿ ಕೊಂಡಾಡಲ್ಪಡುವ ಆದ್ದರಿಂದ ನಾನು ನಿನಗೆ ಹೇಳುವದೇನಂದರೆ ನಿನ್ನ ತಂದೆಯು ನನ್ನ ಕಡೆಯಿಂದ ತೊಂಭತ್ತೊಂಭತ್ತು ಕೋಟಿ ರತ್ನಗಳನ್ನು ಕೈಗಡವಾಗಿ ತೆಗೆದುಕೊಂಡಿರುವನು. ನನ್ನ ಆ ರತ್ನಗಳನ್ನು ನನಗೆ ಕೊಟ್ಟು ಬಿಡು. ಈ ವ್ಯವಹಾರವು ನಿಜವಿದ್ದುದರ ಬಗೆಗೆ ನಿನ್ನ ಆ ಸ್ಥಾನದ ಪಂಡಿತರೆಲ್ಲರಿಗೂ ಜ್ಞಾಪಕವಿರುವದು ಆದರೆ ಒಂದು ವೇಳೆ ಅವರಿಗೆ ನೆನಪಿರದಿದ್ದರೆ ಈ ನನ್ನ ಶ್ಲೋಕವು ನೂತನವಾದುದೆಂದು ತಿಳಿದುಕೊಂಡು ನೀನು ಹುಲುಬಿಸಿದ ಪ್ರಕಟನೆಯ ಪ್ರಕಾರ ಒಂದು ಲಕ್ಷ ಹೊನ್ನುಗಳನ್ನು ನನಗೆ ಪಾರಿತೋಷಕವೆಂದು ಕೊಟ್ಟುಬಿಡು.

ಬ್ರಾಹ್ಮಣನು ಮೇಲಿನ ಶ್ಲೋಕವನ್ನು ಉಚ್ಚರಿಸಿದ ಕೂಡಲೆ: ಆಸ್ಥಾನ ಪಂಡಿತರಲ್ಲಿಯ ಏಕಪಾಠಿ, ದ್ವಿಪಾಠಿ ಮುಂತಾಗಿ ಹೆಸರ್ಪಡೆದ ಪ್ರಸಿದ್ಧ ವಿದ್ವಾಂಸರೆಲ್ಲರೂ ಮೌನತಾಳಿ ಸುಮ್ಮನೆ ಕುಳಿತರು, ಯಾಕಂದರೆ ಶ್ಲೋಕವನ್ನು ಹಳೆಯುದೆಂದು ಹೇಳಿದರೆ ರಾಜನು ತನ್ನ ತಂದೆಯು ಈ

ಬ್ರಾಹ್ಮಣನಿಂದ ಕೈಗಡ ತೆಗೆದುಕೊಂಡ ತೊಂಭತ್ತೊಂಭತ್ತು ಕೋಟಿ ರತ್ನಗಳನ್ನು ಮರುಮಾತಾಡದೆ ಅವನಿಗೆ ಕೊಡಬೇಕಾಗುವದು. ಇಲ್ಲವೆ ಶ್ಲೋಕವು ಹೊಸದೊಂದು ನಿರ್ಣಯವಾದರೆ ರಾಜನು ಈ ಬ್ರಾಹ್ಮಣನಿಗೆ ಒಂದು ಲಕ್ಷ ಹೊನ್ನುಗಳನ್ನು ಪಾರಿತೋಷವೆಂದು ತೆತ್ತಬೇಕಾಗುವದು. ಈ ಬಗೆಯಾದ ತೊಂದರೆಯು ಆ ಶ್ಲೋಕದಿಂದ ಉದ್ಭೂತವಾದುದರಿಂದ ಅವರೆಲ್ಲರೂ ಚಕಾರ ಶಬ್ದ ನುಡಿಯದೆ ಸ್ತಬ್ಧರಾಗಿ ಕುಳಿತು ಬಿಟ್ಟರು.

ಇದೆಲ್ಲ ಕರ್ತೃತ್ವವು ಕಾಳಿದಾಸನದಾಗಿದುದೆಂದು ಭೋಜರಾಜನಲ್ಲಿ ಧೃಢ ವಿಶ್ವಾಸ ಉಂಟಾಯಿತು. ಅವನು ಕೌತುಕ ದೃಷ್ಟಿಯಿಂದ ಒದಿಯಲ್ಲಿ ಕುಳಿತಿದ್ದ ಕಾಳಿದಾಸನ ಮುಖ ನಿರೀಕ್ಷೆ ಮಾಡಿದನು. ಕಾಳಿದಾಸನು ಅರಸನ ಭಾವವನ್ನರಿತು ತನ್ನ ಮುಗುಳ್ನಗೆಯಿಂದ ಅವನ ವಿಶ್ವಾಸದಿಂದ ತನ್ನ ಒಪ್ಪಿಗೆಯನ್ನು ಸೂಚಿಸಿದನು. ಕಡೆಗೆ ರಾಜನು ರಾಜ್ಯ ಬೊಕ್ಕಸದಿಂದ ಒಂದು ಲಕ್ಷ ಹೊನ್ನು ತರಿಸಿ ಕಾಳಿದಾಸನ ಅನುಮತಿಯಂತೆ ಆ ಬ್ರಾಹ್ಮಣನ ಪದರಿಗೆ ಸುರುವಿಸಿ ಅವನನ್ನು ಬೀಳ್ಕೊಟ್ಟನು.

(೮)

ಕಾಳಿದಾಸನು ಮೇಲಿಂದ ಮೇಲೆ ಭೋಜರಾಜನಿಂದ ಮನ್ನಣೆ ಪಡೆಯುತ್ತಿದನು. ಇದರಿಂದ ಅವನ ಕೀರ್ತಿ–ಗೌರವಗಳು ದಿನ ದಿನಕ್ಕೂ ಬೆಳೆಯ್ಯ ಹತ್ತಿದವು.

ಒಂದು ಸಾರೆ ದೂರು ದೇಶದಿಂದ ಒಬ್ಬ ವಿದ್ವಾಂಸನು ಕಾಳಿದಾಸನನ್ನು ಪ್ರಸಂಗದಿಂದ ಜಯಪ್ರದ ದೊರಕಿಸುವ ಉದ್ದೇಶದಿಂದ ಧಾರಾನಗರಕ್ಕೆ ಬಂದನು. ಅವನು ಪಟ್ಟಣದ ಹೊರಗಿನ ಒಂದು ಉದ್ಯಾನದಲ್ಲಿ ವಸತಿ ಮಾಡಿದನು. ಅಲ್ಲಿಯೇ ಒಂದೆಡೆಯಲ್ಲಿ ಕುರಿತುಕೊಂಡು ಹೋಗಿ ಬರುವವರಿಂದ ಕಾಳಿದಾಸನ ವೃತ್ತಾಂತವನ್ನು ಅಳಿತುಕೊಳ್ಳುವ ವಿಚಾರ

ಮಾಡಿದನು. ಅವನು ತನ್ನ ವಿಚಾರದಂತೆ ಮರುದಿನ ಬೆಳಗಿನಲ್ಲಿ ಆ ಉದ್ಯಾನದಲ್ಲಿ ಮಾರ್ಗದ ಬದಿಗಿರುವ ಒಂದು ಕಟ್ಟೆಯ ಮೇಲೆ ಕುಳಿತುಕೊಂಡನು. ಅಷ್ಟರಲ್ಲಿ ಒಬ್ಬ ಯೌವತಿಯು ಕೈಯಲ್ಲಿ ಬಂಗಾರದ ತಟ್ಟೆ ಹಿಡಿದುಕೊಂಡು ಆ ಉದ್ಯಾಂಸನು ಕುಳಿತ ತಟ್ಟೆಯ ಸನಿಹದ ಒಂದು ಬಳ್ಳಿಯಲ್ಲಿ ಹೂಗಳನ್ನು ಕೊಯ್ಯುತ್ತ ಆಕೆ ತಟ್ಟೆಯಲ್ಲಿ ಹಾಕಿಕೊಳ್ಳುತ್ತಿರುವಾಗ ಈ ವಿದ್ವಾಂಸನ ದೃಷ್ಟಿಯು ಆಕೆಯ ಕಡೆಗೆ ಹೊರಳಿತು ಅವನು ಆಕೆಯನ್ನು ಕುರಿತು— "ಎಲೈ ಮಾನಿನಿಯೇ! ನೀನಾರು? ಎಂದು ಪ್ರಶ್ನೆ ಮಾಡಲು ಆ ಯುವತಿಯು ವಿದ್ವಾಂಸನನ್ನು ಕುರಿತು—

"ಮಹಾಶಯ:—

|| ಚತುರ್ಮುಖೋನ ಬ್ರಹ್ಮಾ
ವೃಷಾರೂಢೋ ಶಂಕರಃ ||
ಅಕಾಲೇ ವರ್ಷತೇ ಮೇಘಃ ||
ತಸ್ಯಾಹಂ ಕುಲ ಬಾಲಿಕಾ ||

(ಅರ್ಥ— "ನಾಲ್ಮೊಗಗಳಿದ್ದರೂ ಬ್ರಹ್ಮನಲ್ಲ, ನಂದಿಯನ್ನೇರಿದ್ದರೂ ಶಿವನಲ್ಲ. ಇಂಥ ಸ್ವರೂಪಿನ ವಸ್ತುವಿನಿಂದ ಅಕಾಲಿಕವಾಗಿ ಮಳೆ ಸುರಿಸುವವನ ನಿಜಪುತ್ರಿಯು ನಾನಾಗಿರುವೆನು.)

ಎಂದು ಆ ಚತುರ ಸ್ತ್ರೀಯಳು ತಾನು ಪಕಾಲಿಯುವನ ಮಗಳೆಂಬುವದನ್ನು ಚಮತ್ಕಾರಿಕವಾದ ವೇಲಿನ ಶ್ಲೋಕದಿಂದ ಆ ವಿದ್ವಾಂಸನಿಗೆ ಉತ್ತರ ಕೊಟ್ಟಳು. ಈ ಉತ್ತರದಿಂದ ಆತನು ಚಕಿತಗೊಂಡು ಬಹಳ ಹೊತ್ತು ವಿಚಾರ ಮಾಡಿದನು. ಕಡೆಗೆ ಅವನಿಗೆ ಈಕೆ ಪಕಾಲಿಯುವನ ಮಗಳು ಎಂಬದಾಗಿ ಹೊಳೆಯಿತು.

ಆ ಸ್ತ್ರೀಯಳು ಉದ್ಯಾನದಿಂದ ಹೋದನಂತರ ಹೂವಿಗಾಗಿಯೇ ಇನ್ನೊಬ್ಬ ಸ್ತ್ರೀಯು ಅಲ್ಲಿಗೆ ಬಂದಳು. ವಿದ್ವಾಂಸನು ಇನ್ನೂ ಆ ಕಟ್ಟೆಯ ಮೇಲೆ ಕುಳಿತಿದ್ದನು. ಈಗ ಬಂದ ಈಕೆಯು ಮುಖದಿಂದಲಾದರೂ ಕಾಳಿ

ದಾಸನ ವೃತ್ತಾಂತ ತಿಳಿಯುವ ಕುತೂಹಲದಿಂದ ಆಕೆಯನ್ನು ಕುರಿತು— "ಎಲೌ ನೀನಾರು? ಎಂದು ಪ್ರಶ್ನೆ ಮಾಡಿದ ಕೂಡಲೇ ಅವಳು ಇವನನ್ನು ದೃಷ್ಟಿಸದೆ ಹೂವು ಕೊಯ್ಯುತ್ತಲೇ ಎಲೈ ಪಾಂಥಸ್ಥನೇ!

|| ಕೃಷ್ಣ ಮುಖೀನಚ ಮಾರ್ಜಾರೀ ದ್ವಿಜಿಹ್ವಾನಚ ಸರ್ಪಿಣೀ
ಗಂಚಪ್ರಿಯತನ ಪಾಂಚಾಲೀ ತಸ್ಯಾಹಂ ಕುಲಬಾಲಿಕಾ ||

(ಅರ್ಥ— ಕಪ್ಪನೆಯ ಮುಖವಿದ್ದರೂ ಕೋಡಗವಲ್ಲ, ನಾಲಿಗೆಗಳೆರಡಿದ್ದರೂ ಸರ್ಪವಲ್ಲಿ. ಐಯ್ವರು ಪತಿಗಳಿದ್ದರೂ ದ್ರೌಪದಿಯಲ್ಲ, ಇಂಥ ಸ್ವರೂಪಿನ ವಸ್ತುವನ್ನು ಉಪಯೋಗಿಸಿಕೊಂಡು ಉಪಜೀವಿಕೆ ಸಾಗಿಸುವವನ ಮಗಳು ನಾನಾಗಿರುವೆನು.

ಹೀಗೆ ಆ ಜಾಣ ಸ್ತ್ರೀಯು ತಾನೊಬ್ಬ ಬರಹಗಾರನ ಮಗಳೆಂಬುವದನ್ನು ಒಗಟಿನ ಸ್ವರೂಪಿನ ಶ್ಲೋಕದಿಂದ ಹೇಳಿದ್ದರಿಂದ ಆವನು ಮತ್ತೆ ವಿಚಾರದೊಳಗೆ ಬಿದ್ದನು. ಬರಹಗಾರನ ಮಗಳೆಂಬುದು ಅವನಿಗೆ ತತ್ಕಾಲಕ್ಕೆ ಹೊಳೆಯಲಿಲ್ಲ. ಈ ಗಡಿಬಿಡಿಯಲ್ಲಿಯೇ ಅವನಿಗೆ ಆ ಸ್ತ್ರೀಯರಿಂದ ಕಾಳಿದಾಸನ ವೃತ್ತಾಂತ ಕೇಳಿಕೊಳ್ಳುವ ಸ್ಮರಣೆಯು ಉಳಿಯಲಿಲ್ಲ. ಹಾಗೂ ಸಮಯವೂ ಸಿಗಲಿಲ್ಲ.

ನಿ ಸ್ತ್ರೀಯರಿಬ್ಬರೂ ಚಾತುರ್ಯಯುಕ್ತ ಶ್ಲೋಕಗಳಿಂದ ಉತ್ತರ ಕೊಟ್ಟದುದನ್ನು ನೋಡಿ ಆ ವಿದ್ವಾಂಸನು ಬೆರಗಾದನು. "ಈ ಧಾರಾನಗರದಲ್ಲಿಯ ಯಃಕಶ್ಚಿತ ದಂಥೆಗಾರರ ಹೆಣ್ಣು ಮಕ್ಕಳು ಇಷ್ಟೊಂದು ಚತುರರು ಸುಸಂಸ್ಕೃತರೂ ಇರುವರೆಂದ ಮೇಲೆ ದೇವೀ ಸಾಕ್ಷಾತ್ಕಾರ ಪಡೆದಿರುವನೆಂದು ಪ್ರಸಿದ್ಧನಾಗಿರುವ ಕಾಳಿದಾಸನ ವಿದ್ವತ್ತೆಯನ್ನು ಕೆಳಗೆಳೆಯಲು ಬಂದ ನಾನು ಮಹಾ ಮೂರ್ಖನೇ ಸರಿ. ಇನ್ನು ನನಗೆ ಕಾಳಿದಾಸನೊಡನೆ ಪ್ರಸಂಗ ಮಾಡುವದೂ ಬೇಡ, ಜಯಪತ್ರವೂ ಬೇಡ ಎಂದು ಕಟ್ಟೆಯ ಮೇಲೆ ಕುಳಿತಲ್ಲಿಯೇ ವಿಚಾರ ನಿರ್ಧರಣೆ ಮಾಡಿ ನಗರದೊಳಕ್ಕೆ ಸಹ ಸೇರದೆ ತನ್ನ ಗ್ರಾಮಕ್ಕೆ ಹಿಂದಿರುಗಿ ಪ್ರಯಾಣ ಬೆಳೆಸಿದನು.

———————

[೯]

ಕಾಳಿದಾಸನೊಡನೆ ಸ್ಪರ್ಧಿಸುವ ಲವಲವಿಕೆಯುಳ್ಳ ಎಷ್ಟೋ ಪಂಡಿತರು ಧಾರಾನಗರದಲ್ಲಿಯೇ ಇದ್ದರು. ಆದರೆ ಎದುರು ನಿಂತು ಪ್ರಸಂಗ ಮಾಡುವ ಆತ್ಮ ಧೈರ್ಯವುಳ್ಳ ವಿದ್ವಾಂಸರು ಮಾತ್ರ ಯಾರೂ ಇದ್ದಿರಲಿಲ್ಲ. ಭೋಜನ ಸಭೆಯಲ್ಲಿ ಮಹಾವಿದ್ವಾನರೆಂದು ಪ್ರಸಿದ್ಧರಾದ ಒಂಭಯಿನ್ನೂರಾ ಒಂಭತ್ತು ಪಂಡಿತರಿದ್ದರೂ ಅವರಲ್ಲಿ ಸಮಯಕ್ಕೆ ಸರಿಯಾಗಿ ತಕ್ಕ ಉತ್ತರ ಕೊಡುವವರೂ ಸಮಸ್ಯೆ ಪೂರ್ತಿಗರೂ ಯಾರೆಂದರೆ ಕಾಳಿದಾಸನೊಬ್ಬನೇ ಸರಿ. ಅವನಲ್ಲಿಯ ಈ ದಿವ್ಯ ವಿದ್ವತ್ತೆಯಿಂದಲೇ ಭೋಜರಾಜನು ಚಕ್ರವರ್ತಿ ರಾಜನಾಗಿದ್ದರೂ ಅವನನ್ನು ತನ್ನ ಸ್ನೇಹಿತ ಬಂಧುವೆಂದು ಗ್ರಹಿಸಿ ಪ್ರೀತಿಸುತ್ತಿದ್ದನು ಹೀಗಿದ್ದರೂ ಕೆಲವು ಮಾತ್ಸರ್ಯ ಭಾವನೆಯುಳ್ಳ ಪಂಡಿತರು ಭೋಜ—ಕಾಳಿದಾಸರಲ್ಲಿ ಮೂರ್ತವಾಗಿದ್ದ ಪ್ರೀತಿಗೆ ಅರದಾಳವನ್ನೆರಚುವ ದುಷ್ಟ ಪ್ರಯತ್ನ ಮಾಡುತ್ತಲೇ ಇದ್ದಿತು. ಮಾಡಿ ಮಾಡಿ ಕೊನೆಗೆ ನಿಷ್ಫಲತೆಯನ್ನು ಹೊಂದುತ್ತಲೇ ಇದ್ದರು. ಆದರೂ ತಮ್ಮ ಕುಹಕತನದಿಂದ ಹೊರತಾಗುತ್ತಿರಲಿಲ್ಲ.

ಒಂದು ದಿನ ಕುಹಕ ವಿದ್ವಾಂಸರು ವಿದೇಶದ ಒಬ್ಬ ಪಂಡಿತನನ್ನು ಕರೆಯಿಸಿಕೊಂಡರು ಅವನನ್ನು ತಮ್ಮಲ್ಲಿ ಸಮಾವೇಶ ಮಾಡಿಕೊಂಡರು ಅವನಿಂದ ಒಂದು ಕಠಿಣ ಸಮಸ್ಯೆಯನ್ನು ಸಿದ್ಧಪಡಿಸಿಕೊಂಡು ಅವನ್ನು ರಾಜನೆದುರಿನಲ್ಲಿ ಇಡುವದಕ್ಕೆ ಪ್ರೇರೇಪಿಸಿದರು. ಅದರಂತೆ ಆ ವಿದೇಶಿ ಪಂಡಿತನು ತನ್ನದೊಂದು ಸಮಸ್ಯೆಯೊಂದಿಗೆ ಮರುದಿನ ರಾಜ ಸಭೆಗೆ ಹೋದನು. ವಂದನಾಶೀರ್ವಾದಗಳ ವಿಧಿಯು ಮುಗಿದನಂತರ ಆ ಪಂಡಿತನು—" ರಾಜನ್!

ಕುಂತೀ ಸುತೋ ರಾವಣ ಕುಂಭಕರ್ಣಾಃ'

ಇದೊಂದು ನನ್ನ ಸಮಸ್ಯೆಯಿರುವದು ಇದನ್ನು ಈ ವಿದ್ವತ್ ಸಭೆಯ ಪಂಡಿತ ಶಿರೋಮಣಿಯೂ ಕವಿ ಶ್ರೇಷ್ಠನೂ ಆಗಿರುವ ಕಾಳಿದಾಸನಿಂದ ಪೂರ್ಣಗೊಳಿಸುವದಾಗಬೇಕು. ಅಂತಾದರೆ ನಾನು ಸ್ಪಷ್ಟ ರೀತಿಯಿಂದ

ಕೂಡಿದ ವಿದ್ವಾಂಸ ಒಡ್ಡೋಲಗದಲ್ಲಿ ಕಾಳಿದಾಸನ ಶ್ರೇಷ್ಠತೆಯನ್ನು ಮನ್ನಿಸುವೆನು" ಎಂದು ಹೇಳಿ ಗಂಭೀರ ಮುಂದ್ರೆಯಿಂದ ಒಂದು ಆಸನದ ಮೇಲೆ ಕುಳಿತು.

ಸಮಸ್ಯೆಯು ಕಠಿಣವೂ ತೊಡಕಿನದೂ ಆಗಿರುವದೆಂಬುದನ್ನು ಭೋಜ ರಾಜನೂ ಅರಿತನು. ಆದರೂ ಅವನು ಕಾಳಿದಾಸನನ್ನು ಇದರಿಂದ ಪರೀಕ್ಷಿಸಿಯೇ ಬಿಡಬೇಕೆಂಬ ಸಿದ್ಧಾರ್ಥವನ್ನು ತಾನೂ ತಾಳಿ ಆಗಲೇ ಕಾಳಿದಾಸನನ್ನು ಸಭೆಗೆ ಬರಮಾಡಿಕೊಂಡನು. ಅವನು ಬಂದ ಕೂಡಲೇ ಅವನೊಡನೆ ಮಾತಾಡದೆ—

"ಕಾಳಿದಾಸ!

ಕುಂತೀ ಸುತೋ ರಾವಣ ಕುಂಭಕರ್ಣಾಃ ||"

ಎಂದು ಉಚ್ಚರಿಸಿದ ಕೂಡಲೇ ಕಾಳಿದಾಸನು ಕೂಡಿದ ಪಂಡಿತರ ಕಡೆಗೆ ಕೈಯೆತ್ತಿ—

ಕಾ ಪಾಂಡು ಪತ್ನೀ ಗೃಹಭೂಷಣಂ ಕಿಂ? ಕೋ ರಾಮ<br>
ಶತ್ರು ಕಿಮಗಸ್ತ್ಯ ಜನ್ಮ ||? ಕಃ ಸೂರ್ಯ ಪುತ್ರೋ ವಿಪರೀತ ಪೃಚ್ಛಾ<br>
ಕುಂತೀ ಸುತೋ ರಾವಣ ಕುಂಭಕರ್ಣಾಃ||

(ಅರ್ಥ— ಪಾಂಡುರಾಜನ ಹೆಂಡತಿ ಯಾರು? ಮನೆಗೆ ಶೋಭೆ ಯಾವದು? ರಾಮನ ವೈರಿ ಯಾರು? ಅಗಸ್ತ್ಯನ ಜನ್ಮವೆಲ್ಲಿ? ರವಿಪುತ್ರನಾರು, ವಿಪರೀತ ವಾಕ್ಯ ಯಾವದು? (ಈ ಪ್ರಶ್ನೆಗಳಿಗೆ ಕ್ರಮವಾಗಿ) ಕುಂತಿ ಸುತ ರಾವಣ ಕುಂಭಕರ್ಣ, ಕುಂತೀಸುತ ರಾವಣ—ಕುಂಭಕರ್ಣರು ಇವು ಉತ್ತರಗಳು) ಇವೆಲ್ಲವುಗಳಿಂದ ಅಡಕವಾಗಿರುವ ಈ ಶ್ಲೋಕವು ಅಂತ ಲಾರ್ಪಿಕ ಶ್ಲೋಕವಾಗಿದೆ.

ಈ ಶ್ಲೋಕಕ್ಕೆ ಮೊದಲಿನ ಮೂರು ಚರಣಗಳನ್ನು ರಚಿಸಿ ಸಮಸೆ ಚರಣವನ್ನು ಕೊನೆಗಿಟ್ಟು ಕಾಳಿದಾಸನು ಈ ಅಂತರ್ಲಾಪಿಕೆಯ ಸಮಸ್ಯೆಯನ್ನು ಪೂರ್ಣ ಮಾಡಿದನು. ಅದನ್ನು ಕೇಳಿ ರಾಜನಿಗೆ ಅತೀವ

ಆನಂದ! ವಿರೋಧಿಗಳ ಮುಖಭಂಗ, ವಿದೇಶಿ ಪಂಡಿತನ ವಾಗ್ಬಂಧನಗಳಾದವು.

ಈ ಪ್ರಸಂಗದಿಂದ ಭೋಜರಾಜ--ಕಾಳಿದಾಸರ ಪ್ರೀತಿ ಸಂಬಂಧವು ಇನ್ನಿಷ್ಟು ದೃಢವಾಯಿತೇ ಹೊರತು ವಿಂಗಡಿತವಾಗಲಿಲ್ಲ.

—○○—

## (೧೦)

ಕಾಂಚನ ನಗರದ ಬಾಣಭಟ್ಟ ಎಂಬ ವಿದ್ವಾಂಸನು ತನ್ನ ಸುತ್ತಲಿನ ಗ್ರಾಮಗಳಲ್ಲಿ ಘನವಂತನೆಂದು ಹೊಗಳಿಸಿಕೊಳ್ಳುತ್ತಿದ್ದನು. ಅವನಿಗೆ ತಾನು ಶ್ರೇಷ್ಠ ಪಂಡಿತನೆಂಬ ಗರ್ವವೂ ಇದ್ದಿತು.

ಒಂದು ದಿನ ಅವನ ಜೊತೆಗೆ ಕೆಲವು ಬ್ರಾಹ್ಮಣರು ಇವನನ್ನು ಕುರಿತು — "ವಿದ್ವದ್ವರ್ಯರೇ ನಾವು ಕಾರಣಾಂತರದಿಂದ ಭೋಜ ಪ್ರಭುವಿನ ಧಾರಾನಗರಕ್ಕೆ ಹೋಗಿದ್ದೆವು. ಆ ರಾಜನ ವಿದ್ವತ್ಸಭೆಯನ್ನು ಕಾಣುವ ಲವಲವಿಕೆಯಿಂದ ಒಂದು ದಿನ ಆ ಸಭಾಮಂಟಪಕ್ಕೆ ಹೋಗಿದ್ದೆವು. ಒಂಬಯ್ನೂರಾ ತೊಂಭತ್ತು ಜನ ಪಂಡಿತರಿಂದ ಮಿಲಿತವಾದ ಆ ಸಭೆಯು ನಮ್ಮನ್ನು ದಂಗುಗೊಳಿಸಿತು. ಅವರಲ್ಲಿಯಂತೂ ಭೋಜರಾಜನೂ ಅವನ ಬಲಕ್ಕಿರುವ ಆಸನದಲ್ಲಿ ಕುಳಿತಿದ್ದ ಕಾಳಿದಾಸನೂ ಒಂದೇ ಆಕಾಶಾಂಗಣದಲ್ಲಿ ಬೆಳಗುತ್ತಿರುವ ಇಬ್ಬರೂ ಚಂದ್ರಮರಂತೆ ಶೋಭಿಸುತ್ತಿದ್ದರು. ಕಾಳಿದಾಸನಿಗೆ "ಕವಿಕುಲಗುರು ಒಂದು ಒಪ್ಪಿಟ್ಟು ನುಡಿಯುತ್ತಿದ್ದ ಜನರ ವಾಣಿಯನ್ನು ಇದುವರೆಗೂ ನಂಬಿರಲಿಲ್ಲ. ಆದರೆ ನಾವು ಪ್ರತ್ಯಕ್ಷವಾಗಿ ಆ ಕಾಳಿದಾಸನನ್ನು ಕಂಡೆವು. ಅವನ ಅಮೋಘವಾದ ಕಾವ್ಯವಾಣಿಯ ಶ್ರವಣದಿಂದ ನಾವು ನಮ್ಮನ್ನೇ ಮರೆತೆವು. ಬೇರೆ ಬೇರೆ ವಿದ್ವಜ್ಜನರಿಂದ ಮಂಡಿಸಲ್ಪಡುತ್ತಿದ್ದ ಸಮಸ್ಯೆಗಳು ಅವರವರ ಮುಖಗಳಿಂದ ಹೊರಬೀಳುವದೊಂದೇ ತಡ, ಸಮಸ್ಯೆಯ ಚರಣದೊಂದಿಗೆ ಅರ್ಥಪೂರ್ಣವಾದ ಪ ಕವಿವರನ ಮುಖದಿಂದ ಉದ್ಭೂತವಾಗುತ್ತಿದ್ದವು. ರಾಜನ ದೃಷ್ಟಿಯು

ಒಂದು ನಿಮಿಷ ಒಡ್ಡೋಲಗದ ಕಡೆಗೆ ಇನ್ನೊಂದು ನಿಮಿಷ ಕಾಳಿದಾಸನ ಕಡೆಗೆ ಇದ್ದುದನ್ನು ನಾವು ಆಶ್ಚರ್ಯಪೂರ್ವಕವಾಗಿ ನಿರೀಕ್ಷಿಸುತ್ತ ಚಿತ್ರ ಪ್ರತಿಮೆಗಳಂತೆ ಕುರಿತುಬಿಟ್ಟಿದ್ದೆವು. ಮುಂತಾಗಿ ಆ ಬ್ರಾಹ್ಮಣರು ಬಾಣ ಭಟ್ಟನ ಎದುರಿನಲ್ಲಿ ಯಥಾತಥ್ಯವಾಗಿ ಬಣ್ಣಿಸಿದರು. ಇದನ್ನೆಲ್ಲವನ್ನೂ ಕೇಳಿದ ಬಾಣನ ಹೃದಯವನ್ನು ಮತ್ಸರದ ಹುಡಿಯಿಂದ ತುಂಬಕೊಂಡಿದ್ದರೂ ಮೇಲೆ ಮಾತ್ರ ಅವರೊಡನೆ ತಾನೂ ಕೌತುಕ ಮುದ್ರೆಯನ್ನು ತೋರಿಸುತಿದ್ದನು. ಅಂದಿನಿಂದ ಅವನ ಅಂತರ್ಯವೆಲ್ಲವೂ ಕಾಳಿದಾಸನನ್ನು ಕೀಳ್ತರಕ್ಕೆ ಬಗೆಯುವ ವಿಚಾರದಿಂದಲೇ ಕಲುಷಿತವಾಗಹತ್ತಿತು. ತನಗೆ ಪ್ರಾಪ್ತವಾಗಿರುವ ವಿದ್ಯೆಯ ಬಲದಿಂದ ಧಾರಾನಗರಕ್ಕೆ ಹೋಗಿ ಕಾಳಿದಾಸನೊಡನೆ ಪ್ರಸಂಗ ಮಾಡಬೇಕು. ಏನೊಂದು ಬಗೆಯಿಂದ ಅವನನ್ನು ಸೋಲಿಸಿ ಜಯಶ್ರೀ ಪಡೆಯಬೇಕು. ಇದೇ ಮಹತ್ವಾಂಕ್ಷೆಯಿಂದ ಅವನು ಇನ್ನಾರಿಗೆ ತಿಳಿಸದೆ ಧಾರಾನಗರಕ್ಕೆ ಬಂದನು ಭೋಜರಾಜನನ್ನು ಕಂಡು ತಾನು ಬಂದ ಉದ್ದೇಶವನ್ನು ತಿಳಿಸಿದನು

ವಿದ್ವಾಂಸರನ್ನು ಕಂಡರೆ ಭೋಜರಾಜನಿಗೆ ಬಲು ಪ್ರೀತಿ. ಈ ಬಾಣಭಟ್ಟನು ಬಂದು ತನ್ನ ಉದ್ದೇಶ ತಿಳಿಸಿದ್ದರಿಂದಂತೂ ಹೆಚ್ಚು ಆನಂದ ಅವನನ್ನು ಆದರಾತಿಥ್ಯದೊಡನೆ ಪರಾಮರಿಸಿ ಅಂದಿನ ದಿನ ತನ್ನಲ್ಲಿ ಇರಿಸಿಕೊಂಡನು.

ಅದೇ ದಿನ ಸಾಯಂಕಾಲದ ಮೊದಲು ಭೋಜರಾಜನು ಕಾಳಿದಾಸ ಬಾಣಭಟ್ಟರನ್ನು ಸಂಗಡ ಕರೆದುಕೊಂಡು ತನ್ನ ರಾಜೋದ್ಯಾನದ ಸೌಂದರ್ಯದ ಸೊಬಗನ್ನು ನೋಡುವದಕ್ಕೆ ಹೋದನು. ಉದ್ಯಾನದಲ್ಲಿಯ ಒಂದು ಸಂಗಮರವರಿ ಶಿಲೆಯಿಂದ ನಿರ್ಮಿತ ರಮ್ಯ ಕಟ್ಟೆಯ ಮೇಲೆ ಕುಳಿತನು. ಆಗ ಕಾಳಿದಾಸನು ರಾಜನ ಬಲಭಾಗದಲ್ಲಿಯೂ ಬಾಣಭಟ್ಟನು ಎಡಗಡೆಯಲ್ಲಿಯೂ ಕುಳಿತಕೊಂಡರು ಅವರೆಲ್ಲರು ಒಳ್ಳೆ ಮನೋಹರವಾಗಿರುವ ಉದ್ಯಾನದ ಸೌಂದರ್ಯ ನಿರೀಕ್ಷಿಸುತ್ತ ಕಾವ್ಯವಾಣಿಯುಕ್ತ ಭಾಷಣ ಹರಟೆಗಳನ್ನು ನಡೆಯಿಸಿದ್ದರು. ಇಬ್ಬರು ಒಂದು ಶ್ಲೋಕವನ್ನು ನುಡಿಯಲು ಇನ್ನೊಬ್ಬರು ಅದಕ್ಕಿಂತಲೂ ಹೃದಯಂಗಮ ಶ್ಲೋಕವನ್ನು ಹೇಳುವರು. ಈ ಸಮಯವನ್ನೇ ಸಾಧಿಸಿ

ಬಾಣಭಟ್ಟನು ತನ್ನ ಉದ್ದೇಶ ಸಾಧಿಸಿಕೊಳ್ಳಲನುವಾದನು ಅವನು ತಾನು ರಾಜನ ಎಡಕ್ಕೆ ಕುಳಿತಿದ್ದುದರಿಂದ ಎಡಗೈಯನ್ನೇ ವಸ್ತುವನ್ನಾಗಿಸಿ ಒಂದು ಶ್ಲೋಕ ರಚಿಸಿದನು ಅದರ ನಾಲ್ಕನೆಯ ಚರಣದಿಂದ ಕಾಳಿದಾಸನ ವಿದ್ವತ್ತಿಗೆ ಅರದಾಳವನ್ನೆರಚುವ ದುಷ್ಟಹೇತುವಿನಿಂದ ಆ ಚರಣವನ್ನು ಗೌಪ್ಯವಾಗಿರಿಸಿಕೊಂಡು —

"ಗೃಷ್ಣಾತ್ಯೇವ ರಿಪೋಃ ಶಿರಃ ಪ್ರತಿಜವಂ ಕರ್ಷತ್ಯಸೌ ವಾಜಿನಮ್ |
ಧೃತ್ವಾಚರ್ಮಧನುಃ ಪ್ರಯಾತಿ ಸತತಂ ಸಂಗ್ರಾಮ ಭೂಮಾವಪಿ ||
ದ್ಯೂತಂ ಚೌರ್ಯ ಪರಸ್ತ್ರೀ ಶಪಥಂ ಜಾನಾತಿ ನಾಯಂಕರೋ |

ಈ ಮೂರು ಚರಣಗಳನ್ನು ಉಚ್ಚರಿಸಿದನು. ಅವನು ವರ್ಣಿಸಿದ ಈ ಮೂರು ಚರಣಗಳಲ್ಲಿ ಎಡಗೈಯಿಂದ ಮೇಲ್ಮೆಯನ್ನೇ ಬಣ್ಣಿಸಿದನು.

(ಅರ್ಥ– ರಾಜನ್: ಎಡಗೈಯು ಬಲಗೈಗೆ ಮುಂದಾಗಿ ದೊಡ್ಡ ದೊಡ್ಡ ಕೆಲಸ ಮಾಡುವದು ಎಂತೆಂದರೆ ರಂಗಭೂಮಿಯಲ್ಲಿ ಹೋದ ಕೂಡಲೇ ವೈರಿಯ ಜೆಂಡಿಕೆಯನ್ನು ಎಡಗೈಯಿಂದಲೇ ಮೊದಲು ಹಿಡಿದು ಬಲಗೈಯಿಂದ ಅವನ ಶಿರಸ್ಸು ಹಾರಿಸಬೇಕಾಗುವದು. ಅದರಂತೆ ಕುದುರೆಯ ಮೇಲೇರುವಾಗ ಮೊದಲು ಎಡಗೈಯಿಂದ ಅದರ ಕಡಿವಾಣವನ್ನು, ಹಿಡಿದು ಅಶ್ವವನ್ನು ಆರೋಹಿಸಬೇಕಾಗುವದು. ಹಾಗೆಯೇ ಯುದ್ಧದಲ್ಲಿ ಎಡಗೈಯಲ್ಲಿ ಢಾಲು ಅಥವಾ ಬಿಲ್ಲನ್ನು ಹಿಡಿದಾಗಲೇ ಬಲಗೈಯಿಂದ ಖಡ್ಗ ಅಥವಾ ಬಾಣಪ್ರಯೋಗಿಸಬೇಕಾಗುವದು. ಇವೆಲ್ಲವುಗಳ ಹೊರತು ಈ ಎಡಗೈಯಿಂದ ಏನೊಂದು ಹೇಯ ಕಾರ್ಯವು ಒದಗುವದಿಲ್ಲ. ಚತುಷ್ಕರ್ಮಗಳಾದ ಚೋರತನ ಜೂಜಾಟ,ಜಾರತನ ಹಾಗು ಆಣಾಶಪಥ ಇವಾವಕರ್ಮಗಳೂ ಈ ಎಡಗೈಯಿಂದ ಒದಗುವದು ಸಾಧ್ಯವಿಲ್ಲ.

ಈ ಪ್ರಕಾರ ಬಾಣಭಟ್ಟನು ಎಡಗೈಯ ಗುಣ ವರ್ಣನೆ ಮಾಡಿ ಗರ್ವದಿಂದ ರಾಜನನ್ನು ಕುರಿತು–'ರಾಜನ್! ತಮ್ಮ ಬಲಭಾಗವನ್ನು ಅಲಂಕರಿಸಿದ್ದ ಈ ಕಾಳಿದಾಸ ಪಂಡಿತರು ಶ್ಲೋಕದ ನಾಲ್ಕನೆಯ ಚರಣವನ್ನು ಪೂರ್ಣ ಮಾಡಬೇಕು. ಇಲ್ಲವಾದರೆ ನನಗೆ ಜಯಪತ್ರ ಕೊಡಿಸಬೇಕು ಎಂದು ತನ್ನ ಮದೋನ್ಮ ಮಾತನಾಡಿದನು.

ಕಾಳಿದಾಸನು ಬಾಣನಲ್ಲಿಯ ಪಾಂಡಿತ್ಯದ ಹೆಮ್ಮೆಯನ್ನರಿತು ರಾಜನ ತನಗೆ ಆಜ್ಞೆಯನ್ನು ಕೊಡುವ ಮಾರ್ಗ ಪ್ರತೀಕ್ಷಿಸದೆ ಆ ಬಾಣಭಟ್ಟನನ್ನು ಕುರಿತು—

"ದಾನಾನದ್ಯವತಾಂ ವಿಲೋಕ್ಯ ವಿಧಿನಾ ಶೌಚಾಧಿಕಾರೀಕೃತಃ||

(ಅರ್ಥ– "ಆದರೂ ಆ ಎಡಗೈಯಿಂದ ಸ್ವಲ್ಪವೂ ಸಹ ದಾನ–ಧರ್ಮಗಳು ಒದಗದ್ದರಿಂದಲೇ ಬ್ರಹ್ಮನು ಆ ಕೈಯನ್ನು ಗುದಪ್ರಕ್ಷಾಲನೆ ಮಾಡುವ ಕೆಲಸಕ್ಕೆ ಯೋಜಿಸಿರುವನು.)

ಈ ಪ್ರಕಾರ ಕಾಳಿದಾಸನು ಆಡಿದ ಭಾಷಣವನ್ನು ಕೇಳಿ ಬಾಣಭಟ್ಟನ ಹುರುಪು ಒಮ್ಮೆಲೆ ಮರೆಯಾಯಿತು. ಆಗ ಅವನು ತನ್ನಲ್ಲಿ–"ಈ ಕಾಳಿದಾಸನು ನಿಜವಾಗಿಯೂ ಮಹಾ ಪಂಡಿತನು. ಇವನೊಡನೆ ವಾದಮಾಡುವದು ಫಲಕಾರಿಯಾಗದು. ಇಷ್ಟೇ ಅಲ್ಲ ಈ ಪ್ರಸಂಗದ ನನ್ನ ಅಪಕೀರ್ತಿಯನ್ನು ಸುತ್ತಲೆಲ್ಲ ಹಲುಬಿಸುವದು" ಎಂದು ದೃಢವಾಗಿ ಗ್ರಹಿಸಿ ಅವನ ಸಖ್ಯತ್ವ ಬೆಳೆಸಿಕೊಂಡು ತನ್ನ ಊರಿಗೆ ಹೋದನು.

## (೧೧)

ಭೋಜರಾಜನು ಸಿಂಹಾಸನವನ್ನೇರಿ ಕಾಲು ಶತಕ ವರುಷಗಳು ಪೂರ್ಣವಾಗಲು ಬಂದಿವೆ. ಧಾರಾನಗರಿಯ ಪ್ರತಿಷ್ಠಿತರೂ ದರಬಾರಿನ ಮಂತ್ರಿ ಮಂಡಲವೂ ಪಂಡಿತ ವರ್ಗದವರೂ ರಾಜನಿಗೆ ಕನಕಾಭಿಷೇಕ ಮಾಡಿ ತಮ್ಮ ತಮ್ಮಲ್ಲಿಯ ರಾಜನಿಷ್ಠೆಯನ್ನು ವ್ಯಕ್ತಪಡಿಸಿದರು. ಆ ಸಂತೋಷ ಪ್ರಸಂಗದಲ್ಲಿ ರಾಜ್ಯದ ಪ್ರಜೆಗಳಿಂದಲೂ ವಿದೇಶೀಯ ರಾಜರುಗಳಿಂದಲೂ ರಾಜನಿಗೆ ಕಾಣಿಕೆಯೊಂದು ಬಂದ ಧನ-ದ್ರವ್ಯ-ಕನಕಾಭರಣಗಳ ರಾಶಿಯೇ ಬೊಕ್ಕಸವನ್ನು ಹಿಡಿಸಲಾರದಷ್ಟು ಬಂದಿತು. ರಾಜನು ಅದು ತನ್ನ ಸ್ವಂತ ಉಪಯೋಗದ ಸಂಪತ್ತಾಗಿದ್ದಗೂ ತಾನು ಅದನ್ನು ಉಪಯೋಗಿಸುವದಕ್ಕೆ ಮನಸ್ಸು ಮಾಡಲಿಲ್ಲ. ಹಾಗು ಪ್ರಜೆಗಳಿಂದ ಸಂತೋಷಾರ್ಥಕವಾಗಿ ಬಂದ ದ್ರವ್ಯವು ಅವರಲ್ಲಿ

ವಿಶೇಷವಾಗಿ ಬೆರೆತುದರಿಂದ ಪ್ರಾಜ್ಯ ವೈಭವದ ಬೊಕ್ಕಸಕ್ಕೆ ಸೇರಿಸುವ ಇಚ್ಛೆಯೂ ಇಲ್ಲದಾಗಲಿಲ್ಲ. ಕಡೆಗೆ ಅವನು ದರಿದ್ರ ದೀನ ಯಾಚಕರಿಗೂ ವಿದ್ವಾಂಸರಾದ ಪಂಡಿತ ವರ್ಗದವರಿಗೂ ಅವರವರ ತಾರತಮ್ಯತೆಯನ್ನು ನಿರೀಕ್ಷಿಸಿ ವಿತರಣೆ ಮಾಡುವ ನಿರ್ಧಾರ ಮಾಡಿದನು. ಹಾಗು ಜಿದರಂತೆ ಈ ಸದ್ವಿನಿಯೋಗದ ವಾರ್ತೆಯನ್ನು ತನ್ನ ರಾಜ್ಯದ ಎಲ್ಲೆಡೆಗೂ ಡಂಗುರದಿಂದ ಹುಲುಬಿದನು.

ಡಂಗುರದ ವಾರ್ತೆಯನ್ನು ಕೇಳಿ ಮರ ದಿನದಿಂದ ತೆರಪಿಲ್ಲದೆ ಯಾಚಕರೂ ಬ್ರಾಹ್ಮಣರೂ ಬಂದು ಬಂದು ರಾಜನ ಕೊಡುಗೈಯಿಂದ ದಾನ-ದಕ್ಷಿಣೆ-ಪಾರಿತೋಷಕಗಳನ್ನು ಹೊಂದಿ ರಾಜನನ್ನು ಹೊಗಳುತ್ತ ಹೋಗಹತ್ತಿದರು. ಈ ಪ್ರಸಂಗದಲ್ಲಿ ದೂರಿನ ಗ್ರಾಮದಿಂದ ಇಬ್ಬರು ಬ್ರಾಹ್ಮಣರು ಬಂದರು. ರಾಜನಿಂದ ದಾನ ವಿತರಣೆಯು ಸಮಾರಂಭವನ್ನು ನೋಡಿದರು. ಸಾಮಾನ್ಯ ಬ್ರಾಹ್ಮಣನ ಎಷ್ಟೋಪಟ್ಟು ಸಂಭಾವನೆಯು ಓದಿಕೊಂಡ ಬ್ರಾಹ್ಮಣನಿಗೆ ದೊರೆಯುತ್ತಿರುವ ತಾರತಮ್ಯ ನಿರೀಕ್ಷಿಸಿದರು. ತಾವೂ ಮೇಲ್ತರದ ದಾನ ಪಡೆಯಬೇಕೆಂಬ ಆಸೆಯಿಂದ ಅವರು ಬದ್ಧರಾದರು.

ನಿಜವಾಗಿ ಈ ಬ್ರಾಹ್ಮಣದ್ವಯರಿಗೆ ಶಾಲೆಯ ಶಿಕ್ಷಣವೂ ವೈದಿಕ ಶಿಕ್ಷಣವೂ ದೊರೆತಿರಲಿಲ್ಲ ಅದರಿಂದ ಅವರಿಗೆ ತಮ್ಮ ಸಮಾಜದಲ್ಲಿಯೇನೊಂದು ಗೌರವವಿದ್ದಿರಲಿಲ್ಲ. ಸಿರಿವಂತ ಬ್ರಾಹ್ಮಣರ ಮನೆಯ ಕೆಲಸ_ಬೊಗಸೆಗಳನ್ನು ನೀರು-ನಿಡಿಗಳನ್ನೂ ಸಾಗಿಸಿಕೊಂಡು ಉದರ ನಿರ್ವಾಹ ಸಾಗಿಸಿಕೊಳ್ಳುತ್ತಿದ್ದರು. ಅದನ್ನು ಅನರು ಈ ಅಪರಿಚಿತ ನಗರದಲ್ಲಿ ಮರೆಯಾಗಿಸಿಕೊಂಡು ಶ್ರೇಷ್ಠ ಬ್ರಾಹ್ಮಣನ ವೇಶದಿಂದ ಬಂದು ಸದಾವರ್ತದಲ್ಲಿ ವಸತಿ ಮಾಡಿದ್ದರು.

ಮೇಲ್ತರದ ದಾನ ಹೊಂದುವ ಬಗೆಯನ್ನೇನು ಮಾಡಬೇಕೆಂಬ ವಿಚಾರದಲ್ಲಿಯೇ ಅವರ ಒಂದೆರಡು ದಿನಗಳು ಕಳೆದವು. ಕಡೆಗೆ ಅವರು ತಮ್ಮಲ್ಲಿ:— "ರಾಜನಲ್ಲಿ ಕಾಳಿದಾಸನ ಕೈವಾಡ ನಡೆಯುವದು. ಆ ಕಾಳಿದಾಸನಿಗೆ ಭೆಟ್ಟಿಯಾಗಿ ಅವನ ಸಹಾಯದಿಂದ ಇಚ್ಛಿತವನ್ನು ಸಾಧಿಸಿಕೊಳ್ಳಬೇಕು. ಎಂದು ಆಲೋಚಿಸಿ ಹಾಗೆಯೇ ಅವರು ಕಾಳಿದಾಸನ ಮನೆಗೆ ಹೋದರು. ಅವನನ್ನು ಕಂಡರು. ಇವರ

ವೇಷ-ಭೂಷಣ ನಿರೀಕ್ಷಿಸಿ ಕಾಳಿದಾಸನು ಇವರನ್ನು ನೋಡಿ:- "ಬರಬೇಕು. ವಿಪ್ರೋತ್ತಮರೆ! ವಿಶ್ರಮಿಸಬೇಕು. ತಾವು ಬಂದ ಕಾರ್ಯಾರ್ಥವೇನು" ಎಂದು ಕೇಳಿದನು. ಕೂಡಲೇ ಅವರಿಬ್ಬರೂ "ಮಹಾನ ಮಂತ್ರಿಗಳೇ! ನಾವು ಈ ರಾಜ್ಯದ ಕೊನೆಯ ಡಿನ ಬ್ರಾಹ್ಮಣರು ಸಮಗ್ರ ಹತ್ತಿಪ್ಪತ್ತು ವರುಷಗಳಿಂದ ನಮ್ಮ ದೇಶವಲ್ಲಿ ಕ್ಷಾಮವು ತಾಂಡವ ನೃತ್ಯ ಮಾಡುತ್ತಿದೆ. ಸದ್ಯ ನಾವಂತೂ ಅತ್ಯಂತ ದಾರಿದ್ರ್ಯದಲ್ಲಿ ಜೀವನ ನೂಕುವದು ಕಠಿಣವಾಗುತ್ತಿದೆ. ಈ ಧಾರಾಧೀಶನು ತನ್ನ ಕೊಡುಗೈಯಿಂದ ನಮ್ಮಂಥವರ ದಾರಿದ್ರ್ಯ ವಿಚ್ಛೇದನೆ ಮಾಡುತ್ತಿರುವ ಅವನ ಕೀರ್ತಿಯನ್ನು ಕೇಳಿ ಇಲ್ಲಿಗೆ ಬಂದೆವು. ನೀವು ರಾಜನಿಂದ ನಮಗೆ ಸಾಮಾನ್ಯರಿಗೆ ದೊರಕುವ ದಾನಕ್ಕಿಂತಲೂ ಮೇಲ್ತರದ ದಾನ ಕೊಡಿಸಿದ್ದಾದರೆ ನಾವು ದೂರಿನಿಂದ ಬಂದುದು ಸಾರ್ಥಕವಾಗುವದು ಎಂದು ಕೇಳಿಕೊಂಡರು

ಕಾಳಿದಾಸನು ಅವರನ್ನು ಕುರಿತು ನಿಮಗೆ ದಾನ-ದಕ್ಷಿಣೆಬೇಕೋ? ಪಾರಿತೋಷಕ ಅಥವಾ ಮೆಚ್ಚುಗೆ ಬೇಕೋ? ಪಾರಿತೋಷಕವೆಂದರೆ ನೀವು ಹೊರಲಾರದಷ್ಟು ದ್ರವ್ಯವಾಗುವದು. ಆದರೆ ನೀವು ಅದನ್ನು ಪಡೆಯಲು ತಕ್ಕ ವಿದ್ಯಾನ್ವಿತರಾಗಿರಬೇಕು. ಇದುವರೆಗೆ ನಿಮ್ಮ ಪರಿಚಯ ನನಗಿಲ್ಲದ್ದರಿಂದ ನೀವು ಯಾವ ಯಾವ ಶಾಸ್ತ್ರ ಓದಿರುವಿರಿ! ಎಷ್ಟು ವೇದಗಳಲ್ಲಿ ನಿಮಗೆ ಗತಿಯುಂಟು? ಕಾವ್ಯ—ಛಂದಸ್ಸು—ಅಲಂಕಾರ ಮುಂತಾದವುಗಳ ಬಳಿಕೆಯನ್ನು ನೀವು ಆದಾವ ಬಗೆಯಿಂದ ನಡೆಯಿಸಿರುವಿರಿ? ಇದನ್ನೆಲ್ಲ ನಾನು ನಿಮ್ಮನ್ನು ಕೇಳಲಿಲ್ಲ. ಈಗಲಾದರೂ ನಿಮ್ಮಲ್ಲಿಯ ವಿದ್ವತ್ತೆಯು ಹರಿಸೀಮೆಯಷ್ಟಿದೆಯೆಂಬುದನ್ನು ನನಗೆ ತಿಳಿಸುವಿರಾ? "ಎಂದು ಕೇಳಲು ಆ ಬ್ರಾಹ್ಮಣರು ಒಬ್ಬರನೊಬ್ಬರ ಮುಖ ನಿರೀಕ್ಷಿಸಿ ಕಾಳಿದಾಸನ ಪ್ರಶ್ನೆಗೆ ಉತ್ತರ ಕೊಡದೆ ಸುಮ್ಮನೇ ಕುಳಿತುಬಿಟ್ಟರು. ಇಷ್ಟರಿಂದಲೇ ಇವರು ಲೇಶ ಮಾತ್ರವೂ ವಿದ್ಯೆಯಿಲ್ಲದವರು ಎಂದು ಕಾಳಿದಾಸನು ಅಂತನು ಇನ್ನು ಇವರ ನಿಜತ್ವವನ್ನರಿಕೊಂಡು ಇವರಿಗೆ ತಕ್ಕ ಮರ್ಯಾದೆಕೊಡಿಸಬೇಕೆಂಬ ಸದಿಚ್ಛೆಯಿಂದ ಅವರಿಗೆ ಪುನಃ ಪುನಃ ಪ್ರಶ್ನೆ ಮಾಡಿದನು. ಆದರೂ ನಿರರ್ಥಕ ಕಡೆಗೆ ಕಾಳಿದಾಸನು — ಎಲೋ ಬ್ರಾಹ್ಮಣ ನೀವು ಕೇವಲ ಜನಿವಾರದಿಂದ ಬ್ರಾಹ್ಮಣರಿರುವಂತೆ ತೋರುವದು, ಆದರೂ ಆಗಲಿ ಬಾಲ್ಯದಿಂದ

ನಿಮಗೆ ನಿಮ್ಮ ಹಿರಿಯರು ಧಾರ್ಮಿಕ ವೇದ ಮಂತ್ರಗಳು ಸಂಸ್ಕಾರ ನೀಡಿರು ಹುದಲ್ಲವೆ?" ಎಂದು ಮತ್ತೆ ಮತ್ತೆ ಪೀಡಿಸಿ ಕೇಳಲು ಅವರೊಳಗಿನ ಒಬ್ಬನು ಧೈರ್ಯದಿಂದ:- ಮಹಾಶಯರೆ! ನನ್ನ ದುರ್ದೈವ, ಎಲ್ಲಿಯೂ ನನಗೆ ಯಾ ಬಗೆಯ ಶಿಕ್ಷಣ ದೊರಕಲಿಲ್ಲ. ನನ್ನ ತಂದೆ ಪುರಾಣಿಕನೆಂದು ಪ್ರಸಿದ್ಧನಾಗಿದ್ದನು. ಅವನು ಯಾವಾಗಲೂ ಮನೆಯಲ್ಲಿ ಕುಳಿತಿರುವಾಗ—

"ಅಣೋರಣಿಯಾನ್ ಮಹತೋಮಹೀಯಾನ್"

ಎಂಬುದಾಗಿ ಉಚ್ಚರಿಸುತ್ತಿದ್ದ ವಾಕ್ಯವೊಂದೇ ಮಾತ್ರ ನನಗೆ ಪಾಠವಿ ಎಂದನು, ಅವನಂತೆ ಇನ್ನೊಬ್ಬ ಬ್ರಾಹ್ಮಣನು ಕಾಳಿದಾಸನನ್ನು ಕುರಿತು ಸ್ವಾಮಿ! ವರುಷಕ್ಕೊಂದಾವರ್ತಿ ಸಾಮೂಹಿಕ ಶ್ರಾವಣಿ ನಡೆಯುವಲ್ಲಿಗೆ ಹೋಗಿ ಯಜ್ಞೋಪವೀತ ಧರಿಸಿಕೊಂಡು ಬರುವದನ್ನು ನಾನು ತಪ್ಪಿಸಿಲ್ಲ. ಆ ಕಾಲಕ್ಕೆ ಎಲ್ಲ ಬ್ರಾಹ್ಮಣರು—

"ಯಜ್ಞೋಪವೀತಂ ಪರಮಂ ಪವಿತ್ರಮ್"

ಎಂದು ಉಚ್ಚರಿಸುವದನ್ನು ನಾನು ಕಿವಿಯಾರೆ ಕೇಳಿ ದೃಢ ಪಾಠವಾಗಿರಿಸಿಕೊಂಡಿರುವೆನು" ಎಂದನು. ಕೂಡಲೇ ಕಾಳಿದಾಸನು ಅವರಿಬ್ಬರನ್ನು ಕುರಿತು—

"ಬ್ರಾಹ್ಮಣರೆ! ನಿಮಗೆ ಕಂಠಗತವಿದ್ದ ಈ ವಾಕ್ಯಗಳಷ್ಟೇ ಸಾಕು ನಿಮ್ಮ ಇಂದಿನ ಸಭೆಗೆ ಕರೆದೊಯ್ಯುವೆನು, ರಾಜನೆದುರು ಈಗ ನನ್ನ ಮುಂದೆ ಹೇಳಿದ ವಾಕ್ಯ ಉಚ್ಚರಿಸಿರಿ, ಅಂದರೆ ನಿಮಗೆ ಸಂಭಾವನೆ ಸಿಗಬಹುದು ಎಂದು ಹೇಳಿ ಅವರಿಬ್ಬರಿಗೂ ಸಭೆಗೆ ಬರಲಿಕ್ಕೆ ಹೇಳಿ ಕಳಿಸಿಕೊಟ್ಟನು.

ನಿತ್ಯ ನಿಯಮಿತದಂತೆ ಆ ದಿನ ಮಧ್ಯಾಹ್ನದಲ್ಲಿ ಪಂಡಿತರ ಸಭೆಗೂಡಲು, ಕಾಳಿದಾಸನು ಬರುವದರೊಳಗೆ ಈ ಪಂಡಿತರಿಬ್ಬರು ಹೋಗಿ ಗುಂಪಿನಲ್ಲಿ ಕುಳಿತಿರುವರು ಕಾಳಿದಾಸನು ಬಂದ ನಂತರ ಭೋಜರಾಜನು ಪಂಡಿತರ ಪರೀಕ್ಷೆ—ವಿದ್ಯಾ ನಿರೀಕ್ಷೆ ನಡೆಯಿಸಿದನು. ಬಹು ಜನ ಪಂಡಿತರು ಸರತಿಯು ಮುಗಿದು ಅವರು ತಮತಮಗೆ ಮೆಚ್ಚುಗೆಯೊಂದಿಗೆ ತಮ್ಮ ತಮ್ಮ ಸ್ಥಾನಕ್ಕೆ ಹೋದರು ನಂತರ ದೂರ ದೇಶದ ಈ ಪಂಡಿತರ

ರಿಯು ಬಂದಿತು. ಇಬ್ಬರೂ ರಾಜನೆದರಿನಲ್ಲಿ ಕುಳಿತರು. ರಾಜನು ಅವರ ರೊಳು ಒಬ್ಬನನ್ನು ಕುರಿತು– "ಬ್ರಾಹ್ಮಣ! ನಿಮ್ಮ ಅಧ್ಯಯನವೆಷ್ಟಾಗಿದೆಂಬು ದನ್ನು ನಿರ್ದಶಿಸುವಿರಾ" ಎಂದು ಕೇಳಲು ಅವನು ಎದ್ದು ನಿಂತು—

"ಅಣೋರಣೀಯಾನ್ ಮಹತೋಮಹೀಯಾನ್"

ಎಂದು ಉಚ್ಚರಿಸಿದ ಕೂಡಲೇ ರಾಜನು–ಏನು ಬ್ರಾಹ್ಮಣಾ! ನೀನ್ನ ಪುರಾಣ ಹೇಳಲು ಬಂದಿರುವಿಯಾ? ಸಾಕು! ನಿನ್ನ ಪುರಾಣದೊಂದಿಗೆ ಕುಳಿತು ಬಿಡು" ಎಂದು ಹೀಗಳೆಯಲು ಬ್ರಾಹ್ಮಣನು ಪೆಚ್ಚುಮೊಗದಿಂದ ಅಲ್ಲಿಯೇ ಕುಳಿತನು. ಬಳಿಕ ಇನ್ನೊಬ್ಬ ಬ್ರಾಹ್ಮಣನಿಗೆ ಅದೇ ಪ್ರಶ್ನೆ ಮಾಡಲು ಅವನು–

"ಯಜ್ಞೋಪವೀತಂ ಪರಮಪವಿತ್ರಂ" ಎಂದನು. ಕೂಡಲೇ ಭೋಜ ರಾಜನು:– ಎಲೈ ಬ್ರಾಹ್ಮಣ! ಇದು ವಿದ್ವತ್ಪರೀಕ್ಷೆಯ ಸಭೆಯು ಶ್ರಾವಣಿಯ ವಿಧಿಯನ್ನು ನಡೆಸುವ ಗುಡಿಯಲ್ಲ ಕುಳಿತುಕೊಳ್ಳು" ಎಂದೆನ್ನಲು ಅವನೂ ಹುಚ್ಚನಂತಾಗಿ ಕುಳಿತುಬಿಟ್ಟನು. ಆಗ ಭೋಜರಾಜನು:– "ಕಾಳಿದಾಸ! ನೋಡಿದಿರಾ ಈ ಬ್ರಾಹ್ಮಣರಲ್ಲಿಯ ವಿದ್ಯೆಯ ಸಡಗರವನ್ನು! ಹೀಗಾದರೆ ಬ್ರಾಹ್ಮಣತ್ವ........" ಎಂದು ನುಡಿಯುತ್ತಿರುವಷ್ಟರಲ್ಲಿಯೇ ಕಾಳಿದಾಸನು ನಡುವೆ ಬಾಯಿ ಹಾಕಿ "ಧರ್ಮ ಪ್ರಭುವೇ! ಪೂರ್ಣ ವಿಚಾರ ಮಾಡದೆ ಹೆಸರಿಡುವದು ತಪ್ಪು. ಈ ಬ್ರಾಹ್ಮಣರು ಬಹಳೇ ಓದಿದವರೆಂದು ನನಗೆ ತೋರುವದು ಎಂದೆನ್ನಲು ಭೋಜರಾಜನು– "ಕವಿವರ! ಅದನ್ನು ನನಗೆ ಅದೆಂತು ನಿದರ್ಶನ ಮಾಡಿಕೊಡುವಿರಿ"? ಎಂದು ಕೇಳಲು ಕಾಳಿದಾಸನು ಸರಿಸವಾಗಿ ನಿಂತು:— "ಪ್ರಭೋ !

||"ಅಣೋರಣೀಯಾನ್ ಮಹತೋಮಹೀಯಾನ್
ಮಧ್ಯಂ ನಿತಂಬಂ ಯದಂಗನಾಯಾಃ
ತದರಹಾರಿದ್ರ್ಯ ನಿಮಜ್ಜನೇನ
ಯಜ್ಞೋಪವೀತಂ ಪರಮಂ ಪವಿತ್ರಮ್ ||

(ಅರ್ಥ– ಸ್ತ್ರೀಯಳ ನಡುವು ಅಣುವಿಗಿಂತಲೂ ಸೂಕ್ಷ್ಮವಿರಬೇಕು ಆಕೆಯ ಕಿಗಗಳು ದೊಡ್ಡದಕ್ಕಿಂತಲೂ ದೊಡ್ಡವಿರಬೇಕು. ಇಂಥ

ಸ್ತ್ರೀಯಳನ್ನು ಆಲಿಂಗಿಸಿ ಅವಳ ಮೈಯು ಅರಿಷಿಣದಿಂದ ಲಿಪ್ತವಾದಂಥ ಜನಿವಾರವು ಬಹು ಪವಿತ್ರವಾದದ್ದು.

ಈ ಪ್ರಕಾರ ಕಾಳಿದಾಸನು ಆ ಬ್ರಾಹ್ಮಣರಿಬ್ಬರ ವಾಕ್ಯಗಳನ್ನು ಜೋಡಿಸಿ ಶ್ಲೋಕ ಪೂರ್ಣ ಮಾಡಿದುದನ್ನು ಕೇಳಿ ರಾಜನು ಹರ್ಷಯುಕ್ತನಾಗಿ ನಗಹತ್ತಿದನು. ಹಾಗು ಆ ಬ್ರಾಹ್ಮಣರನ್ನು ನಿನ್ನ ಇಚ್ಛೆಯಂತೆ ಸನ್ಮಾನಿಸಿ ಸಂಭಾವನೆ ಕೊಟ್ಟು ಕಳಿಸಬೇಕು ಎಂದು ಕಾಳಿದಾಸನಿಗೆ ಅಪ್ಪಣೆಕೊಟ್ಟನು. ರಾಜಾಜ್ಞೆಯಂತೆ ಕಾಳಿದಾಸನು ಆ ಬ್ರಾಹ್ಮಣನಿಗೆ ಮೇಲ್ತರದ ಮೆಚ್ಚಿಗೆ ಕೊಟ್ಟು ಬೀಳ್ಕೊಟ್ಟನು.

## (೧೨)

ಒಂದು ಸಾರೆ ಭೋಜರಾಜನು ಏನೋ ಒಂದು ನೆವದಿಂದ ಕಾಳಿದಾಸನನ್ನು ರಾಜ್ಯದಿಂದ ಹೊರತಳ್ಳಿದನು. ರಾಜಾಜ್ಞೆ ಮನ್ನಿಸಿ ಕಾಳಿದಾಸ ವಂಗದೇಶದ ಒಂದು ದೂರಿನ ಹಳ್ಳಿಗೆ ಹೋಗಿ ಅಲ್ಲಿ ಇರಹತ್ತಿದನು. ಮುಂದೆ ವರ್ಷಾರು ತಿಂಗಳಿನವರೆಗೂ ಅವನ ಇರುವಿಕೆಯು ಯಾರಿಗೂ ಗೊತ್ತಾಗಲಿಲ್ಲ ಇದುವರೆಗೆ ಭೋಜರಾಜನಿಗೆ ಅವಶ್ಯಕತೆಯೂ ಬೀಳಲಿಲ್ಲ

ನಂತರ ಧಾರಾನಗರದ ಒಬ್ಬ ಬ್ರಾಹ್ಮಣನು ಸಭೆಗೆ ಬಂದು— "ಪ್ರಭು! ನನ್ನ ಮಗ ಸುಶವರ್ಮನು ವಿದ್ಯಾರ್ಥಿಯಾಗಿ ಕಾಶಿಗೆ ಹೋಗಿದ್ದನು. ಅವನ ಜೊತೆಗೆ ವಿಷ್ಣುಶರ್ಮನೆಂಬ ವಿದ್ಯಾರ್ಥಿಯು ಹೋಗಿದ್ದನು. ವಿಷ್ಣುಶರ್ಮನು ತನ್ನ ಶಿಕ್ಷಣ ಮುಗಿಸಿಕೊಂಡು ಬಂದನು ನನ್ನ ಮಗನು ಬರಲಿಲ್ಲ. ಅವನು ಒಂದು ತಾಳಪತ್ರದ ಮೇಲೆ ತನ್ನ ಹಸ್ತಾಕ್ಷರದಿಂದ ಅ. ಪ್ರ. ಶಿ. ಖ. ಈ ನಾಲ್ಕು ವರ್ಣಗಳನ್ನು ಬರೆದು ವಿಷ್ಣುಶರ್ಮನಿಂದ ಕಳಿಸಿದನು. ಮುಂದೆ ನನ್ನ ಜೀವ ತಡೆಯದೆ ಹಾಗೆ ಕಾಶಿಗೆ ಹೋದೆನು ಅಲ್ಲಿ ನನ್ನ ಮಗ ಇದ್ದಿರಲಿಲ್ಲ. ಸುತ್ತೆಲ್ಲ ಶೋಧಿಸಿದೆನು. ಎಲ್ಲಿಯೂ ಕಂಡು ಬರಲಿಲ್ಲ. ಬಹುಶಃ ಅವನು ತನ್ನ ಇರುವಿಕೆಯ ಸಂಕೇತವನ್ನು ಈ ತಾಳಪತ್ರದ ಮೇಲೆ ಬರೆದಿರುವ ವರ್ಣಗಳಿಂದ ಸೂಚಿಸಿರಬಹುದು. ನಿಮ್ಮ

ಸಭೆಯು ವಿದ್ವಾಂಸರಿಂದ ಈ ಸಂಕೇತದ ರಹಸ್ಯವನ್ನು ನನಗೆ ತಿಳಿಸುವವಾಗ ಬೇಕು" ಎಂದು ಬೇಡಿಕೊಂಡನು. ಆ ವರ್ಣ ಲಿಖಿತ ಪತ್ರವನ್ನು ರಾಜನ ಕೈಗೆ ಕೊಟ್ಟನು ಕೂಡಲೇ ರಾಜನು ತನ್ನ ಎಲ್ಲ ಪಂಡಿತರಿಂದ ಆ ನಾಲ್ಕೂ ವರ್ಣಗಳ ಇಂಗಿತವನ್ನು ಕೇಳಿದನು. ಎಲ್ಲರೂ 'ಈ ನಾಲ್ಕೂ ಅಕ್ಷರಗಳಿಂದ ತಮಗೆ ಏನೂ ಬೋಧೆಯಾಗುವದಿಲ್ಲವೆಂದು ಸ್ಪಷ್ಟವಾಗಿ ಹೇಳಿದರು. ಆಗ ರಾಜನು ತನ್ನಲ್ಲಿ— "ನನ್ನ ಕಾಳಿದಾಸನು ಇದ್ದಿದ್ದರೆ ಈ ವರ್ಣ ಸಮಸ್ಯೆಯು ಪರಿಹಾರವಾಗುತ್ತಿತ್ತು" ಎಂದು ಪಶ್ಚಾತ್ತಾಪ ಪಡಹತ್ತಿದ್ದನು. ಇನ್ನು ಈ ಬ್ರಾಹ್ಮಣನನ್ನು ಹಾಗೇ ಕಳಿಸಿದರೆ ನಮ್ಮ ವಿದ್ವತ್ಸಭೆಯು ಕೀರ್ತಿ ಕಳಸವು ಕುಕ್ಕುರಿಸಿ ಬೀಳುವದು. ಹೇಗಾದರೂ ಮಾಡಿ ಕಾಳಿದಾಸನನ್ನು ಶೋಧಿಸಿ ಅವನಿಂದ ಈ ವರ್ಣ ರಹಸ್ಯವನ್ನರಿತು ಈ ಬ್ರಾಹ್ಮಣನಿಗೆ ತಿಳಿಸಬೇಕು ಎಂದು ಬಗೆದು ಅವನು ಆ ಬ್ರಾಹ್ಮಣನನ್ನು ಕುರಿತು— "ವಿಪ್ರನೇ! ಇನ್ನು ಒಂದು ಮಾಸ ಕಳೆದ ನಂತರ ಈ ವರ್ಣಗಳ ಸಂಕೇತ ವಿಚಾರ ತಿಳಿಸುವೆನು. ನೀನು ಹೋಗು" ಎಂದು ಹೇಳಿ ಅವನ ಮನೆಗೆ ಕಳಿಸಿದನು.

ಮರುದಿನ ಭೋಜರಾಜನು_"ಅಪ್ರಶಿಖ" ಎಂಬ ನಾಲ್ಕು ಅಕ್ಷರ ಪತ್ರದಿಂದ ರಹಸ್ಯವನ್ನು ಸ್ಫುಟಿಸಿ ಯಾರಾದರೂ ತಕ್ಕ ಬಗೆಯಿಂದ ನಮಗೆ ತಿಳಿಸಿದರೆ ನಾವು ಅವನನ್ನು ಹತ್ತು ಸಾವಿರ ಹೊನ್ನು ಕೊಟ್ಟು ಸತ್ಕರಿಸುವೆವು" ಎಂದು ಡಂಗುರದಿಂದ ರಾಜ್ಯದ ಒಳ ಹೊರಗಿನ ಗ್ರಾಮಗಳಿಗೆಲ್ಲ ಸಾರಿದನು. ತಿಂಗಳೊಪ್ಪತ್ತು ಗತಿಸಿದರೂ ವರ್ಣಗಳ ಇಂಗಿತವನ್ನು ಯಾರೂ ಹೇಳಲಿಲ್ಲ.

ಕಾಳಿದಾಸನು ವಂಗದೇಶದ ಒಂದು ಹಳ್ಳಿಯಲ್ಲಿ ಇದ್ದನೆಂದು ಹಿಂದೆ ಹೇಳಿದೆ. ಅಲ್ಲಿ ಅವನು ಬಡ ವೈದಿಕನ ಮನೆಯಲ್ಲಿ ಹೆಸರು_ವೇಷಗಳನ್ನು ಬದಲಿಸಿಕೊಂಡು ಅಜ್ಞಾತದಲ್ಲಿಯೇ ಇದ್ದನು. ಆ ವೈದಿಕನಿಂದ ಭೋಜರಾಜನ ಪ್ರಕಟನೆಯು ಆ ಕಾಳಿದಾಸನಿಗೆ ಗೊತ್ತಾಯಿತು. ಆಗ ಅವನು ತನಗೆ ಇಷ್ಟುವರೆಗೆ ಆಶ್ರಯಕೊಟ್ಟ ಬಡ ವೈದಿಕನಿಗೆ ಈ ಪ್ರಕಟನೆಯಿಂದ ಹತ್ತು ಸಾವಿರ ಹೊನ್ನುಗಳನ್ನು ಸಲ್ಲುವಂತೆ ಇಚ್ಛಿಸಿದನು. ಹಾಗು ಆಗಲೇ ಆ ನಾಲ್ಕು ವರ್ಣಗಳಿಂದ ಯುಕ್ತವಾಗಿರುವ ಒಂದು ಶ್ಲೋಕ ಬರೆದು ವೈದಿ

ಕನಿಗೆ ಕೊಟ್ಟನು. "ನೀನು ಇದನ್ನು ತೆಗೆದುಕೊಂಡು ಭೋಜರಾಜನ ಸಭೆಗೆ ಹೋಗು, ಎದುರಿನಲ್ಲಿ ನಿಂತು ಓದು, ನಾನು ಬರೆದು ಕೊಟ್ಟುದದನ್ನು ನೀನು ಯಾರಿಗೂ ತಿಳಿಸಬೇಡ. ರಾಜನು ಈ ಶ್ಲೋಕದ ರಹಸ್ಯವೇನು? ಎಂದು ಕೇಳಿದರೆ ನೀನು—

"ಈ ತಾಡವಾಲೆಯ ಪತ್ರ ತಂದುಕೊಟ್ಟವನನ್ನೇ ವಿಚಾರಿಸಿ ಎಂದು ಹೇಳಿ ಬಿಡು" ಎಂದು ಸೂಚಿಸಿ ಅವನನ್ನು ಧಾರಾನಗರಕ್ಕೆ ಕಳಿಸಿದನು. ಅದ ರಂತೆ ವೈದಿಕನು ಹೋಗಿ ಆ ಶ್ಲೋಕವನ್ನೋದಿದನು ಭೋಜರಾಜನಿಗೆ ಆನಂದ ವಾಯಿತು. ಅವನು ವೈದಿಕನನ್ನು ಅಲ್ಲಿಯೇ ಕುಳ್ಳಿರಿಸಿಕೊಂಡನು. ಆ ವೈದಿ ಕನು ರಾಜನ ಮುಂದೆ ಓದಿದ ಶ್ಲೋಕವು ಯಾವುದೆಂದರೆ—

"ಅನೇನ ತವ ಪುತ್ರಸ್ಯ ಪ್ರಸುಪ್ತಸ್ಯ ವನಾಂತರೇ |
ಶಿಖಾಮಾದಾಯ ಹಸ್ತೇನ ಖಡ್ಗೇನೋಪಹತಂ ಶಿರಃ

(ಅರ್ಥ– ಬ್ರಾಹ್ಮಣಾ! ನಿನ್ನ ಮಗನು ಅರಣ್ಯದಲ್ಲಿ ನಿದ್ರಿಸ್ಥನಾಗಿರು ವಾಗ ಅವನ ಜಂಡಿಯನ್ನು ಹಿಡಿದು ಈತನು ಖಡ್ಗದಿಂದ ಅವನ ಶಿರಸ್ಸನ್ನು ಕತ್ತರಿಸಿದನು.)

ಈ ಮೇಲಿನ ಶ್ಲೋಕವೇ ಕಾಳಿದಾಸನು ಬರೆದು ಕೊಟ್ಟದುದು. ಆ ವೈದಿ ಕನು ಈ ಶ್ಲೋಕದೊಂದಿಗೆ ರಾಜಸಭೆಗೆ ಹೋದನು. ಕಾಳಿದಾಸನು ಬರೆದು ಕೊಟ್ಟ ಶ್ಲೋಕವನ್ನು ಓದಿ ಅ, ಪ್ರ, ಶಿ, ಖ, ಈ ನಾಲ್ಕು ವರ್ಣಗಳುಳ್ಳ ಆ ಶ್ಲೋಕವನ್ನು ರಾಜನಿಗೆ ಹೇಳಿಬಿಟ್ಟನು. ಅದನ್ನು ಕೇಳಿ ಭೋಜರಾಜನು ಬಹಳೇ ಆನಂದಪಟ್ಟನು. ಕಡೆಗೆ ಅವನು ಆ ವೈದಿಕನನ್ನು ಕುರಿತು ಈ ಪದ್ಯದ ಭಾವವೇನು? ಎಂದು ಕೇಳಲು ವೈದಿಕನು– "ರಾಜನ್! ಆ ನಾಲ್ಕು ವರ್ಣಗಳುಳ್ಳ ಪತ್ರ ತಂದುಕೊಟ್ಟವನನ್ನೇ ವಿಚಾರಿಸಿ" ಎಂದು ಹೇಳಲು ಹಿಂಜರಿದನು.

ಬಳಿಕ ರಾಜನು ಆ ಸುಶರ್ಮನ ತಂದೆಯನ್ನು ಕುರಿತು—

"ಬ್ರಾಹ್ಮಣ! ನಿನ್ನ ಮಗನ ಈ ಪತ್ರವನ್ನು ನಿನ್ನ ಕೈಗೆ ಕೊಟ್ಟವ ನನ್ನು ಇಲ್ಲಿಗೆ ಕರೆತರಬೇಕು" ಎಂದು ಹೇಳಿ ಕಳಿಸಿದನು. ಆ ಬ್ರಾಹ

ಣನು ಹಾಗೇ ಹೋಗಿ ವಿಷ್ಣುಶರ್ಮನನ್ನು ಕರೆತಂದನು. ಅವನನ್ನು ಕುರಿತು ಭೋಜರಾಜನು-"ವಿಷ್ಣುಶರ್ಮ! ಈ ಪತ್ರವನ್ನು ಸುಶರ್ಮನ ತಂದೆಗೆ ನೀನೇ ತಂದುಕೊಟ್ಟೆಯಲ್ಲವೇ?" ಎಂದು ಕೇಳಲು ವಿಷ್ಣುಶರ್ಮನು ಅದಕ್ಕೆ ಒಪ್ಪಿಕೊಂಡನು. ಆಗ ರಾಜನು- "ನೀನು ಕಾಶಿಯಲ್ಲಿ ಕಲಿತು ವಿದ್ಯೆ ಸಂಪಾದಿಸಿರುವಿ, ಆದ್ದರಿಂದ ಈ ಶ್ಲೋಕದ ಅರ್ಥವನ್ನು ಹೇಳು" ಎಂದೆನ್ನಲು ವಿಷ್ಣುಶರ್ಮನು ಮುಂದಿನ ವಿಚಾರ ತಿಳಿಯದೇ ಓದಿ ಅರ್ಥ ಹೇಳಿದನು. ಆಗ ರಾಜನು-ಈ ಪತ್ರಕ್ಕೆ ಸಂಬಂಧಿಸಿದ ವ್ಯಕ್ತಿಗಳಾರು? ಎಂದು ಕೇಳಲು ವಿಷ್ಣುಶರ್ಮನು- 'ಸುಶರ್ಮನೂ ಅವನ ತಂದೆಯೂ' ಎಂದು ಹೇಳಿದನು. 'ಹಾಗಾದರೆ 'ಈತನು' ಎಂದು ಎಂಬ ಶಬ್ದವು ಯಾರಿಗೆ ಅನ್ವಯಿಸುವದು' ಎಂದು ಕೇಳಲು ವಿಷ್ಣುಶರ್ಮನು ನಿರುತ್ತರನಾದನು.

ಆಗ ಭೋಜರಾಜನು ಗದ್ದರಿಸಿ ಆ ವಿಷ್ಣುಶರ್ಮನ ಹೇಳಿಕೆಯನ್ನು ಕೇಳಿಕೊಂಡನು. ವಿಷ್ಣುಶರ್ಮನು- "ಸುಶರ್ಮನೂ ನಾನೂ ಕೂಡಿ ಕಾಶಿಯಲ್ಲಿ ಓದಿದೆವು. ಅವನ ಬುದ್ಧಿಯು ತೀಕ್ಷ್ಣವಾದುದರಿಂದ ಅವನು ವಿದ್ಯಾವಂತನಾದನು. ನನಗೆ ವಿದ್ಯೆ ಲಭಿಸಲಿಲ್ಲ.

ಇಬ್ಬರೂ ಕೂಡಿಕೊಂಡು ಕಾಶಿಯಿಂದ ಊರಿಗೆ ಬರಲು ಹೊರಟೆವು ನಡುದಾರಿಗೆ ಬಂದೆವು ಅವನ ಏಳ್ಗೆಯು ನನಗೆ ಮಾತ್ಸರ್ಯಯುಕ್ತವೂ ಅಸಹ್ಯವೂ ಆಯಿತು. ಆ ವಿಕಾರದಲ್ಲಿಯೇ ನಾನು ಆ ಸುಶರ್ಮನನ್ನು ಖಡ್ಗದಿಂದ ಇರಿದು ಕೊಂದೆನು' ಎಂದು ಹೇಳಿದನು.

ಸುಶರ್ಮನ ತಂದೆಯು ತನ್ನ ಮಗನು ವಧೆಯಾದುದನ್ನು ಕೇಳಿ ಬಹಳೇ ತಾಪ ಮಾಡಿಕೊಳ್ಳಹತ್ತಿದನು. ವಿಷ್ಣುಸರ್ಮನು ತನ್ನ ದುಷ್ಟ ಕೃತಿಗಾಗಿ ನೆರೆಮನೆಯ ಸೋಬತಿಯಾದನು.

ತರುವಾಯ ಭೋಜರಾಜನು ಆ ವೈದಿಕನನ್ನು ಕುರಿತು— "ಬ್ರಾಹ್ಮಣ! ಈ ಶ್ಲೋಕವು ನಿನ್ನಿಂದ ರಚಿಸಲ್ಪಟ್ಟಿತೋ? ಎಂದು ಕೇಳಿದ ಕೂಡಲೇ ಅವನು ಸತ್ಯವನ್ನು ಬಚ್ಚಿಡುವ ಧೈರ್ಯದಿಂದ ಪರಾವರ್ತನಾಗಿ— "ರಾಜನ್! ಈಗ ವರ್ಷಾನು ತಿಂಗಳುಗಳಿಂದ ನನ್ನ ಮನೆಯಲ್ಲಿ ನಿರಾಶ್ರಿತ

ಗೃಹಸ್ಥನೊಬ್ಬನು ಬಂದಿರುವನು. ತಮ್ಮ ಪ್ರಕಟನೆಯ ವಾರ್ತೆ ನನಗೆ ಗೊತ್ತಾಯಿತು. ಅದನ್ನು ಗೃಹಸ್ಥನಿಗೆ ತಿಳಿಸಿನೆನು. ಅದಕ್ಕೆ ಅವನು ಆಗಿನ ವೇಳೆ ಈ ಶ್ಲೋಕ ಬರೆದು ನನ್ನ ಕೈಗೆ ಕೊಟ್ಟನು. ಹಾಗು ಈ ಶ್ಲೋಕವನ್ನು ನೀನು ಭೋಜರಾಜನ ವಿದ್ವತ್ಸಭೆಯಲ್ಲಿ ಓದಿದೆಯಾದರೆ ನಿನ್ನ ದಾರಿದ್ರ್ಯ ಹಿಂಗುವದು' ಎಂದು ಹೇಳಿದನು. ಅದೇ ಆಶೆಯಿಂದ ನಾನು ಇಲ್ಲಿಗೆ ಬಂದೆನು" ಎಂದು ಹೇಳಲು ಭೋಜರಾಜನು ಆ ವೈದಿಕನಿಗೆ ಹತ್ತು ಸಾವಿರ ಹೊನ್ನು ಮೆಚ್ಚುಗೆಯಾಗಿ ಕೊಟ್ಟನು. ಹಾಗು ತನ್ನ ಮಂತ್ರಿ ಸಹಿತ ಆ ವೈದಿಕನ ಜೊತೆಗೆ ಹೋದರು. ವೈದಿಕನ ಮಕ್ಕಳಿಗೆ ಪಾಠ ಹೇಳುತ್ತ ಕುಳಿತಿರುವ ಕಾಳಿದಾಸನನ್ನು ಕಂಡನು. ಇಬ್ಬರೂ ಕಂಠ ತುಂಬಿಕೊಂಡು ಎದುರು ಬದುರಾಗಿ ಬಂದು ಒಬ್ಬರನ್ನೊಬ್ಬರು ಅಪ್ಪಿಕೊಂಡರು.

ವರ್ಷಾರು ತಿಂಗಳಿಂದ ಅಗಲಿದ ಸ್ನೇಹಿತರಿಬ್ಬರ ಅಂಬಿನ ಸಮಾಗವು ಅಪೂರ್ವವಾಯಿತು.

ಬಳಿಕ ಭೋಜನದ ಹೊತ್ತಾದುದರಿಂದ ವೈದಿಕನ ಆಗ್ರಹದ ಮೇರೆಗೆ ಊಟಮಾಡಿ ಅವರು ಧಾರಾನಗರಕ್ಕೆ ಹಿಂದಿರುಗಿ ಬಂದರು.

ವೈದಿಕನು ಕಾಳಿದಾಸನ ಸತ್ಸಹವಾಸದ ಫಲವಾಗಿ ತನ್ನ ಆಜನ್ಮ ದಾರಿದ್ರ್ಯವನ್ನು ನೀಗಿ ಸುಖದಿಂದ ಕಾಲಕ್ಷಪಣ ಮಾಡಹತ್ತಿದನು.

## (೧೩)

ಉತ್ತರ ಭಾರತದ ಮಿಥಿಲಾವಾಸಿ 'ಗುಣಾಧಿಪ'ನೆಂಬವನು ಪಾಂಡಿತ್ಯದಲ್ಲಿ ಮಿಗಿಲಾಗಿದ್ದನು. ತನ್ನ ವಿದ್ವತ್ತೆಯನ್ನು ಮುಂದಿರಿಸಿಕೊಂಡು ಜಗದ್ದಿಗ್ವಿಜಯಕ್ಕಾಗಿ ಹೊರಟನು. ಹೋದ ಹೋದಲ್ಲಿಯು ಪಂಡಿತರನ್ನು ವಾದ ಪ್ರಸಂಗಗಳಿಂದ ಗೆಲ್ಲುವನು. ಅವರಿಂದ ಜಯಪತ್ರವನ್ನು ಬರೆಯಿಸಿಕೊಂಡು ಮುನ್ನಡೆಯುವನು. ಇದೇ ಕ್ರಮದಿಂದ ಉತ್ತರ ಮಧ್ಯನಾಡುಗಳನ್ನೆಲ್ಲ ಸುತ್ತಾಡಿ ಅವನು ಕಡೆಗೆ ಭೋಜರಾಜನ ಧಾರಾನಗರಕ್ಕೆ

ಬಂದನು. ಈ ಮೊದಲು ಅವನು ಸಂಚಾರ ಮಾಡಿದಲ್ಲೆಲ್ಲ ಭೋಜರಾಜನ ವಿದ್ವತ್ಸಭೆಯ ಹಾಗು ಅಲ್ಲಿಯ ಪಂಡಿತರ ಮೇಲ್ಮೆಯ ವಾರ್ತೆಯನ್ನು ಕೇಳಿ ಕೇಳಿ ಮತ್ಸರಪೂರಿತನಾಗಿದ್ದನು. ಒಂದಿಲ್ಲೊಂದು ದಿನ ಧಾರಾನಗರಕ್ಕೆ ಹೋಗಿ ಅಲ್ಲಿಯ ಪಂಡಿತರಿಂದ ಜಯಪತ್ರ ದೊರಕಿಸಿಕೊಂಡೇ ತೀರುವೆನು ಎಂದು ಅವನು ಕಂಡಕಂಡವರ ಮುಂದೆ ಬಹಿರಂಗವಾಗಿ ಹೇಳುತ್ತ ಬಂದಿದ್ದನು. ಆ ಉದ್ದೇಶದಿಂದಲೇ ಈಗ ಅವನು ಈ ಪಟ್ಟಣಕ್ಕೆ ಬಂದು ನಗರದ ಹೊರಗಿನ ಒಂದು ಭವ್ಯ ದೇವಾಲಯದಲ್ಲಿ ಇಳಿದುಕೊಂಡನು. ಸಂಗಡ ಹಲವಾರು ಶಿಷ್ಯರು ಪಲ್ಲಕ್ಕಿ ವೇತ್ರದಂಡ ಬಿದುರಿನ ಬಿನ್ನವತ್ತಳಿಕೆಗಳು ಇವೆಲ್ಲ ಜಯ ಸೂಚಕ ವೈಭವಗಳು ಇವೆಲ್ಲ ಅವನ ಜೊತೆಗೇ ಇದ್ದವು. ಅಲ್ಲಿ ಅವನು ದಿನಾಲು ತನ್ನ ಶಿಷ್ಯರಿಂದ ಬಿರುದಾವಳಿಗಳನ್ನು ಹೊಗಳಿಸಿಕೊಳ್ಳುತ್ತ ಬೀದಿ ಬೀದಿ ಸಂಚರಿಸಿ ತಾನು ಉಳಿದುಕೊಂಡಿದ್ದ ದೇವಾಲಯಕ್ಕೆ ಬಂದನು. ಇದ ರಿಂದಾಗಿ ಇಲ್ಲಿಗೆ ಒಬ್ಬಾನೊಬ್ಬ ಅತಾರಕ ಪಂಡಿತನು ಬಂದಿರುವನೆಂಬ ವಾರ್ತೆಯು ಧಾರಾನಗರದ ತುಂಬಾ ಪಸರಿಸಿತು. ಈ ಸಂಗತಿಯು ಕಾಳಿದಾಸ ನಿಗೆ ಗೊತ್ತಾಗದಿರಲಿಲ್ಲ. ಏನಾದರೊಂದು ಬಗೆಯಿಂದ ಈ ಪಂಡಿತನ ಮದ ಭಂಗ ಮಾಡುವ ಯೋಚನೆ ಮಾಡಿದನು.

ಒಂದು ದಿನ ಕಾಳಿದಾಸನು ಭೋವಿಯ ವೇಷ ಧರಿಸಿಕೊಂಡು ಆ ಪಂಡಿ ತನಿದ್ದ ದೇವಾಲಯದೆದುರಿನಲ್ಲಿ ನಿಂತನು. ಪಂಡಿತ ಗುಣಾಧಿಪನು ದಿನ ದಂತೆ ನಗರದಲ್ಲಿ ಸುತ್ತಾಡಲು ಹೋಗುವದಕ್ಕೆ ಸಿದ್ಧನಾಗಿ ಬೋವಿಗಳಿಗೆ ತನ್ನ ಪಲ್ಲಕ್ಕಿಯನ್ನು ತರಲು ಆಜ್ಞೆ ಮಾಡಿದನು. ಆಕಸ್ಮಾತ್ತಾಗಿ ಆ ದಿನ ದಲ್ಲಿ ಅವನ ಒಬ್ಬ ಬೋವಿಯು ಬೇನೆಯಿಂದ ಹಾಸಿಗೆ ಹಿಡಿದಿದ್ದನು. ಉಳಿದ ಮೂವರೂ ಈ ಸಂಗತಿಯನ್ನು ಆ ಪಂಡಿತನಿಗೆ ವಿದಿತಪಡಿಸಿ ಪಲ್ಲಕ್ಕಿ ಹೋರುವದಕ್ಕೆ ತಮ್ಮ ಅಸಮರ್ಥತೆ ಸೂಚಿಸಿದರು. ಆಗ ಪಂಡಿ ತನು ಹೊರಕ್ಕೆ ಬಂದ ನಿಂತು— "ಇಲ್ಲಿ ಯಾರಾದರೂ ಪಲ್ಲಕ್ಕಿಯನ್ನು ಹೊರುವಂಥ ಕೂಲಿಕಾರರು ಇರುವರೇ?" ಎಂದು ಅಲ್ಲಿ ಕೂಡಿದ ಜನ ರನ್ನು ಕೇಳಲು ವೇಷಧಾರಿ ಬೋವಿ ಕಾಳಿದಾಸನು— "ಸ್ವಾಮೀ! ನಾನು ಬೋವಿಯ ಕೆಲಸವನ್ನೇ ಮಾಡುತ್ತಿರುವೆನು. ಅವಶ್ಯವಿದ್ದರೆ ನನ್ನನ್ನು

ಯೋಚಿಸಿಕೊಂಡು ಸಲ್ಲತಕ್ಕಷ್ಟು ಮಜೂರಿಯನ್ನು ಕೊಡಬೇಕು ಎಂದನು. ಕೂಡಲೇ ಪಂಡಿತರು–"ಹಾಗೆಯೇ ಆಗಲಿ, ನಿನಗೆ ತಕ್ಕಷ್ಟಕ್ಕಿಂತಲೂ ಹೆಚ್ಚು ಕೂಲಿ ಸಲ್ಲಿಸುವೆನು. ನಡೆ ಹೊರು, ಪಲ್ಲಕ್ಕಿಗೆ ಹೆಗಲು ಕೊಡು" ಎಂದು ಅವನಿಗೆ ಹೇಳಿದನು. ಅದರಂತೆ ಅವನು ಉಳಿದ ಬೋವಿಗಳೊಡನೆ ಪಲ್ಲಕ್ಕಿಗೆ ಹೆಗಲು ಕೊಟ್ಟನು. ಬಳಿಕ ಶಿಷ್ಯ ಸಮೇತದಿಂದ ಹೊರ ಬಂದು ಪಲ್ಲಕ್ಕಿಯಲ್ಲಿ ಕುಳಿತು– ರಾಜಬೀದಿಗೆ ಪಲ್ಲಕ್ಕಿ ಸಾಗಲಿ, ಎಂಬು ಬೋವಿಗಳಿಗೆ ಆಜ್ಞಾಪಿಸಿದನು. ಅದರಂತೆ ಅವರೆಲ್ಲರು ಅವನನ್ನು ಹೊತ್ತುಕೊಂಡು ನಡೆದರು

ಗುಣಾಧಿಪ ಪಂಡಿತನ ದೇಹದಾರ್ಢ್ಯವು ಅಷ್ಟಿರಲಿಲ್ಲ. ಸಾಮಾನ್ಯ ಜನರ ನಾಲ್ವಡಿ ತೂಕವು ಅವನದಾಗಿದ್ದಿತು. ಅವನ ವ್ಯಭಾರದಿಂದಲೇ ಬೋವಿಗಳು ಮೇಲೆ ಮೇಲೆ ಜಡ್ಡಿಗೆ ಗುರಿಯಾಗುತ್ತಿದ್ದರು.

ಈ ದಿನ ಅವನೇರಿದ ಪಲ್ಲಕ್ಕಿಯನ್ನು ಬೋವಿಗಳು ಹೊತ್ತುಕೊಂಡು ರಾಜಬೀದಿಯಲ್ಲಿ ನಡೆದಿರುವರು. ಅತ್ತಿತ್ತ ಸುತ್ತಲಿನ ಬೀದಿಗಳಲ್ಲೆಲ್ಲ ಹಾಯ್ದು ಕಡೆಗೆ ಪಲ್ಲಕ್ಕಿಯು ಅವನಿಳಿದ ದೇವಾಲಯಕ್ಕೆ ಬಂದಿತು. ಬೋವಿಗಳು ಪಲ್ಲಕ್ಕಿಯನ್ನು ನೆಲಕ್ಕಿಳಿಸಿದರು ಪಂಡಿತನು ಹೊರಕ್ಕೆ ಬಂದನು, ಕೂಲಿಯ ಬೋವಿಯನ್ನು ನೋಡಿ ತನ್ನ ಸಂಸ್ಕೃತ ವಾಣಿಯನ್ನು ಪ್ರದರ್ಶಿಸಿ—

"ಅಯಮಾಂದೋಲಿಕಾ ದಂಡಃ ಸ್ಕಂಧೆ ಕಿಂ ತವಬಾಧತಿ?"

(ಅರ್ಥ— ಎಲೋ ಬೋವಿಯೇ! ನಮ್ಮ ಪಲ್ಲಕ್ಕಿಯನ್ನು ಹೊರಲು ಬಂದ ಹೊಸಬನಾದ ನಿನ್ನ ಹೆಗಲ ನೋವಾಯಿತೇ?")

ಈ ಪ್ರಕಾರ ಪಂಡಿತನು ಸಂಸ್ಕೃತ ವಾಕ್ಯವನ್ನು 'ಕ್ರಿಯಾಪದ ಶಬ್ದ' ವಾದ 'ಬಾಧತೇ' ಎಂಬುದನ್ನು 'ಬಾಧತಿ' ಎಂದು ದೋಷಯುಕ್ತವಾಗಿ ಉಚ್ಚರಿಸಿದನು. ಅದನ್ನು ಕೇಳಿ ವೇಷಧಾರಿ ಬೋವಿಯು—

"ನಬಾಧತೇ ತಥಾ ಮಾಂ ಹಿ ಯಥಾ ಬಾಧತಿ ಬಾಧತೇ ||"

(ಅರ್ಥ– "ಮಹಾರಾಜ! ನೀವಾಡಿದ ವಾಕ್ಯದಲ್ಲಿ 'ಬಾಧತಿ' ಎಂಬ ವ್ಯಾಕರಣ ವಿಪರೀತ ಕ್ರಿಯಾಪದದಿಂದ ನನಗೆ ಉಂಟಾಗಿದ್ದ ನೋವು ನನ್ನ ಹೆಗಲಿಗೆ ಆಗಿರುವದಿಲ್ಲ) ಎಂದು ಕೂಡಲೇ ಉತ್ತರ ಹೇಳಿದನು

ಬೋವಿ ಸ್ವರೂಪ ವೇಷಧಾರಿ ಕಾಳಿದಾಸನ ಈ ಉತ್ತರವನ್ನು ಕೇಳಿ ಗಣಾಧಿಪತಿ ಪಂಡಿತನು ಚಕಿತನಾಗಿ ವ್ಯಾಕರಣ ವಿಷಯದ ಗೊಂದಲದಲ್ಲಿ ಬಿದ್ದನು. ಅವನು ಆ ವೇಷಧಾರಿ ಬೋವಿಯನ್ನು ಕುರಿತು— ಎಲೆ ಬೋವಿಯೆ! ನಿನಗೆ ಇಷ್ಟೊಂದು ವ್ಯಾಕರಣ ಜ್ಞಾನವು ಎಲ್ಲಿಂದ ಮತ್ತು ಯಾವ ಬಗೆಯಿಂದ ಪ್ರಾಪ್ತವಾಯಿತು' ಎಂದು ಕೇಳಲು ಅವನು— "ಮಹಾಪಂಡಿತರೆ! ನನಗೆ ಯಾವಾಗಲೂ ತಮ್ಮಂಥ ಪಂಡಿತರನ್ನು ಹೊರುವ ಪ್ರಸಂಗವು ಬಂದೇ ಬರುವದು. ಹೀಗಾಗಿ ಅವರ ಸಂಪರ್ಕದಿಂದ ನನಗೆ ವ್ಯಾಕರಣ ವಿಷಯದ ಅಲ್ಪ ಸ್ವಲ್ಪ ಜ್ಞಾನವಾಗಿದೆ ಎಂದು ಹೇಳಲು ಮತ್ತೆ ಗುಣಾಧಿಪತಿ ಪಂಡಿತನು— "ಎಲೋ! ನಿನಗೆ ಈ ನಗರದಲ್ಲಿಯ ಅದಾವ ಪಂಡಿತನ ಪರಿಚಯವುಂಟು" ಎನ್ನಲು ಆ ವೇಷಾಧಾರಿಯು "ಮಹಾಶಯರೇ! ನಾನು ಬಹಳ ವರುಷಗಳವರೆಗೆ ಕಾಳಿದಾಸ ಕವಿವರ್ಯರ ಪಲ್ಲಕ್ಕಿಯನ್ನು ಹೊರುತ್ತಲಿದ್ದೆನು. ಆದ್ದರಿಂದ ಅವರ ಸಹವಾಸ ಪರಿಚಯುಗಳು ನನಗೆ ದೊರೆತವು ಇಷ್ಟೇ ಅಲ್ಲ, ಅವರ ಸಂಪರ್ಕದಿಂದೆನ್ನಿರಿ ಅಥವಾ ಕೃಪೆಯಿಂದೆನ್ನಿರಿ ನನಗೆ ವ್ಯಾಕರಣ ಕಾವ್ಯಗಳ ಜ್ಞಾನವುಂಟಾಗಿದೆ.

ಬೋವಿಯ ಈ ಭಾಷಣವನ್ನು ಕೇಳಿ ಗುಣಾಧಿಪನು ಇನ್ನಿಷ್ಟು ಗೊಂದಲದಲ್ಲಿ ಮುಳುಗಿದನು. ಅವನು ತನ್ನೊಳಗೆ— "ಕಾಳಿದಾಸನ ಸಹವಾಸದಲ್ಲಿಯ ಮಾತಿಗೆ ಬಾರದ ಯಃಕಶ್ಚಿತ ಬೋವಿ ಈತನು ನನ್ನ ಮಾತಿನಲ್ಲಿಯ ವ್ಯಾಕರಣ ದೋಷವನ್ನೆತ್ತಿ ನನ್ನ ಮುಖಭಂಗ ಮಾಡಿಬಿಟ್ಟನು. ಇನ್ನು ನಾನು ಪ್ರತ್ಯಕ್ಷ ಕಾಳಿದಾಸನನ್ನು ಕಂಡು ವಾದ—ವಿವಾದ ಪ್ರಸಂಗ ಹೂಡಿದಂತೂ ಕೇಳುವದೇನು? ಈಗ ದಿಗ್ದೇಶಗಳ ಪಂಡಿತರಿಂದ ನಾನು ಸೆಳೆದು ತಂದಿದ್ದ ಜಯಪತ್ರಗಳನ್ನು ಹರಿದು ಹಾಕಿ ಎತ್ತಲಾದರೂ ಪಲಾಯನ ಮಾಡುವ ಸಮಯವು ನನಗೆ ಪ್ರಾಪ್ತವಾಗುವದರಲ್ಲಿ ಸ್ವಲ್ಪವೂ ಸಹ ಸಂಶಯವಿಲ್ಲ ಆದ್ದರಿಂದ ನಾನು ನನ್ನ ಪಾಂಡಿತ್ಯದ ಹೆಮ್ಮೆಯನ್ನೂ ವಾದ_ವಿವಾದ ಬಳಿಸುವ ದುರಭಿಮಾನವನ್ನೂ ಬಿಟ್ಟುಬಿಡಬೇಕು. ನಿರಭಿಮಾನದಿಂದ ನೇರವಾಗಿ ಕಾಳಿದಾಸನ ಮನೆಗೆ ಹೋಗಬೇಕು. ಅವನೊಡನೆ

ಸ್ಥಿರವಾದ ಸ್ನೇಹದಿಂದ ವರ್ತಿಸಬೇಕು. ಇಂತಾದರೆ ಮಾತ್ರ ಈಗ ನನಗೆ ಪಂಡಿತನೆಂದು ಇದ್ದ ಗೌರವಕ್ಕೆ ಧಕ್ಕೆ ಬರಲಾರದು. ಎಂದು ವಿಚಾರಿಸಿ ಅವನು ಆಗಲೇ ಎದ್ದು ಕಾಳಿದಾಸನ ಭೆಟ್ಟಿಗೆ ಹೋಗಲನುವಾದನು. ಕಾಲ್ನಡಿಗೆಯಿಂದ ಪಟ್ಟಣದ ಬೀದಿಯಿಂದ ಹೋಗಿ ಭೋಜರಾಜನ ವಿದ್ವತ್ಸಭೆಗೆ ಹೋದನು. ರಾಜನ ಬಲಭಾಗದಲ್ಲಿಯ ಶ್ರೇಷ್ಠ ಆಸನದ ಮೇಲೆ ಕುಳಿತು ಪಂಡಿತರೊಡನೆ ಕಾವ್ಯ ಪ್ರಸಂಗ ವ್ಯಾಕರಣ ವಿಚಾರಗಳನ್ನೂ ಭೋಜರಾಜನೊಡನೆ ಪೂರ್ಣ ಮಾಡುವ ಸಮಸ್ಯೆಗಳನ್ನೂ ಈ ಗುಣಾಧಿಪನು ಸಾಮಾನ್ಯ ಸಭಿಕನಂತೆ ಒಂದೆಡೆಯಲ್ಲಿ ಕುಳಿತು ನಿರೀಕ್ಷಿಸಿ ದಂಗಾದನು. ಸಭೆಯು ಮುಕ್ತಾಯದ ನಂತರ ಹೋಗಿ ಕಾಳಿದಾಸನನ್ನು ಕಂಡನು. ಆ ಪಂಡಿತರೀರ್ವರು ಸರಾಗದಿಂದ ಸ್ನೇಹಯುಕ್ತ ಮಾತುಕತೆಗಳನ್ನಾಡಿದರು ಮಧ್ಯಾಹ್ನದ ನಂತರದ ಸಭೆಗೆ ಕಾಳಿದಾಸನು ಆ ಗುಣಾಧಿಪನನ್ನು ವಿದ್ವತ್ಸಭೆಗೆ ಕರೆದುಕೊಂಡು ಹೋದನು. ಭೋಜರಾಜನ ದರ್ಶನವನ್ನಾತನಿಗೆ ಮಾಡಿಸಿದನು.

ಪರನಾಡಿನ ಪಂಡಿತನೆಂದು ಭೋಜನು ಅವನಿಗೆ ತಕ್ಕ ಮನ್ನಣೆ ಮಾಡಿ ಬೀಳ್ಕೊಟ್ಟನು.



## (೧೪)

ಕೊಡುಗೈ ದೊರೆ ಭೋಜರಾಜನು ದಾನ ಮಾಡುವ ದಿನವೇ ಇರಲಿಲ್ಲ. ಅವನಿಂದ ಸಂಭಾವನೆ ಕೊಳ್ಳದ ಬ್ರಾಹ್ಮಣರೇ ವಿರಳ. ಇದರಿಂದಾಗಿ ಅವನ ಕೀರ್ತಿಯು ಸುತ್ತುವರಿದು ಬಿತ್ತರಿಸಿ ಬೆಳೆದಿದ್ದಿತು.

ಒಂದು ಬಾರಿ ಒಬ್ಬ ವೈದಿ ಹಾರವನು ಬಹುದಿನದ ಹಿಂದೆ ತಾನು ಕಂಡ ರಾಜನನ್ನು ಪುನಃ ನಿರೀಕ್ಷಿಸುವ ಲವಲವಿಕೆಯಿಂದ ತನ್ನ ಗ್ರಾಮದಿಂದ ಕೋಲೂರುತ್ತ ಹೊರಟು ನೇರವಾಗಿ ಧಾರಾನಗರಕ್ಕೆ ಹೊರಟನು. ರಾಜನಿಂದ ಏನಾದರೂ ಸಂಭಾವನೆ ದೊರಕಿಸುವ

ಅಪೇಕ್ಷೆಯೂ ಅವನ ಉದ್ದೇಶವಾಗಿತ್ತು. ಹಾಗೇಯೇ ಹೋಗಿ ಯಾಚಿಸುವದಕ್ಕೆ ಅವನು ಇಚ್ಛಿಸದೆ ರಾಜನ ಯಶಸ್ಸನ್ನು ಬಣ್ಣಿಸುವ ಶ್ಲೋಕವೊಂದನ್ನು ರಚಿಸಿಕೊಂಡು ಹೋಗುವ ವಿಚಾರವು ಅವನ ತಲೆಯಲ್ಲಿ ಸುಳಿಯಿತು. ಅದರಂತೆ ಅವನು ರಚನೆಗೆ ತಕ್ಕ ವಸ್ತುವನ್ನು ಶೋಧಿಸಹತ್ತಿದನು. ಮುಪ್ಪಿನ ಮಿದುಳು ಅಷ್ಟೊಂದು ಕಲ್ಪನೆ ವಿಕಾಸವಿಲ್ಲ. ಆದರೂ ಅವನ ಪ್ರಬಲೇಚ್ಛೆಯು ಹಿಂದೊಗೆಯಲೊಲ್ಲದು. ಕಡೆಗೆ ಅವನು ತನ್ನ ಸಾಹಿತ್ಯದೊಂದಿಗೆ ಹೊರಟು ಧಾರಾ ನಗರದ ಮಾರ್ಗ ಹಿಡಿದನು. ಕೆಲವು ದೂರ ನಡೆದು ಹೋದ ನಂತರ ಅವನು ತನ್ನ ಮಾರ್ಗದಲ್ಲಿ ಬಿದ್ದಿರುವ ಯಾವದೊ ಪ್ರಾಣಿಯ ಅಸ್ಥಿಯನ್ನು ಕಂಡನು. ಶುಭ್ರ ವರ್ಣದ ಆ ವಸ್ತುವನ್ನು ನೋಡಿದ ಕೂಡಲೇ ರಾಜನ ಕೀರ್ತಿಯನ್ನು ವರ್ಣಿಸುವದಕ್ಕೆ ವಸ್ತುವು ಇದಾಗಿದೆ ಎಂದು ಬಗೆದು ಆಗಲೇ ಅವನು–ರಾಜನ ಕೀರ್ತಿಯು 'ಅಸ್ತಿವತ್' ಎಂದು ಉಚ್ಚರಿಸುತ್ತ ಮುಂದೆ ಹೋದನು. ಕಿರಿದಂತರ ಹೋದ ಮೇಲೆ ಇಬ್ಬರು ಹೆಂಗಸರು ಮೊಸರು ಮಾರಲು ನೆರೆಯೂರಿಗೆ ಹೊರಟಿದ್ದರು. ಹೊತ್ತಿರುವ ಮೊಸರಿನ ಪಾತ್ರೆಯನ್ನು ನೋಡಿ ''ದದಿವತ್" ಎಂದನು ಬಳಿಕ 'ಅಸ್ತಿವತ್" "ದಧಿವತ್" ಈ ಶಬ್ದಗಳನ್ನು ಹೊಂದಿಸಿ ಕಡೆಗೆ ಪಾದಪೂರಕ ಚ, ಏವ, ಅವ್ಯಯಗಳನ್ನಿಟ್ಟು—

''ಅಸ್ತಿವತ್" ದಧಿವಚ್ಚೈವ

ಎಂಬುದಾಗಿ ಶ್ಲೋಕದ ಒಂದು ಚರಣವನ್ನು ಸಿದ್ಧಮಾಡಿಕೊಂಡನು. ಹಾಗು ಪಠಿಸುತ್ತ ಸ್ವಲ್ಪ ಮುಂದೆ ಸಾಗಲು ಎದುರಿಗೆ ಒಬ್ಬ ಕುಷ್ಟರೋಗಿಯು ಹಿಟ್ಟಿನ ಬುಟ್ಟಿಯನ್ನು ತಲೆಯ ಮೇಲಿರಿಸಿಕೊಂಡು ಬರುತ್ತಿದ್ದನು. ಅವನನ್ನು ನೋಡಿ ಬ್ರಾಹ್ಮಣನು "ಕುಷ್ಠವತ್ ಎಂಬೆರಡು ಪದಗಳನ್ನು ಸಂಗ್ರಹಿಸಿ ಕಡೆಗೆ ಅವ್ಯಯುವಗಳನ್ನಿರಿಸಿ— ಪಿಷ್ಠವತ್

ಕುಷ್ಟವತ್ ಪಿಷ್ಟವತ್ ತಥಾ

ಎಂಬುದಾಗಿ ಎರಡನೆಯ ಚರಣವನ್ನು ರಚಿಸಿದನು. ಈ ಎರಡೂ ಚರಣಗಳನ್ನು ಉಚ್ಚರಿಸುತ್ತ ಮುಂದೆ ಸಾಗಲು 'ರಾಜಾತಿ ವೈಶೋಭಾತಿ,' ಎಂಬ ಮೂರನೆಯ ಚರಣವನ್ನು ನಿರಾಯಾಸದಿಂದ ಅರಿತನು. ಆ ನಂತರ ಅವನಲ್ಲಿ ಉತ್ಸಾಹವುಕ್ಕೇರಿ ನಾಲ್ಕನೆಯ ಚರಣ ಕೃತಿಗಾಗಿ ವಿಚಾರಿಸುತ್ತ ಮುನ್ನಡೆ

ದನು. ಧಾರಾ ನಗರವು ಸಮೀಪ ಬಂದರೂ ಕೀರ್ತಿಯ ಹೊಲಿಕೆಗೆ ಇನ್ನೊಂದು ತಕ್ಕ ಶ್ವೇತ ವಸ್ತುವಿನ ಶೋಧವಾಗಲೊಲ್ಲದು. ಇದು ವರೆಗೆ ಪ್ರತಿಭೆಯಿಂದ ಹೊಂದಿಸಿದ ಮೂರೂ ಚರಣಗಳು ನಿರರ್ಥಕವಾಗುವದಲ್ಲ ! ಎಂದು ವ್ಯಥೆ ಪಡುತ್ತ ವನಗರ್ದದ ಒಂದು ಬದಿಯಲ್ಲಿ ಮೂತ್ರ ವಿಸರ್ಜನೆಗೆ ಕುಳಿತನು. ಆಗ ಸ್ವಾಭಾವಿಕವಾಗಿ ಅವನು ತನ್ನ ಗುಹ್ಯದಲ್ಲಿ ಬೆಳೆದ ಕೂದಲುಗಳನ್ನು ನಿರೀಕ್ಷಿಸಿದನು. ಓ ಹೋ! ತಕ್ಕ ಶಬ್ದ ದೊರೆಯಿತು ಎಂದು ತನ್ನಲ್ಲಿ ತಾನೇ ಉಲ್ಲಾಸಗೊಂಡನು.

"ವೃದ್ಧ ಬ್ರಾಹ್ಮಣ ಲೋಮವತ್

ಎಂಬ ನಾಲ್ಕನೆಯ ಚರಣವನ್ನು ಕೂಡಿಸಿದನು ಬಳಿಕ ನಾಲ್ಕೂ ಚರಣಗಳನ್ನು ಕ್ರಮಗೊಳಿಸಿ ಮುಂದೆ ಸಾಗವಷ್ಟರಲ್ಲಿಯೇ ಧಾರಾ ನಗರದ ದ್ವಾರವು ಬಂದಿತು.

ತಾನು ವಿಚಾರಿಸಿದ ಶ್ಲೋಕದ ಅತ್ಯುತ್ತಮತೆಯನ್ನು ಕಾಳಿದಾಸನಿಗೆ ತೋರಿಸಿ ಅವನಿಂದ ಸತ್ಕರಿಸಿಕೊಂಡು ರಾಜಸಭೆಗೆ ಹೋಗಬೇಕೆಂದು ನಿರ್ಧರಿಸಿದನು. ಅದರಂತೆ ಅವನು ವೇಗವಾಗಿ ಸಾಗಿ ಕಾಳಿದಾಸನ ಮನೆಗೆ ಹೋದನು. ಅವನನ್ನು ಕಂಡು ತಾನು ರಾಜನ ಯಶಸ್ಸನ್ನು ವರ್ಣಿಸಿದ ಶ್ಲೋಕರಚನೆ ಮಾಡಿದ ಬಗೆಯನ್ನು ಸಾದ್ಯಂತವಾಗಿ ಹೇಳಿದನು ಕಾಳಿದಾಸನು ನಗುತ್ತ–ಸ್ವಾಮೀ ! ನಿಮ್ಮ ಶ್ಲೋಕದ ಕಡೆಯ ಚರಣವು ಬೀಭತ್ಸ ದರ್ಶಕವಾಗಿದೆ. ಪಂಡಿತರ ಸಭೆಯಲ್ಲಿ ಇದನ್ನು ನೀವು ಓದಿ ಅಪಹಾಸ್ಯಕ್ಕೆ ಗುರಿಯಾಗಬೇಡಿರಿ, ಹಾಗು ರಾಜರಿಂದ ದೊರೆಯುವ ಸಂಭಾವನೆಯನ್ನೂ ಕಳೆದುಕೊಳ್ಳಬೇಡಿರಿ, ನಾನು ಸಭೆಗೆ ಬರುವಂತಿಲ್ಲ. ಹಾಗಿದ್ದರೆ ನಾನು ನಿಮ್ಮ ಶ್ಲೋಕವನ್ನು ಸರಿಯಾಗಿಸಿ ರಾಜನಿಗೆ ಬೋಧೆಯಾಗುವಂತೆ ಹೇಳುತ್ತಿದ್ದೆನು. ನೀವು ಈಗ ನಿಮ್ಮ ನಾಲ್ಕನೆಯ ಚರಣ ತೆಗೆದು ಅದರ ಬದಲು—

ಶರಚ್ಚಂದ್ರ ಮರೀಚಿವತ್"

ಈ ಚರಣವನ್ನಿಟ್ಟುಕೊಂಡು ಹೋಗಿ ರಾಜನೆದುರು ಓದಿರಿ ಎಂದು ಹೇಳಲು ಕಾಳಿದಾಸನ ವಿಚಾರವು ಅವನಿಗೆ ಯೋಗ್ಯವೆನ್ನಿಸಿತು. ಹಾಗೆಯೇ ಸಭೆಗೆ ಹೋದನು.

ಭೋಜನು ಸಭೆಯಲ್ಲಿ ವಿರಾಜಮಾನನಾಗಿರುವಾಗ ಈ ಮುದಿ ಬ್ರಾಹ್ಮಣನು ಅಲ್ಲಿಗೆ ಹೋಗಿ ರಾಜನ ವಂದನೆ ಸ್ವೀಕರಿಸಿ "ಸ್ವಸ್ತ್ಯ ಸ್ತು" ಎಂದು ಉಚ್ಚರಿಸಿದನು. ರಾಜನು ಬ್ರಾಹ್ಮಣರೇ ! ಕುಳಿತುಕೊಳ್ಳಿರಿ" ಎಂದೆನ್ನಲು ಬ್ರಾಹ್ಮಣನು "ರಾಜನ್ ! ಮುಪ್ಪಿನ ಕಾಲದಲ್ಲಿ ಒಂದು ಶ್ಲೋಕವನ್ನು ರಚಿಸಿರುವೆನು ಎಂದು ಹೇಳಿದ ಕೂಡಲೇ ರಾಜನು–ಅದಾವುದು ? ನಿಮ್ಮ ಶ್ಲೋಕವನ್ನು ನನಗೆ ಶ್ರವಣ ಮಾಡಿಸಿರಿ ಎಂದು ಹೇಳಲು ಬ್ರಾಹ್ಮಣನು—

ರಾಜಾ! ಅಸ್ಥಿವತ್ ದಧಿವತ್ ಚ್ಚೈವ |
ಕುಷ್ಮವತ್ ತಥಾ ||
ರಾಜಾತಿ ವೈಶೋಭಾತಿ |
ಶರಚ್ಚಂದ್ರ ಮರೀಚಿವತ್ ||

ಎಂದು ಉಚ್ಚರಿಸಿದನು. ರಾಜನಿಗೆ ಬಹಳೀ ಸಂತೋಷವಾಯಿತು.

ಅವನು ಆ ಬ್ರಾಹ್ಮಣನಿಗೆ ಸಂಭಾವನೆ ಕೊಡುವದಕ್ಕೆ ಕೋಶಾಧ್ಯನಿಗೆ ತಿಳಿಸಿದನು. ತತ್ಪೂರ್ವದಲ್ಲಿ ಭೋಜರಾಜನು ಕೊನೆಯ ಚರಣದ ಬಗೆಗೆ ಅನುಮಾನ ತಾಳಿ:–ಸ್ವಾಮಿೂ ! ಈ ನಿಮ್ಮ ಶ್ಲೋಕವು ಮೂಲದಲ್ಲಿ ಇದ್ದಂತೆ ತೋರುವದಿಲ್ಲ. ಸಂಸ್ಕರಣವಾದಂತೆ ತೋರುವದು. ಅದರಿಂದ ? ಎಂದು ಕೇಳಿದನು. ಸಂಭಾವನೆಯ ದ್ರವ್ಯವು ನಿಶ್ಚಿತ ಕೈಸೇರುವದೆಂಬುದಾಗಿ ತಿಳಿದಿದ್ದ ಆ ಬ್ರಾಹ್ಮಣನು ರಾಜನ ಪ್ರಶ್ನೆಗೆ ತಟ್ಟನೆ– ರಾಜನ್ ನಾನು ರಚಿಸಿದ ನಾಲ್ಕನೆಯ ಚರಣದ ಬದಲು ಕಾಳಿದಾಸನು–"ಶರಚ್ಚಂದ್ರ ಮರಿ–ಜೀವತ್ ಈ ಚರಣವನ್ನು ಸೇರಿಸಲು ಹೇಳಿದುದರಿಂದ ಹಾಗೆ ಮಾಡಿದೆನು ಎಂದು ಹೇಳಲು ರಾಜನು:– ಹಾಗಾದರೆ ನೀವು ಹಾಕಿದ ನಾಲ್ಕನೆಯ ಚರಣವನ್ನು ಸೇರಿಸಿ ಇಡೀ ಶ್ಲೋಕ ರಚನೆಯ ಬಗೆಗೆ ನೀವು ಅನುಸರಿಸಿದ ಪ್ರತಿಭೆಯು ಎಂತು ಮೂಡಿತೆಂಬುದನ್ನು ಹೇಳುವದಾಗಬೇಕು ಎಂದು ಕೇಳಲು ಬ್ರಾಹ್ಮಣನು ಕಾಳಿದಾಸನ ಮುಂದೆ ವಿವರಿಸಿದಂತೆ ಎಲ್ಲ ವಿವರಣೆ ಹೇಳಿದನು, ಅದನ್ನು ಕೇಳಿ ಸಭೆಯಲ್ಲಿ ಕೂಡಿದವರೆಲ್ಲ ಅವನಿಗೆ ಅಪಹಾಸ್ಯ ಮಾಡಹತ್ತಿದರು. ಭೋಜರಾಜನು ಮಾತ್ರ ರೋಷಿಸದೆ ನಗುತ್ತ ಸಭಿಕರನ್ನು ಕುರಿತು"– "ಈ ವೃದ್ಧನು ಹಾಸ್ಯಪ್ರವರ್ತಕನಿರುವನು ಇವನಾದರೂ ತನ್ನ ಶ್ಲೋಕ

ಧಲ್ಲಿ ಭೀಭತ್ಸ ರಸವನ್ನು ಸ್ವೀಕರಿಸಿದುದರಿಂದ ನಾವು ಉಳಿದ ರಸಗಳನ್ನು ಸ್ವೀಕರಿಸಿ ಈ ಭೀಭತ್ಸವನ್ನು ಹೀಗಳೆಯುವದೇಕೆ ?" ಎಂದು ಎಲ್ಲ ಪಂಡಿತರಿಗೆ ಹೇಳಿದನು. ಹಾಗು ಸಂಭಾವನೆ ಸಲ್ಲಿಸಿ ಆ ಬ್ರಾಹ್ಮಣನನ್ನು ಕಳಿಸಿಕೊಟ್ಟನು.

§ § ००० § §

## (೧೫)

ಜನ್ಮದರಿದ್ರನೂ ಅಶಿಕ್ಷಿತನೂ ಆಗಿರುವ ಕಲಿಂಗ ಬ್ರಾಹ್ಮಣನೊಬ್ಬನು ಭೋಜರಾಜನಿಂದ ಸಂಭಾವನೆ ಪಡೆಯುವ ಆಸೆಯಿಂದ ಧಾರಾ ನಗರಕ್ಕೆ ಬಂದನು. ಅವನು ಕಾಳಿದಾಸನ ಮನೆಗೆ ಹೋಗಿ ತನ್ನ ಪರಿಸ್ಥಿತಿಯನ್ನೆಲ್ಲ ಅವನಿಗೆ ತಿಳಿಸಿದನು. ಹಾಗು ಅವನು ಭೋಜರಾಜನಿಂದ ಸಂಭಾವನೆ ಕೊಡಿಸುವದಾಗಬೇಕು ಎಂದು ಕೇಳಿಕೊಂಡನು. ಕಾಳಿದಾಸನು ಅವನನ್ನು ಕುರಿತು......ಬ್ರಾಹ್ಮಣಾ! ಆ ವಿದ್ವಾಂಸರಿಗೆ ರಾಜನಿಂದ ಮರ್ಯಾದೆ ಹಾಗು ಸಂಭಾವನೆ ದೊರೆಯುವದು ಸಾಧ್ಯವೇ ಇಲ್ಲ. ಆದರೆ ಏನಾದರೂ ಸಿಕ್ಕಬಹುದೆಂಬ ಆಸೆಯಿಂದ ನೀನು ಇಲ್ಲಿಗೆ ಬಂದಿರುವಿ. ನಿನ್ನ ಇಚ್ಛೆ ಪೂರ್ಣವಾಗ ಬೇಕಾದರೆ ನೀನು ಒಬ್ಬ ಶಾಸ್ತ್ರಿಯ ವೇಷ ಧರಿಸಿ, ರಾಜಸಭೆಗೆ ಬಂದುಬಿಡು ರಾಜನು ನಿನಗೆ ವಂದಿಸಿ ಮರ್ಯಾದಿಸುವನು. ಆಗ ನೀನು ರಾಜಾ ಆಶೀರ್ವಾದ ಸ್ವೀಕರಿಸು' ಎಂದು ನುಡಿದು ಅವನ ಪದರಿನಲ್ಲಿ ಅಕ್ಷತೆಯನ್ನು ಹಾಕಿ ಸ್ವಸ್ಥ ಕುಳಿತುಬಿಡು. ನಂತರ ರಾಜನು ನಿನ್ನೆದುರು ಸಂಭಾವನಾ ದ್ರವ್ಯವ ನ್ನಿರಿಸುವನು. ನೀನು ಅದನ್ನು ತಕ್ಕೊಂಡು ನಿನ್ನ ಊರಿಗೆ ಹೋಗು ಎಂದು ಹೇಳಿ ಕಳಿಸಿದನು.

ಮರುದಿನ ಆ ಬ್ರಾಹ್ಮಣನು ಒಂದು ಶಾಲನ್ನು ಹೊದ್ದುಕೊಂಡು ವಿಭೂತಿ-ರುದ್ರಾಕ್ಷಿಗಳನ್ನು ಧರಿಸಿ ಸಭೆಯ ಕಡೆಗೆ ನಡೆದನು. ಹೋಗ ಹೋಗುತ್ತ ಮಾರ್ಗದಲ್ಲಿ ಅವನಿಗೆ ಕಾಳಿದಾಸನು ಹೇಳಿಕೊಟ್ಟ ಆಶೀರ್ವಾದದ ಆ ಶಬ್ದವೇ ವಿಸ್ಮೃತಿಯಾಯಿತು. ನೆನಪು ಮಾಡಿಕೊಳ್ಳುತ್ತ ರಾಜದ್ವಾರದ ಸನಿಹಕ್ಕೆ ರಾಜಾಂಗಣದಲ್ಲಿ ಹತ್ತೆಂಟು ಒಂಟೆಗಳು ನಿಂತಿದ್ದವು. ಬೀದಿಯಲ್ಲಿಯ

ಹುಡುಗರು ಅವುಗಳನ್ನು ನೋಡಿ ಉಷ್ಟ ಉಷ್ಟ ಕೂಗಾಡುತ್ತಿದ್ದವು. ಉಷ ಶಬ್ದವು ಆ ಬ್ರಾಹ್ಮಣನ ಕಿವಿಗೆ ಬಿದ್ದ ಕೂಡಲೇ ಕಾಳಿದಾಸನು ನನಗೆ ಹೇಳಿದ ಉಷರಟ ಶಬ್ದವೇ ಇದು ಎಂದು ಉಷರಟ ಶಬ್ದವನ್ನೇ ಮನಸ್ಸಿನಲ್ಲಿ ಉಚ್ಚರಿಸುತ್ತ ಸಭೆಯನ್ನು ಸೇರಿ ರಾಜನೆದುರು ಹೋದನು. ರಾಜನು ಅವನನ್ನು ಕುಳ್ಳಿರಿಸಿ ಅವನ ಮುಂದೆ ಫಲ ಮಂತ್ರಾಕ್ಷತೆಗಳನ್ನಿಟ್ಟು ಶಾಸ್ತ್ರಿಗಳಿಗೆ ನನ್ನ ವಂದನೆಗಳು ಎಂದು ಕೈಮುಗಿದು ಕುಳಿತನು. ಬಳಿಕ ಈ ಶಾಸ್ತ್ರಿಯು ಮಂತ್ರಾಕ್ಷತೆಗಳನ್ನು ಕೈಯಲ್ಲಿ ತಕ್ಕೊಂಡು ರಾಜನನ್ನು ಕುರಿತು– "ರಾಜಾ! ಉಷರಟ ಸ್ವೀಕರಿಸು ಎಂದು ಉಚ್ಚರಿಸಿದನು. ಅದನ್ನು ಕೇಳಿ ರಾಜನು ವಿಸ್ಮಿತನಾಗಿ ಕಾಳಿದಾಸನ ಕಡೆಗೆ ನೋಡಿ– ಕಾಳಿದಾಸ! ಈ ಶಾಸ್ತ್ರಿಗಳ ವಾಕ್ಯದ ಅರ್ಥವು ನನಗೆ ತಿಳಿಯದಾಗಿದೆ ಎಂದೆನ್ನಲು, ಕಾಳಿದಾಸನು— ರಾಜನ್! ಈ ಶಾಸ್ತ್ರಿಗಳು ಮಹಾನ್ ವಿದ್ವಾಂಸರೆಂದು ಕಳಿಂಗ ದೇಶದಲ್ಲಿ ಪ್ರಸಿದ್ಧಿಯುಂಟು ಇವರು ನಿಮಗೆ ಮಾಡಿದ ಆಶೀರ್ವಾದದ ಅರ್ಥ ತಿಳಿಯದಂತಾಗಿ ನೀವು ಚಕಿತಗೊಂಡಿರುವಿರಿ. ಇವರು ವರ್ಣಸೂಚಕಾರ್ಥದಿಂದ ನಿಮಗೆ ಆಶೀರ್ವಾದ ಮಾಡಿದ್ದರ ವಿವರವೆಂತಿರುವದೆಂದರೆ—

ಉಮಯಾ ಸಹಿತೋ ರುದ್ರಃ
ಷಣ್ಮುಖಸ್ಯಪಿತಃ ಶೂಲಿನ್ ||
ರಕ್ಷತು ತ್ವಾಂ ಹಿ ರಾಜೇಂದ್ರ
ಟಕಾರೋ ಘನ ಗರ್ಜನ ||

(ಅರ್ಥ— ಪಾರ್ವತೀ ಸಹಿತವಿರುವ ಷಣ್ಮುಖನ ತಂದೆಯಾದ ಶಂಕರನು ನಿನ್ನನ್ನು ರಕ್ಷಿಸಲಿ ಮತ್ತು ಮೋಡವು ಗಂಭೀರವಾಗಿ ಗರ್ಜಿಸಿ ನಿನ್ನ ರಾಷ್ಟ್ರದ ಮೇಲೆ ಮಳೆ ಸುರಿಸಲಿ ಹಾಗು ನಿನ್ನ ರಾಜ್ಯ ಸುಖವಾಗಿರಲಿ)

ರಾಜನ್! ಈ ಶಾಸ್ತ್ರಿಗಳ ಆಶೀರ್ವಾದದ ಆಶಯವು ಇಷ್ಟೊಂದು ಉದಾತ್ತವಾಗಿರುವದು. ಎಂದು ಕಾಳಿದಾಸನು ಹೇಳಲು ಭೋಜರಾಜನಿಗೆ

ಬಲು ಆನಂದ ! ಅವನು ಒಂದು ಸಾವಿರ ಹೊನ್ನು ತರಿಸಿ ಬ್ರಾಹ್ಮಣನಿಗೆ ಕೊಟ್ಟನು.

ಬ್ರಾಹ್ಮಣನು ಕಾಳಿದಾಸನ ಉಪಕಾರವನ್ನು ಸ್ಮರಿಸುತ್ತ ತನ್ನ ಊರಿಗೆ ಹೋದ.

[೧೬]

ಒಂದು ದಿನ ಭೋಜರಾಜನು ಸಭೆಗೆ ಬಂದಮೇಲೆ ನಿಯಮದಂತೆ ಪಂಡಿತರು ರಾಜದರ್ಶನಕ್ಕಾಗಿ ಬರಹತ್ತಿದರು. ಆಗ ರಾಜನು ಪ್ರತಿಯೊಬ ಪಂಡಿತರನ್ನು ಕುರಿತು—

ಗೌರೀ ಮುಖಂ ಚುಂಬತಿ ವಾಸುದೇವಃ ||

ಎಂಬ ಸಮಸ್ಯೆಯ ವಾಕ್ಯವನ್ನು ಹೇಳಹತ್ತಿದನು. ಸಭೆಯಲ್ಲಿ ಒಂಭಯ್ನೂರಾ ಒಂಭತ್ತು ಜನ ಪಂಡಿತರಿದ್ದರೂ ಯಾರೂ ಆ ಸಮಸ್ಯೆಯನ್ನು ಪೂರ್ಣ ಮಾಡಲಿಲ್ಲ ಎಲ್ಲರೂ ದಿಗಿಲು ಬಿದ್ದು ಸುಮ್ಮನೆ ಕುಳಿತರು.

ಅಷ್ಟರಲ್ಲಿಯೇ ಕಾಳಿದಾಸನು ಸಭೆಗೆ ಬಂದನು. ರಾಜನು ಅವನಿಗೂ ಎಲ್ಲ ಪಂಡಿತರಿಗೆ ಹೇಳಿದ ಸಮಸ್ಯೆಯನ್ನು ಹೇಳಿದನು. ಅದನ್ನು ಕೇಳಿದ ಕೂಡಲೇ ಕಾಳಿದಾಸನು ನಿರಾಲೋಚನೆಯಿಂದ—

ಕಾ ಲೋಕಮಾತಾ ಕಿಮುದೇಹ ಮುಖ್ಯಂ
ರತೇಃ ಕಿಮಾದೌ ಕುರುತೇ ಮನುಷಃ
ಕೋ ದೈತ್ಯ ಹಂತಾ ವದ ವೈಕ್ರಮೇರ್ಣ
ಗೌರೀ ಮುಖಂ ಚುಂಬತಿ ವಾಸುದೇವ ಃ ||

ಈ ಪ್ರಕಾರ ಅಂತರ್ಲಾಪಿಕೆಯಿಂದ ಸಮಸ್ಯೆಯನ್ನು ಪೂರ್ಣ ಮಾಡಲು ಭೋಜರಾಜನಿಗೆ ಅತೀವ ಆನಂದವಾಯಿತು. ರಾಜನು ಮರು ದಿನ ಮತ್ತೆ—

“ರಾಮಶ್ಚುಂಬತಿ ರಾವಣಸ್ಯ ವದನಂ ಸೀತಾವಿಯೋಗಾತುರ”

ಎಂಬುದಾಗಿ ಇರುವ ವಿಪರೀತ ಸಮಸ್ಯೆಯನ್ನಿಟ್ಟನು ಸಭೆಯಲ್ಲಿಯ ಪಂಡಿತರೆಲ್ಲರು ಕಾಳಿದಾಸನ ಮುಖವನ್ನೇ ನಿರೀಕ್ಷಿಸಹತ್ತಿದರು. ಕಾಳಿದಾಸನು ಅವರ ಹೃದ್ಗತವನ್ನರಿತು ಎದ್ದು ನಿಂತು—

ಕಃ ಕಾಂತಾರಮಗಾತ್ಪಿತುರ್ವಚನತಃ ಸಂಶ್ಲಿಷ್ಯ ಕಂಠಸ್ಥಲೀಂ |
ಕಾಮೀ ಕಿಂ ಕುರುತೇ ಚ ಗೃಧ್ರ ಹಠ ತಶ್ಛಿನ್ನಂ ಪ್ರರೂಢಂ
ಚ ಕಿಮ್ ||
ಕೋ ರಕ್ಷಂ ಕುಲರಾತ್ರಿರೇವ ಅಭವತ್ ಚರಿದ್ರಾತಪಂ
ದ್ವೇಷ್ಟೀ ಕೋ |
ರಾಮಶ್ಚುಂಬತಿ ರಾವಣಸ್ಯ ವದನಂ ಸೀತಾ ವಿಯೋಗಾತುರಃ ||

(ಅರ್ಥ- ತಂದೆಯ ವಚನಕ್ಕೆ ಮಾನಕೊಟ್ಟು ಸ್ತ್ರೀಸಹಿತ ಅರಣ್ಯಕ್ಕೆ ಯಾರು ಹೋದರು? ಕಾಮಾತುರನು ಸ್ತ್ರೀಯ ಕಂಠವನ್ನು ಆಲಂಗಿಸಿ ಏನು ಮಾಡಿದನು ? ಜಟಾಯುವಿನ ಆಗ್ರಹಕ್ಕೆ ರಾಮನು ಏನನ್ನು ಛೇದಿಸಿದನು ? ರಾಕ್ಷಸ ಕುಲಕ್ಕೆ ರಾತ್ರಿ ಸ್ವರೂಪರಾದರು ? ಚಂದ್ರಕಿರಣ ದ್ವೇಷಿಸುವರಾರು?

ಇವೆಲ್ಲಕ್ಕೂ ಕ್ರಮವಾಗಿ ಉತ್ತರಗಳು-ರಾಮ, ಚುಂಬತಿ ರಾವಣನಶಿರ, ಸೀತಾ ಹಾಗೂ ಸ್ತ್ರೀಯ ವಿಯೋಗದಿಂದ ಆತುರನಾದವನು.

ಈ ಪ್ರಕಾರ ಕಾಳಿದಾಸನು ಸಮಸ್ಯೆಯನ್ನು ಪೂರ್ಣ ಮಾಡಲು ಭೋಜ ರಾಜನು ಮೆಚ್ಚಿದನು. ಪಂಡಿತರೆಲ್ಲರೂ ಆನಂದ ಹೊಂದಿದರು. ಕಾಳಿದಾಸನನ್ನು ಸೇರಲಾರದ ಕೆಲ ಜನ ಹೊಟ್ಟೆಯುರುಕರು ಮೌನದಿಂದ ತಲೆತಗ್ಗಿಸಿ ಕುಳಿತರು.

## (೧೭)

ಒಂದು ದಿನ ರಾಜಪತ್ನಿಯು ತನ್ನ ಮಹಲಿನಲ್ಲಿ ದಾಸಿಯೊಡನೆ ಏನೋ ಸಂಗತಿಯನ್ನು ಮಾತಾಡುತ್ತ ಕುಳಿತಿದ್ದಳು. ಆಗ ರಾಜನು ಅಕಸ್ಮಾತ್ತಾಗಿ ಅಲ್ಲಿಗೆ ಹೋಗಲು ರಾಣಿಯು—"ಯಾ ಮೂರ್ಖೋ" ಎಂದು ಉಚ್ಚರಿಸಿ

ದಳು. ಹಾಗು ನಂತರ ಎದ್ದು ನಿಂತು ಪತಿಯನ್ನು ಮರ್ಯಾದಿಸಿದಳು. ಆಗ ರಾಜನು ತನ್ನಲ್ಲಿ–

"ನನ್ನಿಂದ ಮೂರ್ಖತನದ ಯಾವ ಕೃತ್ಯಗಳೂ ಒದಗಿಲ್ಲ. ಇದಲ್ಲದೆ ರಾಣಿಯು ನನಗೆ ಎಂದೂ ಅದಶಬ್ದಗಳನ್ನು ಆಡಿದವಳಲ್ಲ. ಹೀಗಿದ್ದೂ ಈ ದಿವಸ ನನ್ನ ಕೈಯಿಂದ ಮೂರ್ಖತನದ ಕೆಲಸವೇನಾಗಿದೆ ? ಇವೇ ವಿಚಾರ ಗಳಲ್ಲಿ ಅವನು ಒಂದೇ ಸವನೇ ತಲೆ ಕೆಡಿಸಿಕೊಳ್ಳಹತ್ತಿದನು. ಮರುದಿನ ಅವನು ಎಲ್ಲ ಪಂಡಿತರಿಗಿಂತಲೂ ಮೊದಲು ಸಭೆಯಲ್ಲಿ ಕುಳಿತುಕೊಂಡನು. ಮತ್ತು ತನ್ನ ದರ್ಶನಕ್ಕೆಬಂದ ಪ್ರತಿಯೊಬ್ಬ ಪಂಡಿತನಿಗೆ 'ಯಾಮೂರ್ಖಾ' ಎಂದು ಉಚ್ಚರಿಸಹತ್ತಿದನು. ಆಗ ಆ ಪಂಡಿತರೆಲ್ಲರು ಆಶ್ಚರ್ಯಚಕಿತರಾಗಿ ತಮ್ಮ ತಮ್ಮ ಸ್ಥಾನಗಳತ್ತ ಕೆಳಮೋರೆ ಮಾಡಿಕೊಂಡು ಕುಳಿತರು. ಆ ಬಳಿಕ ಸ್ವಲ್ಪ ಹೊತ್ತಿನ ತರುವಾಯ ಕಾಳಿದಾಸನು ಸಭೆಗೆ ಬಂದನು. ರಾಜನು ಅವನಿಗಾದರೂ "ಯಾ ಮೂರ್ಖಾ" ಎಂದು ಉಚ್ಚರಿಸಿ ಸ್ವಾಗತಿಸಿದನು.

ರಾಜನು ಮುಖದಿಂದ ಹೊರಬಂದ "ಯಾ ಮೂರ್ಖಾ" ಶಬ್ದಗ ಳನ್ನು ಕೇಳಿ ಕಾಳಿದಾಸನು–"ರಾಜನ್ !

|| ಖಾದನ್ನ ಗಚ್ಛಾಮಿ ಹಸನ್ನ ಜಲ್ಪೆ
ಗತನ್ನ ಶೋಚಾಮಿ ಕೃತನ್ನ ಮನ್ಯೇ ||
ದ್ವಾಭ್ಯಾಂ ತೃತೀಯೋ ನ ಭವಾಮಿ ರಾಜನ್
ಕಿಂ ಕಾರಣಂ ಭೋಜ ಭವಾಮಿ ಮೂರ್ಖ : ||

(ಅರ್ಥ—ಭೋಜರಾಜನೆ ಹಾದಿಯಲ್ಲಿ ತಿನ್ನುತ್ತ ನಡೆಯುವವನು, ನಗುನಗುತ್ತ ಮಾತಾಡುತ್ತ ನಡೆಯುವವನು, ಕಳೆದು ಹೋದ ಮಾತಿಗೆ ಶೋಕಿಸುವವನು, ಅದರಂತೆ ಆತ್ಮಸ್ತುತಿ ಮಾಡಿಕೊಳ್ಳುವವನು ಇಲ್ಲವೆ ಇಬ್ಬರು ಏಕಾಂತದಲ್ಲಿ ಗುಪ್ತ ನುಡಿಯಾಡುತ್ತಿರುವಲ್ಲಿ ಹೋಗುವವನು, ಈ ಐಯ್ವರು ಪ್ರಸಂಗಗಳಲ್ಲಿ ಯಾವ ಪ್ರಸಂಗವೂ ನನಗೆ ಅನ್ವಯಿಸುವ ದಿಲ್ಲ. ಅಂದ ಮೇಲೆ ನೀನು ನನಗೆ ಮೂರ್ಖನೆಂದು ಸಂಭೋಧಿಸುವದೇಕೆ?)

ಕಾಳಿದಾಸನು ನುಡಿದ ಭಾಷಣ ಕೇಳಿ ರಾಜನು ರಾಣಿ—ದಾಸಿ ಇವರಿಬ್ಬರು ಗುಪ್ತವಾಗಿ ಮಾತನಾಡುತ್ತಿರುವಾಗ ತಾನು ಹೋದ ತನ್ನ ಅಪರಾಧವನ್ನು ಸಭೆಯಲ್ಲಿ ನಿವೇದನೆಗೊಳಿಸಿದನು. ಮತ್ತು ಅವನಲ್ಲಿ ತನ್ನ ರಾಣಿಯ ಒಗೆಗೆ ಉದ್ಭೂತನಾಗಿದ್ದ ಕ್ರೋಧವನ್ನು ಶಾಂತಗೊಳಿಸಿಕೊಂಡನು.

—OO—

## (೧೮)

ವಿದ್ಯಾನಗರದ ಗುಣಾಢ್ಯನೆಂಬ ವಿದ್ವಾಂಸನು ಕಾಳಿದಾಸನ ವಿದ್ವತ್ವತೆಯನ್ನು ಪರೀಕ್ಷಿಸಬೇಕು. ಹಾಗು ಪ್ರಸಂಗವೊದಗಿದಾಗ ರಾಜ ಸಭೆಯಲ್ಲಿ ವಾದ ವಿವಾದದಲ್ಲಿ ಸೋಲಿಸಿ ಅವನ ಶ್ರೇಷ್ಠವಾದ ಸ್ಥಾನವನ್ನು ರಾಜನಿಂದ ತಾನು ಪಡೆಯಬೇಕು. ಈ ಉದ್ದೇಶದಿಂದ ಅವನು ಧಾರಾನಗರಕ್ಕೆ ಬಂದು ಅಲ್ಲಿಯೇ ಇರಹತ್ತಿದನು ಎಷ್ಟೋ ತಿಳಿದುಕೊಂಡನು. ಇನ್ನು ಇವನನ್ನು ಗೆದೆಯುವ ಸಾಮರ್ಥ್ಯ ತನ್ನಲ್ಲಿ ಇಲ್ಲದುದಕ್ಕೆ ಅವನು ಉದಾಸೀನತೆ ತಾಳಿದನು! ಆದರೂ ಕಾಳಿದಾಸನನ್ನು ಪ್ರತ್ಯಕ್ಷ ಕಂಡು ತನ್ನ ನಗರಕ್ಕೆ ಹೋಗಬೇಕೆಂಬುದಾಗಿ ನಿಶ್ಚಯಿಸಿದನು. ಮರುದಿನ ಅವನು ಕಾಳಿದಾಸನ ಮನೆಗೆ ಹೋದನು.

ಗುಣಾಢ್ಯನು ತನ್ನ ದರ್ಶನಕ್ಕೆ ಬರುವನೆಂಬುದನ್ನೂ ಪ್ರಸಂಗ ಬಂದರೆ ಅವನು ವಾದ ಬೆಳೆಸುವನೆಂಬುದನ್ನೂ ಈ ಮೊದಲೇ ಕಾಳಿದಾಸನು ಅನ್ಯರ ಮುಖದಿಂದ ಅರಿತಿದ್ದನು. ಅದಕ್ಕಾಗಿ ಅವನು ಗುಣಾಢ್ಯನು ತನ್ನ ಮನೆಯ ಅಂಗಳಕ್ಕೆ ಬರುವದರೊಳಗೇ ಸೀರೆಯನ್ನುಟ್ಟುಕೊಂಡು ದಾಸಿಯಾಗಿ ಅಂಗಳ ಕಸಗೂಡಿಸುತ್ತಿದ್ದನು.

ಗುಣಾಢ್ಯನು ಕಾಳಿದಾಸನ ಅಂಗಳಕ್ಕೆ ಬಂದನು, ಕಸಗೂಡಿಸುವವಳನ್ನು ನೋಡಿ:— "ಎಲೆ! ದಾಸಿ! ಕವಿವರ ಕಾಳಿದಾಸರು ಮನೆಯಲ್ಲಿ ಇರುವರೇ?" ಎಂದು ಕೇಳಲು ದಾಸಿಯು ಹಾಗೆಯೇ ಅಂಗಳ ಗೇರೆ ಮಾಡುತ್ತ ಆ ಗುಣಾಢ್ಯನನ್ನು ಕುರಿತು—

|| ನ ಖಲೀನಖಲಿನಯಾ ಭೃಶಂ ||
ನಮಯಂತುನ್ನವಂ ಹಯಮ್ ||
ನಿರಗಾದೂಗಾರಿರಂ ಹಸ್ನಾ
ವುರಗುರುತ್ಮತಗೋ ಪುರಾದ್ಬಹಿಃ ||

(ಅರ್ಥ— ಕಾಳಿದಾಸರು ಗರುಡವೇಗದಂತೆ ಗತಿಯುಳ್ಳ ಹೊಸ ಕುದುರೆಗೆ ರತ್ನಜತ ಕಡಿವಾಣವನ್ನು ತೊರಿಕೊಂಡು ಅದನ್ನು ಆರೋಹಿಸಿ ನಡಿಗೆ ಹಿಡಿಸುತ್ತ ರತ್ನಕಾಂತಿಯಂತೆ ಪ್ರಕಾಶಿಸುವ ಮನೆಗಳಿರುವ ಓಣಿಯಲ್ಲಿ ಹಾದು ಇದೀಗ ಹೊರಟು ಪಟ್ಟಣದ ಹೊರಗೆ ಹೋದರು.

ದಾಸಿಯ ಮುಖದಿಂದ ಹೊರಟ ಉತ್ತರ ರೂಪದ ಭಾಷಣವನ್ನು ಕೇಳಿ ಗುಣಾಢ್ಯನು ತನ್ನಲ್ಲಿ— "ಈ ದಾಸಿಯಲ್ಲಿಯೇ ಇಷ್ಟೊಂದು ಚತುರತೆ ಹಾಗು ವಿದ್ವತ್ತೆಯಿರುವದೆಂದ ಮೇಲೆ ಕಾಳಿದಾಸನಲ್ಲಿ ಎಷ್ಟಿರಬೇಕು" ಎಂದು ವಿಚಾರಿಸಿಕೊಂಡನು. ಆದರೂ ಇನ್ನೂ ಈ ದಾಸಿಯನ್ನು ಪರೀಕ್ಷಿಸುವ ಲವಲವಿಕೆಯಿಂದ ಆ ಗುಣಾಢ್ಯನು— ಎಲೌ ದಾಸಿಯೇ! ನೀನು ಕಾಳಿದಾಸನ ಸೇವಿಕೆಯಾಗಿದ್ದರೂ ನಿನ್ನ ಮೇಲೆ ಒಂದೂ ಆಭರಣ ತೋರುವದಿಲ್ಲ! ಎಂದು ಕೇಳಲು ಆ ಕಪಟ ದಾಸಿಯು—

|| ಹಸ್ತಸ್ಯ ಭೂಷಣಂ ದಾನಂ,
ಸತ್ಯಂ ಕಂಠಸ್ಯ ಭೂಷಣಂ
ಶ್ರೋತ್ರಸ್ಯ ಭೂಷಣಂ ಶಾಸ್ತ್ರಂ,
ಭೂಷಣೈಃ ಕಿಂ ಪ್ರಯೋಜನಮ್ ? ||

ಎಂಬುದಾಗಿ ದಾಸಿಯು ಆ ಗುಣಾಢ್ಯನಿಗೆ ಉತ್ತರ ಹೇಳಿದಳು. ಆದರೂ ಮತ್ತೆ ಅವನು— "ಎಲೈ ದಾಸಿ! ನಿನ್ನ ಆರಾಧ್ಯದೈವತೆವಾವುದು?" ಎಂದು ಕೇಳಲು ದಾಸಿಯು—

|| ಏ ಹಂ ಗೋ ವಾ ನಂ ಯೇಷಾಂ
ತ್ರಿ ಕ ಚಾ ಯತ್ರ ಭೂಷಣಂ ||
ಸಾ ಲ ಪಾ ವಾಮಭಾಗೇ ಚ
ತೇ ದೇವಾಃ ಶರಣಂ ಮಮ ||

(ಅರ್ಥ— ವಿ— ಗರುಡ. ಹ — ಹಂಸ. ಗೋ— ವೃಷಭ. ಈ ಮೂರುಗಳ ವಾಹನಗಳುಳ್ಳವರೂ. ತ್ರಿ— ತ್ರಿಶೂಲ, ಕ — ಕಮಲ, ಚಾ— ಚಾಪ ಈ ಮೂರರಿಂದ ವಿಶೋಭಿತರಾದವರೂ, ಅದರಂತೆ ಸಾ— ಸಾವಿತ್ರಿ ಲ— ಲಕ್ಷ್ಮಿ ಪಾ— ಪಾರ್ವತಿ ಈ ಮೂವರು ಒಬ್ಬೊಬ್ಬರು ವಾಮ ಭಾಗದಲ್ಲಿ ಶೋಭಿಸು ತ್ತಿರುವವರೂ ಆಗಿರುವ ದೇವರುಗಳ ಉಪಾಸನೆಯನ್ನು ನಾನು ಮಾಡು ತ್ತಿರುವೆನು.

ಎಂದು ದಾಸಿಯು ಹೇಳಿದ ಕೂಡಲೇ ಗುಣಾಢ್ಯನು ತನ್ನಲ್ಲಿ ಯಕಶ್ಚಿತ ದಾಸಿಯೇ ಹೀಗಿರುವಳೆಂದ ಮೇಲೆ ಆ ಕಾಳಿದಾಸನ ವಿದ್ವತ್ತೆ ಹೇಗಿರಬಹುದು? ಇದನ್ನು ತಿಳಿಯಲು ಹವಣಿಸುವದು ನನ್ನ ಮೂರ್ಖತನವು" ಎಂದು ಅರಿತು ಕೊಂಡು ಹಾಗೇ ತನ್ನ ಊರಿಗೆ ಹೋದನು.

## (೧೯)

ಕಾಳಿದಾಸನ ಕೀರ್ತಿಯು ದಿಗ್ದೇಶಗಳಲ್ಲಿ ಹರಡಿತು. ಆದರೆ ನಿತ್ಯವೂ ಅವನ ಸಂಪರ್ಕದಲ್ಲಿರುತ್ತಿದ್ದ ಕೆಲ ಪಂಡಿತರ ಹೊಟ್ಟೆಯಲ್ಲಿ ಅವನ ಬಗೆಗೆ ದಟ್ಟವಾದ ಉರಿಯೇ ಏಳುತ್ತಿತ್ತು. ಹಲವು ಪ್ರಯತ್ನ ಮಾಡಿ ಅವನ ಪ್ರತಿಷ್ಠೆ ಕುಂದಿಸಲು ಮಾಡಿದ ಆ ಕುಹಕರ ಪ್ರಯತ್ನಗಳು ನಿರರ್ಥಕಗೊಂಡವು. ಕೊನೆಗೆ ಅವರು ಆ ಕಾಳಿದಾಸನ ಮೇಲೆ ಜಾತಿ ಭ್ರಷ್ಟತೆಯ ಆರೋಪವನ್ನು ಹೊರಿಸುವ ಆಲೋಚನೆ ಮಾಡಿದರು. ಒಂದು ದಿನ ಆ ಕುಹಕರು ನಾಲ್ಕಾರು ಜನರು ರಾಜನನ್ನು ಏಕಾಂತದಲ್ಲಿ ಕಂಡು—

ರಾಜನ್! ಕಾಳಿದಾಸನು ಒಬ್ಬ ವೇಶ್ಯೆಯ ಗೃಹಕ್ಕೆ ನಿತ್ಯವೂ ಹೋಗಿ ಬರಹತ್ತಿರುವನು. ಅಲ್ಲಿಯೇ ಅವನು ತಿನ್ನಬಾರದನ್ನು ತಿನ್ನುವನು. ಕುಡಿಯ ಬಾರದನ್ನು ಕುಡಿಯುವನು. ಇತ್ಯಾದಿಯಾಗಿ ಇನ್ನೂ ಏನೇನೋ ಹೇಳಿ ದರು. ಅದನ್ನು ಕೇಳಿ ರಾಜನು— "ಬ್ರಾಹ್ಮಣನಾದ ಆ ವಿದ್ವಾಂಸನು ಮಾರ್ಗ ಬಿಟ್ಟಂತಾಯಿತು. ಒಳ್ಳೇದು ನೀವು ಅವನ ಭ್ರಷ್ಟತೆಯನ್ನು ನನಗೆ ಪ್ರತೀತ ಮಾಡಿಕೊಟ್ಟರೆ ಅವನಿಗೆ ಯೋಗ್ಯ ಶಾಸನಮಾಡುವೆನು ಆದರೆ ಇದು ಅಸತ್ಯವಾದರೆ?" ಎಂದು ಕೇಳಲು ಅವರು— "ನಾವೆಲ್ಲರೂ ಪ್ರತಿ

ಶಾಸನಕ್ಕೆ ಒಪ್ಪಿಕೊಳ್ಳುವೆವು ಎಂದರು. 'ಹಾಗಾದರೆ ಹೋಗಿರಿ' ಎಂದು ಭೋಜರಾಜನು ಅವನನ್ನು ಅಪ್ಪಣೆಕೊಟ್ಟು ಕಳಿಸಿದನು. ಮರುದಿನದಿಂದ ಆ ಕುಹಕರು ಕಾಳಿದಾಸನ ವೃತ್ತಿಯನ್ನು ಬಹು ದಕ್ಷತೆಯಿಂದ ನಿರೀಕ್ಷಿಸ ಹತ್ತಿದರು. ಕಾಳಿದಾಸನ ಕಿವಿಗೆ ಈ ಸುದ್ದಿಯು ತಾಗದಿರಲಿಲ್ಲ.

ಒಂದು ದಿನ ಕಾಳಿದಾಸನು ನದಿಯ ಸ್ನಾನಕ್ಕೆ ಹೋಗಿರುವನು ಕುಹಕರೂ ಕೂಡ ಸ್ನಾನದ ನೆವದಿಂದ ಕಾಳಿದಾಸನ ಸನಿಹದಲ್ಲಿಯೇ ಸ್ನಾನಮಾಡ ಹತ್ತಿದರು. ಕಾಳಿದಾಸನು ಅವರನ್ನು ಕಂಡರೂ ಕಾಣದವನಂತೆ ನಟಿಸಿ ವೇಲ್ಗಡೆಯ ಮಡುವಿಗೆ ಹೋದನು. ಅಲ್ಲಿ ದೊಡ್ಡದೊಂದು ಮೀನವನ್ನು ಹಿಡಿದು ಗಡಬಡಿಯಿಂದ ತನ್ನ ಪಂಜೆಯಲ್ಲಿ ಸುತ್ತಿದನು. ಅತ್ತಿತ್ತ ನೋಡದೆ ಅದನ್ನು ಬಗಲದಲ್ಲಿಟ್ಟುಕೊಂಡು ಮನೆಗೆ ಹೊರಟನು. ಕುಹಕರು ಕಾಳಿದಾಸನ ಈ ಕೃತಿಯನ್ನು ನಿರೀಕ್ಷಿಸಿದರು. ಅವರಲ್ಲಿ ಒಬ್ಬಿಬ್ಬರು ಅವನಿಗಿಂತ ಮೊದಲೇ ಹೋಗಿ ಭೋಜರಾಜರಾನಿಗೆ_ "ರಾಜಾ! ಕಾಳಿದಾಸನು ನದಿಯ ಮೀನ ಹಿಡಕೊಂಡು ಬರುತ್ತಿರುವನು ಅವನನ್ನು ನಿಮಗೆ ತೋರಿಸುವೆವು" ಎಂದು ಹೇಳಿದರು. ಕೂಡಲೇ ಭೋಜರಾಜನು ಮರುಮಾತನಾಡದೆ ಅವರೊಡನೆ ನದಿಯ ದಾರಿಗೆ ಬಂದನು. ನದಿಯಿಂದ ಬಗಲಲ್ಲಿ ಪಂಜೆಯ ಸುರುಳಿಯನ್ನಿಟ್ಟುಕೊಂಡು ಬರುತ್ತಿರುವ ಕಾಳಿದಾಸನ ಎದುರು ಹೋಗಿ ಅವನನ್ನು ತಡೆದು ನಿಲ್ಲಿಸಿದನು ಅಷ್ಟರಲ್ಲಿ ಎಲ್ಲ ಕುಹಕರ ತಂಡೂ, ಹೊಳೆಗೆ ಹೋಗಿ ಬರುವ ಜನರ ಗುಂಪೂ ಅಲ್ಲಿಗೆ ಬಂದು ಹಾಗು ಕಾಳಿರದಾಸರನ್ನು ಸುತ್ತುವರಿದು ನಿಂತಿತು. ಆಗ ಭೋಜರಾಜನು ಕಾಳಿದಾಸನ ಮುಂದುಗಡೆಯಲ್ಲಿ ನಿಂತು—

ರಾಜ— 'ಕಾಳಿದಾಸ' ಕಕ್ಷೇಃ ಕಿಂ ?'

ಕಾಳಿದಾಸ— 'ರಾಜನ್! "ಮಮಪುಸ್ತಕಮ್"

ರಾಜ—_ "ಕಿಮುದಕಮ್ ?

ಕಾಳಿದಾಸ— "ಕಾವ್ಯಾರ್ಥ ಸಾರೋದಕಂ"

ರಾಜ— "ಗಂಧಃ ಕಿಂ ?"

ಕಾಳಿದಾಸ— "ನನುರಾಮ_-ರಾವಣಮಹಾ ಸಂಗ್ರಾಮ ರಂಗೋದವ್ಭಂ

| | |
|---|---|
| ರಾಜ— | ಪುಚ್ಛ ಕಿಂ ? |
| ಕಾಳಿದಾಸ— | ಕಿಂ ಪುಸ್ತಕಂ ಹೇಕವೇಃ ? |
| ರಾಜ— | ರಾಜನ್! ಭೂಮಿಜನ್ಯೈಶ್ಚ ಸೇವಿತುಮಿದಂ ರಾಮಾಯಣಂ ಪುಸ್ತಕಮ್ |

ಈ ಪ್ರಕಾರ ಅವರಲ್ಲಿ ಪ್ರಶ್ನೋತ್ತರಗಳಾದ ನಂತರ ಭೋಜರಾಜನಿಗೆ ಅಲ್ಲಿ ನೆರೆದವರೆಲ್ಲರು "ಕಾಳಿದಾಸನು ಸುಳ್ಳು ಹೇಳುವನು" ಎಂದು ಹೇಳುತಿರುವಾಗಲೇ ರಾಜನು ಅವನ ಬಗಲಲ್ಲಿಯ ಪಂಜೆಯ ಸುರುಳಿಯನ್ನು ಕಸಿದುಕೊಂಡು ಅದನ್ನು ಬಿಚ್ಚಿ ನೋಡಿದನು. ಅದರಲ್ಲಿ ಶ್ರೀ ವಾಲ್ಮೀಕ ಋಷಿಪ್ರಣೀತ ರಾಮಾಯಣ ಗ್ರಂಥವು ಎಲ್ಲರೂ ನೋಡಿದರು, ಬೆರಳು ಕಚ್ಚಿದರು. ಕುಹಕರು ಕೆಳಮೋರೆ ಮಾಡಿಕೊಂಡು ಹಿಂದೆ ಸರಿದು ನಿಂತರು. ಭೋಜರಾಜನು ಕುಲುಕುಲು ನಗುತ್ತ--

"ಕಕ್ಷೇಃ ಕಿಂ ಮಮ ಪುಸ್ತಕಂ ಕಿಮುದಂ ಕಾವ್ಯಾರ್ಥ ಸಾರೋದಕಂ<br>
ಗಂಥ ಕಿಂ ನನುರಾಮ_ರಾವಣ ಮಹಾ ಸಂಗ್ರಾಮ ರಂಗೋತ್ಸವಂ ||<br>
ಪುಚ್ಛಂ ಕಿಂ ಖುಲು ತಾಲ ಪತ್ರ ಲಿಖಿತಂ ಪುಸ್ತಕಂ ಹೇಕವೇ||<br>
ರಾಜನ್! ಭೂಮಿಜನ್ಯೈಶ್ಚ ಸೇವಿತಮಿದು ರಾಮಾಯಣಂ ಪುಸ್ತಕಂ ||

ಈ ಪ್ರಶ್ನೋತ್ತರಗಳನ್ನು ವೃತ್ತಛಂದಸ್ಸಿನಿಂದ ಉಚ್ಚರಿಸಿ ಕಾಳಿದಾಸನೊಡನೆ ಹಾಗೇ ಹಿಂದಿರುಗಿದನು.

ಮರುದಿನ ಸಭೆಯಲ್ಲಿ ರಾಜನು ಕುಹಕರಿಗೆಲ್ಲ ದೇಶತ್ಯಾಗ ಮಾಡಲು ಅಪ್ಪಣೆ ಮಾಡಿದನು. ಅವರೆಲ್ಲ ಗತಜೀವಿಗಳಾಗಿ ಕಾಳಿದಾಸನ ಮುಖ ನಿರೀಕ್ಷಿಸಹತ್ತಿದರು. ಆಗ ಕಾಳಿದಾಸನು ರಾಜನನ್ನು ಕುರಿತು_ರಾಜನ್! ಮಾಮರವು ತನ್ನನ್ನು ಬೆಳೆಸಿದವನಿಗೂ ಛೇದಿಸುವವನಿಗೂ ಸಮನಾಗಿಯೇ ನೆರಳು ಕೊಡುವದು" ಎಂದು ಹೇಳಿದನು. ರಾಜನು ಕಾಳಿದಾಸನ ಭಾವ ಗರ್ಭಿತ ವಾಕ್ಯ ಕೇಳಿ ಆ ಕುಹಕರಿಗೆಲ್ಲ ಕ್ಷಮೆ ಮಾಡಿ ಕಾಳಿದಾಸನಲ್ಲಿಯ ಅಜಾತ ಶತ್ರುತ್ವ ಗುಣಗನ್ನು ಪ್ರಕಾಶವಾಗಿ ಪ್ರಶಂಸಿದನು.

——————

## (೨೦)

ಭೋಜರಾಜ-ಕಾಳಿದಾಸರು ಹರಟುತ್ತ ಕುಳಿತ ಕಾಲದಲ್ಲಿ ರಾಜನು— "ಕಾಳಿದಾಸ! ಈ ನಮ್ಮ ನಗರದಲ್ಲಿ ಮಿಗಿಲಾದ ಪತಿವ್ರತೆಯಾವಳೊಬ್ಬಳಿದ್ದರೆ ನಾನು ಅವಳ ಸತ್ವ ಪರೀಕ್ಷಿಸುವೆನು. ಅಂಥ ಸತಿಯು ಯಾವಳಿರುವಳು? ಎಂದು ಕೇಳಲು ಕಾಳಿದಾಸನು— "ರಾಜಾ! ಉಂಟು. ದೇವದತ್ತನೆಂಬ ಬಡ ಹಾರುವನ ಪತ್ನಿಯಿರುವಳು" ಎಂದು ಹೇಳಿ ಆಕೆಯಲ್ಲಿಯ ಸದ್ಗುಣಗಳನ್ನು ಬಣ್ಣಿಸಿದನು. ಒಂದು ವೇಳೆ ನೀನು ಅವಳ ದರ್ಶನ ಪಡೆಯಲು ಇಚ್ಛಿಸಿದರೆ ಸಾಧ್ಯವಿಲ್ಲ" ಎಂದನು. ಆಗ ಭೋಜರಾಜನು ಆ ಸಾಧ್ವಿಯ ಪತಿಯನ್ನು ಕರೆಯಿಸಿ ಅವನಿಗೆ ಎಷ್ಟೋ ದ್ರವ್ಯ ಕೊಡ ಹೋದನು. ಅವನಾದರೂ ತನ್ನ ಸತಿಯಂತೆ ಗುಣಸಂಪನ್ನನೇ ಇದ್ದನು. ರಾಜನು ಕೊಡಬಂದ ದ್ರವ್ಯವನ್ನು ಮುಟ್ಟಲಿಲ್ಲ. ರಾಜನು ಈ ದ್ರವ್ಯದಿಂದ ನಿಮ್ಮ ದಾರಿದ್ರ್ಯ ಹಿಂಗಿಸಿಕೊಳ್ಳಬೇಕು ಎಂದು ಆಗ್ರಹಪಡಿಸಿದರೂ ದೇವದತ್ತನು— ರಾಜಾ! ಶಿಲೋಂಛ ವೃತ್ತಿಯಿಂದ ಜೀವಿಸುವ ನನಗೆ ಇದರ ಅವಶ್ಯಕತೆಯಿಲ್ಲ ಎಂದು ಹೇಳಿ ರಾಜನಿಂದ ಅಪ್ಪಣೆ ಪಡೆದು ಹಿಂದಿರುಗಿ ಹೋದನು. ಭೋಜರಾಜನು ಬೆರಗಾಗಿ— ಕಾಳಿದಾಸ! ಬ್ರಾಹ್ಮಣನು ದ್ರವ್ಯ ನಿರಾಕರಿಸಿದನಲ್ಲ? ಎಂದು ಕೇಳಲು— ರಾಜಾ! ಸ್ವಾಧೀನಪತಿಯ ಗುಣಗಳು ಅವನ ಸತಿಯಲ್ಲಿ ಉದ್ಭೂತವಾಗಿರುವದೆಂಬುದನ್ನು ಇಂದು ತಿಳಿದುಕೊಳ್ಳಿರಿ. ಈ ದೇವದತ್ತನಂತೆಯೂ ಇವನ ಆ ಸಾಧ್ವಿಯಲ್ಲಿ ನಿರಾಶೆಯಿರುವದು. ಧನದಾಶೆ ತೋರಿಸಿ ಆಕೆಯ ವ್ರತಭಂಗಮಾಡುವದು ಯಾವನಿಗೂ ಸಾಧ್ಯವಿಲ್ಲ? ಎಂದನು. ಆಗ ಭೋಜರಾಜನು— ಕಾಳಿದಾಸ ಹೀಗಿದ್ದ ಮೇಲೆ ಆ ಸಾಧ್ವಿಯ ಮುಖದರ್ಶನ ನನಗೆಂದಾಗುವದು ಎಂದು ಕೇಳಲು ಕಾಳಿದಾಸನು— ರಾಜಾ ಇದಂತೂ ಸಾಧ್ಯವಿಲ್ಲ. ಮದುವೆಯಾಗಿ ೧೨ ವರ್ಷ ಗತಿಸಿದರೂ ಅನ್ಯ ಪುರುಷನನ್ನು ಆಕೆ ಕಂಡಿರುವದಿಲ್ಲ, ನಿಜವಾಗಿ ಏಕಪತ್ನಿವ್ರತಸ್ಥನಾಗಿದ್ದವನ ದೃಷ್ಟಿಗೆ ಆಕೆ ಬೀಳ

ಬಹುದು ನಿನ್ನಲ್ಲಿ ಈ ಆತ್ಮ ವಿಶ್ವಾಸವಿದ್ದರೆ ಆಕೆಯ ಪತಿಯು ಊರಲ್ಲಿ ಇಲ್ಲದ ಸಮಯದಲ್ಲಿ ವೇಷಾಧಾರಿ ಸನ್ಯಾಸಿಯಾಗಿ ಹೋಗಿ ಆಕೆಯ ನಿಜ ಧರ್ಮವನ್ನು ಕಂಡುಕೊಳ್ಳಬಹುದು ಎಂದು ಹೇಳಿದನು. ಕಾಳಿದಾಸನ ಈ ವಿಚಾರವು ಭೋಜರಾಜನಿಗೆ ಸರಿಯೆನ್ನಿಸಿತು. ಅಂದಿನಿಂದ ಅವನು ಆ ಸಮಯ ನಿರೀಕ್ಷಿಸಹತ್ತಿದನು.

ಮುಂದೆ ನಾಲ್ಕೆಂಟು ದಿನಗಳಾದ ಮೇಲೆ ದೇವದತ್ತನು ಮಹಾಭಿಷೇಕಕ್ಕೆಂದು ಕಾಶಿಗೆ ಹೋದನು. ಈಗ ಮನೆಯಲ್ಲಿ ಆತನ ಸತಿಯು ಒಬ್ಬಳೇ ಇರುವಳೆಂಬುದನ್ನು ಭೋಜರಾಜನು ತನ್ನ ಸೇವಕರಿಂದ ಅರಿತನು, ಕೂಡಲೇ ಅವನು ಸನ್ಯಾಸಿಯ ವೇಷ ಧರಿಸಿ ಅತಿಥಿ ಕಾಲವನ್ನು ನಿರೀಕ್ಷಿಸಿ ದೇವದತ್ತನ ಗೃಹದ್ವಾರಕ್ಕೆ ಹೋದನು. ಅಲ್ಲಿ ನಿಂತು ಅವನು— 'ಭವತೀ ಭಿಕ್ಷಾಂದೇಹಿ' ಎಂದು ದೀರ್ಘ ಧ್ವನಿಯಿಂದ ಉಚ್ಚರಿಸಿ ನಿಂತನು. ದೇವದತ್ತನ ಸತಿಯು ಅಡುಗೆ ಮಾಡುವದರಲ್ಲಿ ಉದ್ಯುಕ್ತಳಾಗಿದ್ದಳು. ಅತಿಥಿಯ ಆಗಮನವಾಗಿದೆ ! ಎಂದು ತಿಳಿದು ಅವಳು ಕುಳಿತಲ್ಲಿಂದಲೇ ಆ ಅತಿಥಿಯನ್ನು ಕುರಿತು— ಅತಿಥಿದೇವ ಅಡಿಗೆಗೆ ಇನ್ನೂ ಒಂದೆರಡು ಗಳಿಗೆಯ ಅವಕಾಶವಿದೆ. ಅದುವರೆಗೆ ಎದುರಿನ ದೇವಾಲಯದಲ್ಲಿ ವಿಶ್ರಮಿಸಿರಿ ಎಂದು ಹೇಳಲು ಆ ವೇಷಧಾರಿ ಸನ್ಯಾಸಿಯು— "ನಾನು ಅಲ್ಲಿ ಹೋಗಲಾರೆ, ಇಲ್ಲಿಯೇ ಒಳಕ್ಕೆ ಕುಳಿತುಕೊಳ್ಳುವೆನು" ಎಂದನು. ಆದಕ್ಕೆ ಅವಳು [illegible] ಒಂದು ಆಸನವನ್ನು ಹೊರಕ್ಕೆ ಸರಿಸಿ ಕುಳಿತುಕೊಳ್ಳಬಹುದು ಎಂದಳು. ಬಳಿಕ ಆ ಸನ್ಯಾಸಿಯು ಆಕೆಯ ಕಡೆಗೆ ತನ್ನ ದೃಷ್ಟಿಯು ತಾಗುವಂಥ ಸ್ಥಳದಲ್ಲಿ ಕುಳಿತನು. ಅವಳ ಮುಖವು ಒಲೆಯ ಕಡೆಗೆ ಇದ್ದುದರಿಂದ ಅವಳ ಹಿಂಬದಿಯು ಮಾತ್ರ ಅವನಿಗೆ ಕಾಣಿಸಹತ್ತಿತು.

ಅತಿಥಿಯ ಪರಾಮರಿಕೆಗೆ ಅವಳು ನಾಲ್ಕೆಂಟು ಮಾವಿನ ಹಣ್ಣುಗಳನ್ನು ತಕ್ಕೊಂಡು ಸೀಕರಣೆ ಮಾಡುವದಕ್ಕೆ ಉದ್ಯುಕ್ತಳಾದಳು. ಪೂರ್ಣ ಹಣ್ಣಾಗಿದ್ದರೂ ಅವಳು ಆ ಹಣ್ಣನ್ನು ಹಿಸುಕಿ ಮೃದುವಾಗಿಸಿ ಒಂದು ಪಾತ್ರೆಯಲ್ಲಿ ಹಿಂಡುವದಕ್ಕೆ ಪ್ರಾರಂಭಿಸಿದಳು. ಎಷ್ಟು ಪ್ರಯತ್ನದಿಂದ

ಅವಳು ಹಿಂಡಿದರೂ ಆ ಹಣ್ಣಿನಿಂದ ಒಂದು ಹನಿ ರಸ ಸಹ ಬೀಳಲಿಲ್ಲ ಎಲ್ಲ ಹಣ್ಣುಗಳ ಸ್ಥಿತಿಯೂ ಹೀಗೇ ಆಯಿತು. ಕಡೆಗೆ ಅವಳು ಆ ಮಾವಿನ ಹಣ್ಣು ಗಳನ್ನು ಉದ್ದೇಶಿಸಿ—

ರೇ ರೇ ರಸಾಲ ಫಲ ಕಿಂ ಸ್ವ ರಸೇನ ಮ್ಯಾಂಚ
ಸ್ಯಾಬಾಲ ಭಾವ ಮಪಿ ಶುದ್ಧ ಪತಿವ್ರತಾ ಯೈ ||
ಸತ್ಯಂಮಯಾ ಪರನರೋ ನ ಕದಾಪಿ ದೃಷ್ಟಃ
ಕಿಂ ಭೋಜರಾಜ ನೃಪತಿಃ ಪರದಾರ ಲುಬ್ಧಃ

(ಅರ್ಥ— "ರಸಭರಿತ ಮಾವಿನಹಣ್ಣೇ! ನಿನ್ನಿಂದ ರಸವು ಅದೇಕೆ ಹೊರಡಲೊಲ್ಲದು? ನಾನು ಚಿಕ್ಕಂದಿನಿಂದ ಇಂದಿನವರೆಗೂ ಸತೀ ಧರ್ಮದಿಂದ ಅಂತರಿಸಿರುವದಿಲ್ಲ. ಹಾಗು ಮನಸ್ಸಿನಲ್ಲಿ ಕೂಡ ಎಣಿಸಿಲ್ಲ. ಆದರೆ ಈಗೇನು? ಈ ಧಾರಾನಗರದ ಭೋಜರಾಜ ಸತ್ಯವಾದಿಯಾಗಿದ್ದೂ ಪರಸ್ತ್ರೀಯರಲ್ಲಿ ಲುಬ್ಧನಾದನೇ?)

ಈ ಪ್ರಕಾರ ಆ ಬ್ರಾಹ್ಮಣತಿಯು ಮಾವಿನ ಹಣ್ಣನ್ನು ಉದ್ದೇಶಿಸಿ ನುಡಿದಳು. ರಾಜನು ತಾನು ಕುಳಿತಲ್ಲಿಂದಲೇ ಆಕೆಯ ವೃತ್ತಿಯನ್ನು ನಿರೀಕ್ಷಿಸುತ್ತಿದ್ದನು. ಆಕೆ ಹಣ್ಣನ್ನು ಕುರಿತು ಶ್ಲೋಕವನ್ನು ಉಚ್ಚರಿಸಿದ ಕೂಡಲೇ ಆ ಸನ್ಯಾಸಿಯು ಚಕಿತದಿಂದ ಕೇಳುತ್ತ ಆಕೆಯ ಕೃತಿಯನ್ನು ನಿರೀಕ್ಷಿಸುತ್ತ ಕುಳಿತಿದ್ದನು. ಶ್ಲೋಕದಿಂದ ಅವಳು ಮಾವಿನ ಹಣ್ಣಿನ ಬಗೆಯನ್ನು ವರ್ಣಿಸಿದ ಕೂಡಲೇ ಆ ಹಣ್ಣುಗಳಿಂದ ರಸವು ಹೊರಡಹತ್ತಿತು. ಅದನ್ನು ನೋಡಿ ರಾಜನು ಬೆದರಿದನು. ಇಷ್ಟೇ ಅಲ್ಲ "ಈಕೆಯು ನಿಜವಾದ ಸಾಧ್ವಿಯು ಇವಳೆದುರು ನಾನು ಹೋದರೆ ಈಕೆಯ ಶಾಪಕ್ಕೆ ಗುರಿಯಾಗ ಬೇಕಾಗುವದು. ಈ ಭಯದಿಂದಲೇ ಅವನು ಆ ಸತಿಯ ಹಿಂಬದಿಯಲ್ಲಿಯೇ ಹೋಗಿ ಐದು ಪ್ರದಕ್ಷಿಣೆ ಹಾಕಿದನು. ಮತ್ತು ನಮ್ರತೆಯಿಂದ ಕ್ಷಮೆ ಬೇಡಿದನು. ಕೂಡಲೇ ಅವನು ತನ್ನ ವೇಷ ದಂಡ-ಕಮಂಡಲುಗಳನ್ನು ಅಲ್ಲಿಯೇ ಚೆಲ್ಲಿ ಓಡಹತ್ತಿದನು. ಆಗ ಸತಿಯು ಹಿಂತಿರುಗಿ ನೋಡಿದಳು. ಶೀವ್ರವೇ ಎದ್ದು ಹೋಗಿ ರಾಜನನ್ನು ಅಡ್ಡಗಟ್ಟಿ ನಿಂತು ಅವನನ್ನು ಕುರಿತು "ಪ್ರಭು ಭೋಜರಾಜ! ನಾವು ನಿಮ್ಮ ಪ್ರಜೆಗಳೂ ಅಹುದು. ಮಕ್ಕಳೂ

ಅಹುದು, ನೀನು ಸತ್ಯವಾದಿಯಾಗಿದ್ದು ಪರಸ್ತ್ರೀಯರನ್ನು ಮಾತೃವತ್ತಾಗಿ ಭಾವಿಸುತ್ತಿರುವಿ. ಆದ್ದರಿಂದ ಇಂದಿಗೆ ಹನ್ನೆರಡು ವರುಷಗಳು ನನ್ನ ಮದುವೆಯಾದಂದಿನಿಂದ ಗತಿಸಿದರೂ ಇಂದು ಮಾತ್ರ ಪರಪುರುಷನಾದ ನಿನ್ನ ದೃಷ್ಟಿಗೆ ನನ್ನ ಮುಖವನ್ನು ತೋರಿಸಿದೆನು. ಇದರಿಂದ ನನ್ನ ಪಾತಿವ್ರತ್ಯ ಧರ್ಮ ಭಂಗವಾಯಿತೆಂದು ಗ್ರಹಿಸಬೇಡ. ನೀನು ಒಂದು ವೇಳೆ ಸತ್ಯವಾದಿಯುಳ್ಳವನಾಗಿ ಪರಸ್ತ್ರೀ ಲಂಪಟನಾಗಿರುವದಿಲ್ಲ. ಆದರೂ ಕಾಪಟ್ಯಭಾವದಿಂದ ನನ್ನ ಧರ್ಮ ಪರೀಕ್ಷಿಸುವದಕ್ಕೆ ಬಂದಿದ್ದರಿಂದ ಮಾವಿನ ಹಣ್ಣು ಎಷ್ಟು ಹಿಂಡಿದರೂ ರಸವನ್ನು ಸುರಿಸಲಿಲ್ಲ. ಆದರೆ ನಿನ್ನ ಅಪರಾಧದ ಬಗೆಗೆ ನಾನು ಭಿಕ್ಷೆ ಬೇಡಿದ ಕೂಡಲೇ ಆ ಹಣ್ಣುಗಳಿಂದ ರಸವು ಸುರಿಯುತ್ತಿತು ಎಂದಳು.

ಬಳಿಕ ಭೋಜರಾಜನು ತನ್ನ ಎಲ್ಲ ತಪ್ಪಿಗಾಗಿ ಆ ಸಾಧ್ವಿಯಿಂದ ಕ್ಷಮೆ ಬೇಡಿ ಆಕೆಯ ಆಜ್ಞೆ ಪಡೆದು ತನ್ನ ಮನೆಗೆ ಹಿಂದಿರುಗಿ ಹೋದನು.

§ ●● §

## (೨೧)

ಭೋಜರಾಜನ ಆಸ್ಥಾನದಲ್ಲಿ ಐದು ನೂರು ಜನ ಶ್ರೇಷ್ಠ ಪಂಡಿತರಿಗೆ ಆಶ್ರಯವಿದ್ದಿತು. ಅವರಲ್ಲಿ ವರರುಚಿ, ಬಾಣ, ಮಯೂರ, ರೇಫಣ, ಶಾನೇಂದ್ರ ಮುಖ ಹರಿಶಂಕರ, ಕಳಂಗ, ಕರ್ಪೂರ ವಿನಾಯಕ ಮುಂತಾದವರೆಲ್ಲರು ಪ್ರಾಮುಖ್ಯರು ಇವರೆಲ್ಲರು ರಾಜ್ಯಸಭೆಯಲ್ಲಿ ಸತತವೂ ಅಲಂಕೃತರಾಗಿರುತ್ತಿದ್ದರು.

ಹೀಗಿರಲು ಒಬ್ಬ ದ್ವಾರಪಾಲಕನು ರಾಜನನ್ನು ಅಭಿವಂದಿಸಿ—"ದೇವ ದ್ವಾರದಲ್ಲಿ ಶಂಕರ ಕವಿ ಎಂಬ ವಿದ್ವಾಂಸನು ತಮ್ಮ ದರ್ಶನೋತ್ಸುಕನಾಗಿ ನಿಂತಿರುವನು" ಎಂದು ಶ್ರುತಮಾಡಿದನು. ಕೂಡಲೇ ಭೋಜರಾಜನು ಆ ಕವಿಯನ್ನು ಒಳಕ್ಕೆ ಕರೆಯಿಸಿಕೊಂಡನು. ಆ ವಿದ್ವಾಂಸನಿಗೆ ರಾಜನು ವಿಶ್ರಮಿಸಲು ಸೂಚಿಸಿದ ನಂತರ—

"ರಾಜನ್ ಅಭ್ಯುದಯೋಸ್ತು" ಎಂದು ಆಶೀರ್ವಚನವನ್ನುಚ್ಚರಿಸಿದನು. ತರುವಾಯು—

(ಅರ್ಥ–ರಾಜಾ ನಿನಗೆ ಹೆಚ್ಚಳವಾಗಲಿ)

ರಾಜನು– "ಶಂಕರ ಕವೇ ಕಿಂ ಪತ್ರಿಕಾಯಾಮಿದಂ"

(ಅರ್ಥ–'ಶಂಕರ ಕವಿಯೇ ! ಇದಾವ ಪತ್ರಿಕೆಯು ?)

ಕವಿ– "ಪದ್ಯಂ"

ರಾಜ–"ಕಸ್ಯ"

ಅರ್ಥ– ಯಾವುದರ ಬಗೆಗೆ ?

ಕವಿ– ತವೈವ ಭೋಜನೃಪತೇ

(ಅರ್ಥ–ಭೋಜರಾಜನೇ ನಿನ್ನ ಸಂಬಂಧವಾಗಿ)

ರಾಜ–'ತತ್ ಪಠ್ಯತಾಂ'

(ಅರ್ಥ– ಅದನ್ನು ಓದು)

ಕವಿ–ಪಠ್ಯತೇ

ಅರ್ಥ– ಓದುತ್ತೇನೆ)

ಏತಪಾಮರವಿಂದ ಸುಂದರ ದೃಷ್ಟಾಂ ದೃಕ್ಚಾಮರಾಂದೋಲನಾ—
ದುದ್ವೇಲ್ಲದ್ಭುಜವಲ್ಲಿ ಕಂಕಣ ಝಣತ್ಕಾರಃ ಕ್ಷಣಂ ವಾರ್ಯತಾಮ್ ||೧||

(ಅರ್ಥ– ಈ ಸುಂದರ ಪದ್ಮಾಕ್ಷಿಯರು ಚವರಿಯನ್ನು ಬೀಸುತ್ತಿರುವದರಿಂದ ಬಳ್ಳಿಯಂತೆ ಬಳಕುತ್ತಿರುವ ಅವರ ಕೈಗಳಲ್ಲಿರುವ ಕಂಕಣಗಳನ್ನು ಸಪ್ಪಳವು ಅದನ್ನು ಕ್ಷಣ ಹೊತ್ತು ತಡೆದು ನಿಲ್ಲಿಸಿತು.

ಯಥಾ ಯಥಾ ಭೋಜ ಯಶೋ ವಿವರ್ಧತೇ
ಸಿತಾಂ ತ್ರಿಲೋಕಿಪುನ ಕರ್ತಮುದ್ಯತಮ್ ||
ತಥಾ ತಥಾ ಮೇ ಹೃದಯಂ ವಿದೂಯತೇ
ಪ್ರಿಯಾಲ ಕಾಲೀ ಧವಲತ್ವಶಂಕಯಾ ||೨|| ಎಂದು ಉಚ್ಚರಿಸಿದನು.

ಭೋಜರಾಜನ ಧವಲ ಕೀರ್ತಿಯು ಬೆಳೆಬೆಳೆದು ಮೂರೂ ಲೋಕಗಳನ್ನು ಅದು ಶುಭ್ರಗೊಳಿಸುವದರಲ್ಲಿ ಉದ್ಯುಕ್ತವಾಗಿರುವ ತನ್ನ ಸ್ತ್ರೀಯಳ

ಶಿರೋರುಹಗಳು ಅದೆಲ್ಲಿ ಬೆಳ್ಳಗಾಗುವವೋ ಎಂಬ ವಿಚಾರವು ನನ್ನ ಹೃದಯವನ್ನು ಪೀಡಿಸುತ್ತಿರುವದು.

ಆಗ ಭೋಜರಾಜನು ಆ ಶಂಕರ ಕವಿಗೆ ೧೨ ಲಕ್ಷ ವರಹಗಳನ್ನು ಕೊಟ್ಟು ಮರ್ಯಾದಿಸಿದನು. ಇದು ಆ ಸಭೆಯ ವಿದ್ವಾಂಸರಿಗೆಲ್ಲ ಸರಿಬಾರದಾಯಿತು. ಎಲ್ಲರೂ ಖಿನ್ನವದನರಾದರು ಅಷ್ಟರಲ್ಲಿಯೇ ರಾಜನು ಬೇರೊಂದು ಕಾರ್ಯದ ನಿಮಿತ್ತ ಅರಮನೆಗೆ ಹೋದನು.

ನಂತರ ರಾಜನಿಲ್ಲದ ಆ ಸಭೆಯಲ್ಲಿಯ ಪಂಡಿತರೆಲ್ಲರು ಶಂಕರ ಕವಿಯನ್ನು ಮರ್ಯಾದಿಸಿದ ರಾಜನನ್ನೂ ಆ ಕವಿಯನ್ನೂ ಮನ ಬಂದಂತೆ ತೆಗಳಹತ್ತಿದರು ಅಷ್ಟರಲ್ಲಿಯೇ ಆ ಸಭೆಗೆ ನೂತನ ವಿದ್ವಾಂಸನೊಬ್ಬನು ಬಂದು ಅವಮಾನ ಶಿಖಿಯಿಂದ ಕುದಿಯುತ್ತ ಕುಳಿತಿದ್ದ ಆ ಪಂಡಿತರನ್ನು ಕುರಿತು—

"ವಿದ್ವನ್ಮಣಿಗಳೇ! ನಿಮಗೆಲ್ಲರಿಗೂ ನನ್ನ ವಂದನೆಗಳು ಭೋಜನೃಪಾಲನೆಲ್ಲಿ?" ಎಂದು ಕೇಳಿದನು. ಅದಕ್ಕೆ ಅವರು ಆ ಅಪರಿಚಿತನ ಮುಖಮುದ್ರೆಯಿಂದ ದಂಗಾಗಿ "ರಾಜನು ಇದೀಗಲೆ ಅರಮನೆಗೆ ಹೋಗಿರುವರು" ಎಂದು ಹೇಳಿ ಅವನನ್ನು ತಮ್ಮ ಮಂಡಲದಲ್ಲಿ ಮರ್ಯಾದೆಯಿಂದ ಕುಳ್ಳಿರಿಸಿಕೊಂಡರು. ಅವನೊಡನೆ ಕುಶಲ ಬಗೆಯಿಂದ ಮಾತುಕತೆಗಳನ್ನಾಡಿದರು. ಅವರ ಆ ಸಂಭಾಷಣದಲ್ಲಿ "ರಾಜನು ಶಂಕರ ಕವಿಯನ್ನು ಮರ್ಯಾದಿಸಿದುದಕ್ಕೆ ಆ ವಿದ್ವಾಂಸರೆಲ್ಲರು ರೊಚ್ಚಿಗೆದ್ದುದರ ಭಾವವನ್ನರಿತನು. ಆಗ ನೂತನ ವಿದ್ವಾಂಸನು ಅವರೆಲ್ಲರನ್ನು ಕುರಿತು:—"ವಿದ್ವನ್ಮಣಿಗಳೇ! ರಾಜನು ಶಂಕರ ಕವಿಯನ್ನು ಹನ್ನೆರಡು ಲಕ್ಷ ವರಹಗಳನ್ನಿತ್ತು ಮನ್ನಿಸಿದುದಕ್ಕೆ ಸಂತಾಪಯುಕ್ತರಾಗಿರುವಿರಿ. ಇದರಿಂದ ನೀವು ರಾಜನ ಮನೋಭಿಪ್ರಾಯವನ್ನು ಸರಿಯಾಗಿ ಗ್ರಹಿಸಲಿಲ್ಲೆಂಬುದನ್ನು ನಾನು ನಿಮಗೆ ಹೇಳಲಾರೆನು. ಇದರ ಇಂಗಿತವೇನೆಂದರೆ—"ರಾಜನು ಪ್ರದೋಷ ಕಾಲದ ಶಂಕರನ ಪೂಜೆಯ ಸಮಯಕ್ಕೆ ಅಕಸ್ಮಾತ್ತಾಗಿ ಬಂದಿದ್ದ ಶಂಕರ ಕವಿಯಲ್ಲಿಯೇ ಅವನು ತನ್ನಿಷ್ಟ ದೇವತೆಯ ಭಾವನೆಯಿಂದ ಒಂದು ಲಕ್ಷ ವರಹಗಳನ್ನು ಶಂಕರನೆಂದು ಆ ಕವಿಗೆ ಅರ್ಪಿಸಿದನು. ಉಳಿದ ಹನ್ನೊಂದು ಲಕ್ಷ ವರಹಗಳನ್ನು ಹನ್ನೊಂದು ರುದ್ರರಿಗೆ

ಒಂನೊಂದು ಲಕ್ಷ ವರಹದಂತೆ ಅರ್ಪಿಸಿದನು. ರಾಜನ ಮನೋಭಿಪ್ರಾಯವು ಇಷ್ಟೇ ಇರಲಿಕ್ಕೆ ಸಾಕು" ಎಂದು ಕೇಳಲು ರಾಜನ ಮೇಲೆ ಉರಿದೆದ್ದು ಶಪಿಸುತ್ತಿದ್ದ ಆ ಪಂಡಿತರೆಲ್ಲರ ರೋಷಿತ ವೃತ್ತಿಯು ಬದಲಾಯಿತು. ಹಾಗು ಅವರಿಗೆಲ್ಲ ಈ ನೂತನ ವಿದ್ವಾಂಸನ ಹೇಳಿಕೆಯು ಸಯುಕ್ತಿಕವೂ ಚಮತ್ಕಾರಯುಕ್ತವಾದುದೂ ಎನ್ನಿಸಿತು. ಆಗ ಅವರೆಲ್ಲರು ಈ ವಿದ್ವಾಸನನ್ನು ಮನ್ನಿಸುತ್ತಿರುವಾಗಲೇ ಭೋಜರಾಜನು ಅರಮನೆಯಿಂದ ಬಂದನು. ಸಿಂಹಾಸನವನ್ನಲಂಕರಿಸಿದನು ಬಳಿಕ ಪಂಡಿತರೆಲ್ಲರು ರಾಜನೆದುರು ನೂತನ ವಿದ್ವಾಂಸನನ್ನು ಕರೆದೊಯ್ದರು ಅವನನ್ನು ದೃಷ್ಟಿಸಿದ ಕೂಡಲೇ ರಾಜನಲ್ಲಿ –"ಇವನು ನಿಜವಾಗಿಯೂ ಪ್ರದೋಷ ಸಮಯಕ್ಕೆ ಪ್ರಾಪ್ತವಿಸಿದ ಪರಮೇಶನು" ಎಂಬ ಭಾವನೆ ಹುಟ್ಟಿತು. ಕೂಡಲೇ ಅವನು ತನ್ನ ಸಿಂಹಾಸನದಿಂದಿಳಿದು ಆ ವಿದ್ವಾಂಸನೆದುರು ಬಂದನು ವಂದಿಸಿದನು. ಹಾಗು ತನ್ನ ಕರಕಮಲದಿಂದ ಆ ವಿದ್ವಾಂಸನ ಕೈಯನ್ನು ಹಿಡಿದುಕೊಂಡು ಅರಮನೆಗೆ ಕರೆತಂದನು ಸೌಧವನ್ನೇರಿ ಕುಳಿತ ನಂತರ ಅವರಿಬ್ಬರಲ್ಲಿ ಮಾತುಕತೆಗಾರಂಭವಾಯಿತು. ವಿದ್ವಾಂಸನ ಸ್ವಸ್ತಿವಾಚನದ ತರುವಾಯ ಭೋಜರಾಜನು–"ವಿಪ್ರವರ್ಯ! ನಿನ್ನ ಹೆಸರಿನಲ್ಲಿಯ ಸಿರಿಯುಕ್ತ ಅಕ್ಷರಗಳಾವವು ? ಅದಾವ ದೇಶದ ಸುಜನರು ನಿನ್ನ ವಿರಹದಿಂದ ಬಳಲುವರು?" ಎಂದು ಕೇಳಿದ ಕೂಡಲೇ ಆ ವಿದ್ವಾಂಸನು ರಾಜನ ಅಂಗೈಯನ್ನು ತನ್ನೆಡೆಗೆ ಸೆಳೆದುಕೊಂಡು ಅದರ ಮೇಲೆ,

ಕಾಳಿದಾಸ

ಎಂಬುದಾಗಿ ನಾಲ್ಕು ಅಕ್ಷರಗಳನ್ನು ಕ್ರಮಗೊಳಿಸಿ ಬರೆದನು ಭೋಜರಾಜನು "ಕಾಳಿದಾಸ" ಎಂದು ಓದಿ ಹರ್ಷಿತನಾದನು.

/// ❧ ///

ಆ ಮೇಲೆ ಕೆಲಹೊತ್ತಿನ ವರೆಗೂ ಅವರಿಬ್ಬರೂ ಆ ಸೌಧದ ಮೇಲೆಯೇ ಕುಳ್ಳಿರಲು ಸಂಧ್ಯಾ ಸಮಯವು ಪ್ರಾಪ್ತವಾಯಿತು. ಭೋಜರಾಜನು ಕಾಳಿದಾಸನನ್ನು ಕುರಿತು—"ಮಿತ್ರಾ ಸದ್ಯದಲ್ಲಿ ಉಂಟಾಗಿರುವ ಸಂಧ್ಯೆಯು ವರ್ಣನೆಯನ್ನು ನಿನ್ನ ಕಾವ್ಯವಾಣಿಯಿಂದ ಶ್ರವಣ ಮಾಡುವ ಲವಲವಿಕೆಯಾಗಿದೆ" ಎಂದು ನುಡಿದ ಕೂಡಲೇ ಕಾಳಿದಾಸನು—

ವ್ಯಸನಿನ ಇವ ವಿದ್ಯಾ ಕ್ಷೀಯತೇ ಪಂಕಜ ಶ್ರೀ—
ರ್ಗುಣಿನ ಇವ ವಿದೇಶೇ ದೈನ್ಯಮಾಯಾಂತಿ ಭೃಗಾಃ |
ಕುನ್ನಪತಿರಿವ ಲೋಕಂ ಪೀಡಯತ್ಯಂಧಕಾರೋ
ಧನಮಿದ ಕೃಪಣಸ್ಯ ವ್ಯರ್ಥ ತಾಮೇತಿ ಚಕ್ಷುಂ ||

(ಅರ್ಥ— ವ್ಯಸನಿಯಾದವನ ವಿದ್ಯೆಯಂತೆ ಕಮಲಗಳ ಸೊಬಗು ಕ್ಷೀಣವಾಗಹತ್ತಿದೆ. ಪರದೇಶಕ್ಕೆ ಗಮನಿಸಿದ ವಿದ್ವಾಂಸನಂತೆ ಭ್ರಮರಗಳು ದೈನ್ಯಾವಸ್ಥೆಯನ್ನು ಹೊಂದಿರುವವು. ದುಷ್ಟನಾದ ರಾಜನಂತೆ ಕತ್ತಲೆಯು ಜಗತ್ತಿಗೆ ದುಃಖ ಕೊಡುತ್ತಿರುವದು ಜಿಪುಣ ಮಾನವನ ಧನದಂತೆ ನಯನಗಳು ನಿರರ್ಥಕವಾಗಹತ್ತಿರುವವು.)

ಕವಿಯು ಮತ್ತೆ ರಾಜನನ್ನು ಹೊಗಳಿದನು.

"ಉಪಚಾರಃ ಕರ್ತವ್ಯೋ
ಯಾವದುತ್ಪನ್ನ ಸೌಹೃದಾಃ ಪುರುಷಾಃ |
ಉತ್ಪನ್ನ ಸೌಹೃದಾನಾಂ
ಉಪಚಾರಃ ಕೈತವಂಭವತಿ ||"

(ಅರ್ಥ— ಮಿತ್ರತ್ವವು ಉಂಟಾಗುವ ವರೆಗೆ ಉಪಚಾರ ಮಾಡಬೇಕಾಗುವದು. ಆ ಮಿತ್ರತ್ವವು ಒದಗಿದ ಮೇಲೆ ಉಪಚರಿಸುವದು ವಿನೋದವಾದಂತಾ[illegible])

"ದತ್ತ್ವಾ ತೇವ ಕವಿಭ್ಯಃ ಪೃಥ್ವೀ ಸಕಲಾಪಿ ಕನಕ ಸಪೂರ್ಣಾ ।
ದಿವ್ಯಾಂ ಸುಕಾವ್ಯರಚನಾಂ ಕ್ರಮ ಕವೀನಾ ಚ ಯೋ ವಿಜಾನಾತಿ॥
ಸುಕವೇಃ ಶಬ್ದಸೌಭಾಗ್ಯಂ ಸತ್ಕವಿರ್ವೇತ್ತಿ ನಾಪರಃ ।
ವಂಧ್ಯಾ ನ ಹಿ ವಿಜನಾತಿ ಪರಾಂ ದೌಹೃರ್ದ ಸಂಪದವ್ ॥"

ಕವಿಯ ದಿವ್ಯ ಕಾವ್ಯ ರಚನೆಯನ್ನೂ ಆ ಕವಿಯ ಶರಗತಿಯನ್ನೂ ಅರಿತವನು ಆ ಕವಿಗೆ ಸುವರ್ಣ ಪರಿಪೂರ್ಣವಾದ ಸಮಸ್ತ ಜಗತ್ತನ್ನು ಸಹ ಕೊಡುವನು.

ಒಳ್ಳೇ ಕವಿಯ ಶಬ್ದ ಸೌಭಾಗ್ಯವು ಬೇರೊಬ್ಬ ಸತ್ಕವಿಗೇ ತಿಳಿಯುವದು. ಇನ್ನಾರಿಗೂ ಅದು ತಿಳಿಯಲಾರದು. ಬಂಜೆಯು ಬಸಿರಾದ ಹೆಂಗಸಿಗೆ ಉಂಟಾಗುವ ಬಯಕೆಗಳನ್ನು ಎಂದೂ ತಿಳಿದುಕೊಳ್ಳಲಾರಳು.

ಕವಿಯ ಈ ವಾಣಿಯನ್ನು ಕೇಳಿ ಭೋಜರಾಜನು ಸಂತುಷ್ಟನಾದನು. ಅಂದಿನಿಂದಲೇ ಮುಂದೆ ಅವರೀರ್ವರ ಅನುಪಮ ಪ್ರೀತಿಯು ಉದ್ಭೂತವಾಗಿ ಕ್ರಮದಿಂದ ಹೆಚ್ಚಾಗಹತ್ತಿತು.

## (೨೩)

ಇಂತಿರಲು ಮುಂದೆ ಕೆಲ ದಿನಗಳ ಮೇಲೆ ಕಾಳಿದಾಸನು ವೇಷ್ಯಾಲಂಪಟನಾಗಿರುವನೆಂಬ ವಾರ್ತೆಯು ಹೊರ ಹೊರಟು ಭೋಜರಾಜನ ಶ್ರವಣ ಪುಟಕ್ಕೆ ತಾಗಿತು. ಇನ್ನುಳಿದ ಆಸ್ಥಾನ ವಿದ್ವಾಂಸರು ಕಾಳಿದಾಸನನ್ನು ಹೇಯದೃಷ್ಟಿಯಿಂದ ನಿರೀಕ್ಷಿಸಹತ್ತಿದರು. ಯಾರೂ ಅವನನ್ನು ಸ್ಪರ್ಶ ಮಾಡದಾದರು.

ಒಂದು ದಿನ ಸಭೆಗೂಡಿದಾಗ ಭೋಜರಾಜನು ಕಾಳಿದಾಸನನ್ನು ನೋಡಿ ತನ್ನ ಮನಸ್ಸಿನಲ್ಲಿ—

"ವಿಥಮಸ್ಯ ಪ್ರಾಜ್ಯಸ್ಯಾಪಿ ಸ್ಮರಪೀಮಾದಂಃ"

(ಅರ್ಥ–ಹೆ ವಿಧ್ವಂಸನನ್ನು ಆಸೇಕೆ ಹಿಡಿಸಿದನು ?)

ಈ ಪ್ರಕಾರ ವಿಚಾರ ಮಾಡಹತ್ತಿದನು. ಕಾಳಿದಾಸನು ರಾಜನ ಇಂಗಿತವನ್ನರಿತು—

“ಜೇತೋ ಭ್ರುವಶ್ಚಾಪ ಲತಾಪ್ರಸಂಗೇ
ಕಾವಾ ಕಥಾ ಮಾನುಷ ಲೋಕ ಭಾವಾಮ್ ||
ಯುದ್ಧಾಹಚಾಲಸ್ಯ ಪುರಾಂ ವಿಜೇತು–
ಸ್ತಥಾ ವಿಷಂ ಪೌರುಷಮರ್ದಮಾಸೀತ್ ||”

(ಅರ್ಥ–“ಚಿತ್ತವು ಚಂಚಲತೆ ಹೊಂದಿದ ಪ್ರಸಂಗದಲ್ಲಿ ಕಾಮನನ್ನು ದಗ್ಧಗೊಳಿಸಿದ, ಹಾಗು ತ್ರಿಪುರಾಸುರನನ್ನು ಗೆದ್ದು ಜಯಶಾಲಿಯಾದ ಶಿವನೂ ಸಹ ಅರ್ಧಪುರುಷಾರ್ಥದಿಂದ ಇದ್ದನು. ಅರ್ಥಾತ್ ಕಾಮನನ್ನು ಸುಟ್ಟು ಭಸ್ಮ ಮಾಡಿದ ನಂತರವೂ ಅವನಲ್ಲಿ ಕಾಮತೃಪ್ತಿಯಾಯಿತು ಅಂದ ಮೇಲೆ ಮಾನವ ಲೋಕದಲ್ಲಿ ಇರುವ ಮನುಷ್ಯನ ಚಿತ್ತದ ಪಾಡೇನು)

ಈ ಪ್ರಕಾರ ನುಡಿಯಲು ಭೋಜರಾಜನು ಆ ಕವಿ ಕಾಳಿದಾಸನ ಪ್ರತಿ ಅಕ್ಷರಕ್ಕೂ ಒಂದೊಂದು ಲಕ್ಷ ವರಹ ನೀಡಿ ಮನ್ನಿಸಿದನು.

ತದ ನಂತರ ಕಾಳಿದಾಸನು ಭೋಜರಾಜನನ್ನು ಹೊಗಳಿದನು. ಎಂತೆಂದರೆ—

“ನೀರಕ್ಷೀರೇ ಗೃಹಿತ್ವಾ ನಿಖಿಲ ಖಗತತಿಯಾರ್ತಿ ನಾಬಿಜನ್ಮಾ
ಚಕ್ರಂ ಧತ್ವಾಚತುಂ ಸರ್ವಾನಟತಿ ಜಲನಿನಿಧೀಶ್ಚಕ್ರಪಾಣಿರ್ಮುಕುಂದಃ
ಸರ್ವಾನುತ್ತುಂಗ ಶೈಲಾನ್ ದಹತಿ ಪಶುಪತಿಃ ಫಾಲನೇತ್ರೇಣಪಶ್ಯನ್
ವ್ಯಾಪಾ ತ್ವತ್ಕೀರ್ತಿಕಾಂತಾ ತ್ರಿಜಗತಿನೃಪತೇ ಭೋಜರಾಜಕ್ಷಿತೀಂದ್ರ||

(ಅರ್ಥ— ಎಲೈ ಪೃಥೀಶ ಭೋಜರಾಜನೇ ! ನಿನ್ನ ಕೀರ್ತಿರೂಪ ಕಾಂತಿಯೂ ಮೂರು ಲೋಕಗಳಲ್ಲಿ ವ್ಯಾಪಿಸಿದ್ದುದರಿಂದ ಬ್ರಹ್ಮನು ಅಖಿಲ ಪಕ್ಷಿಗಳನ್ನು ಸಾಲ್ಗೊಳಿಸಿಕೊಂಡು ಕ್ಷೀರ ಸಮುದ್ರವನ್ನು ಅನುಸರಿಸಿಕೊಂಡು

ಇರುವನು. ಚಕ್ರಪಾಣಿಯಾದ ಮುಕುಂದನು ಚಕ್ರವನ್ನು ಧರಿಸಿಕೊಂಡು ಸಮುದ್ರವನ್ನು ಹುಡುಕುತ್ತಿರುವನು. ಭಗವನ್ ಶಂಕರನು ಕೈಲಾಸವನ್ನು ಶೋಧಿಸಿಕೊಳ್ಳುವದಕ್ಕಾಗಿ ಸಂಪೂರ್ಣ ಉನ್ನತೋನ್ನತ ಪರ್ವತಗಳನ್ನು ತನ್ನ ವಿಶಾಲವಾದ ನಯನದಿಂದ ಸುಡಲಿಕ್ಕೆ ಹತ್ತಿರುವನು)

"ಸ್ವರ್ಗಾದ್ಗೋಪಾಲ ಕ್ವತ ವ್ರಜಸಿ ಸುರಮುನೆ ಭೂತಲೇ ಕಾಮ ಧೇನೋ-

ರ್ವತ್ಸ ಸ್ಯಾನೇತುಕಾಮಸ್ತೃಣ ಜಯಮಧುನಾ ಮುಗ್ಧದುಗ್ಧಂ ನ ತಸ್ಯಾ |
ಶ್ರುತ್ವಾ ಶ್ರೀ ಭೋಜರಾಜ ಪ್ರಚುರ ವಿತರಣಂ ವ್ರೀಡ ಶುಷ್ಕಸ್ತನಾಃ ಸಾ |
ವ್ಯರ್ಥೋಹಿಸ್ಯಾತ್ ಪ್ರಯಾಸಸ್ತದಪಿ ತದರಿಭಿಶ್ಚರ್ವಿತಂ ಸರ್ವ ಮುರ್ವ್ಯಾಮ್ ||

(ಈ ಶ್ಲೋಕದಲ್ಲಿ ಕವಿಯು ಗೋಪಾಲ ಹಾಗೂ ನಾರದನ ಸಂವಾದ ರೂಪಿಸುವನು)

(ಅರ್ಥ- ಸುರಮುನಿ:-"ಎಲೈ ಗೋಪಾಲನೆ! ಸ್ವರ್ಗದಿಂದ ನೀನು ಎಲ್ಲಿಗೆ ಹೋಗಿದ್ದಿ ?)

ಗೋಪಾಲ- ಎಲೈ ಸುರಮುನಿಯೇ ! ಕಾಮಧೇನುವಿನ ಕರುಗಳಿಗೆ ಹುಲ್ಲು ತರುವದಕ್ಕೆಂದು ಭೂಲೋಕಕ್ಕೆ ಹೋಗಿದ್ದೆನು.

ಸುರಮುನಿ- ಎಲೋ ! ಅವುಗಳಿಗೆ ಹಾಲು ದೊರಕುವದಿಲ್ಲವೇ ?

ಗೋಪಾಲ- ಸುರಮುನಿಯೇ ! ಭೋಜರಾಜನ ಮಹಾದಾನದ ವಾರ್ತೆಯನ್ನು ಶ್ರವಣ ಮಾಡಿ ಧೇನುಗಳೆಲ್ಲ ಒಣಗಿದ ಮೊಲೆಗಳುಳ್ಳವಾಗಿವೆ. ನನ್ನ ಶ್ರಮವು ವ್ಯರ್ಥವಾಯಿತು. ಯಾಕಂದರೆ ಪೃಥ್ವಿಯ ಮೇಲೆ ಬೆಳೆದ ಹುಲ್ಲನ್ನೆಲ್ಲ ಆ ಭೋಜರಾಜನ ಶತೃರಾಜರು ತಾವೇ ತಿಂದಿರುವರು.)

ಈ ಪ್ರಕಾರ ಕಾಳಿದಾಸನು ಕೊಂಡಾಡಿದನು. ಭೋಜರಾಜನು ಸಂತೋಷಭರಿತನಾಗಿ ಆವನ ಶ್ಲೋಕಗಳ ಪ್ರತಿಯೊಂದಕ್ಷರಕ್ಕೊಂದೊಂದು ಲಕ್ಷ ವರಹಗಳನ್ನು ಕೊಟ್ಟು ಮನ್ನಿಸಿದನು.

ಒಂದು ದಿನ ಅದೆಲ್ಲಿಂದಲೋ ಇಬ್ಬರು ಸ್ಮೃತಿಶಾಸ್ತ್ರ ವಿಶಾರದ ಪಂಡಿತರಿಬ್ಬರು ಕವಿತ್ವಪ್ರಿಯ ಭೋಜರಾಜನನ್ನು ಕಂಡು ಸಂಭಾವನೆಯನ್ನು ಪಡೆಯುವ ಆಶೆಯಿಂದ ಧಾರಾ ನಗರಕ್ಕೆ ಬಂದರು. ನಗರದ ಬಾಹ್ಯಪ್ರದೇಶದಲ್ಲಿದ್ದ ದೇವಿಯ ಮಂದಿರದಲ್ಲಿ ಉಳಿದುಕೊಂಡರು. ನಿತ್ಯವೂ ಕಾಳಿದಾಸನು ದೇವಿ ದರ್ಶನಕ್ಕೆ ಬರುತ್ತಿರುವದನ್ನು ತಿಳಿದು ಅವರು ಕಾಳಿದಾಸನ ದ್ವಾರದಿಂದಲೇ ತಮ್ಮ ಇಷ್ಟಾರ್ಥ ಸಾಧಿಸಿಕೊಳ್ಳುವ ನಿಶ್ಚಯ ಮಾಡಿದರು. ದಿನದಂತೆ ಒಂದು ದಿನ ಕಾಳಿದಾಸನು ದೇವಿಮಂದಿರಕ್ಕೆ ಬಂದನು. ಕೂಡಲೇ ಆ ಪಂಡಿತರು ಅವನನ್ನು ತಡೆದು—"ಕವಿವರ! ನಾವು ವಿದೇಶದಿಂದ ಇಲ್ಲಿಗೆ ಬಂದಿರುವೆವು. ಶ್ರೀ ಭವಾನಿಪ್ರಸಾದದಿಂದ ನಾವು ಕವಿತ್ವ ರಚಿಸಲು ಸಮರ್ಥರಾಗುವೆವು. ನಮ್ಮ ಕಾವ್ಯ ರಚನೆಗೆ ಭೋಜರಾಜನಿಂದ ಸಂಭಾವನೆ ದೊರಕಿಸಿಕೊಡಬೇಕೆಂದು ಬೇಡಿಕೊಂಡರು. ಹಾಗೂ ತಾವು ರಚಿಸಿದ ಶ್ಲೋಕ ಚರಣವೊಂದನ್ನು ಇಬ್ಬರೂ ಪಂಡಿತರು ಕಾಳಿದಾಸನೆದುರು ಉಚ್ಚರಿಸಿದರು. ಮೊದಲನೆಯವನು—

"ಭೋಜನಂ ದೇಹಿ ರಾಜೇಂದ್ರ"

(ಅರ್ಥ ಎಲೈ ರಾಜನೆ ಊಟಕ್ಕೆ ನೀಡು)

ಎಂದು ಉಚ್ಚರಿಸಿದ ಕೂಡಲೇ ಎರಡನೆಯ ಪಂಡಿತನು—

"ಘೃತಸೂಪ ಸಮನ್ವಿತಮ್

(ಅರ್ಥ—ತುಪ್ಪ ಹಾಗೂ ಬೇಳೆಸಹಿತ)

ಎಂದು ಉಚ್ಚರಿಸಿದನು. ಆಗ ಕಾಳಿದಾಸನು "ಈ ಶ್ಲೋಕದ ಉತ್ತರಾರ್ಧವೇನು? ಎಂದು ಕೇಳಲು ಅವರು—ಕವಿವರ್ಯ! ಉತ್ತರಾರ್ಧವು ನಮಗೆ ಹೊಳೆಯಲೊಲ್ಲದು ಎಂದು ಸಿರಭಿಮಾನದಿಂದ ನುಡಿದರು. ಆಗ ಕಾಳಿದಾಸನು—

"ಮಾಹಿಷಂ ಚ ಶರಚ್ಚಂದ್ರ

ಚಂದ್ರಿಕಾಧವಲಂ ದಧಿ"

(ಅರ್ಥ—ಶರತ್ಕಾಲದ ಚಂದ್ರನ ಬೆಳದಿಂಗಳಂತೆ ಬೆಳ್ಳಗಿರುವ ಎಮ್ಮೆಯು ವೆಡರಿರನ್ನು ಸಹ.)

ಈ ಉತ್ತರಾರ್ಧವನ್ನು ಅವರಿಗೆ ಹೇಳಿ ಅವರನ್ನು ಭೋಜರಾಜನ ಸಭೆಗೆ ಕಳಿಸಿದನು. ಅಷ್ಟರಿಂದಲೇ ಅವರು ರಾಜಸಭೆಗೆ ಹೋದರು. ರಾಜನೆದುರಿನಲ್ಲಿ ಆ ಶ್ಲೋಕವನ್ನು ಪಠಿಸಿದರು. ಅವನ್ನು ಕೇಳಿ ಭೋಜರಾಜನು—

"ಎಲೈ ವಿಪ್ರರೇ! ನೀವು ಉಚ್ಚರಿಸಿದ ಶ್ಲೋಕದ ಪೂರ್ವಾರ್ಧವು ಉತ್ತರಾರ್ಧದಿಂದ ಭಿನ್ನವಿರುವದು ಭಾವನೆಯಲ್ಲಿ ಅಲ್ಲ, ರಚನೆಯಲ್ಲಿ. ಆದ್ದರಿಂದ ಉತ್ತರಾರ್ಧ ಶ್ಲೋಕ ರಚಿಸಿದ ಪಂಡಿತನಿಗೆ ಮಾತ್ರ ಒಂದೊಂದು ವರ್ಣಕ್ಕೆ ಒಂದೊಂದು ಲಕ್ಷ ವರಹ ಕೊಡುವೆವು. ನಿಮ್ಮಿಬ್ಬರಲ್ಲಿ ಆದಾರು?" ಎಂದು ಕೇಳಲು ಆ ಪಂಡಿತರಿಬ್ಬರೂ ದಿಗಿಲುಗೊಂಡು ಅಲ್ಲಿಂದ ಕಾಲ್ದೆಗೆಯುವ ಹಂಚಿಕೆ ನಡೆಸಿದರು. ರಾಜನು ಅವರ ಆ ಸ್ಥಿತಿಯನ್ನು ಕಂಡು ಕೋಶಾಧ್ಯಕ್ಷನನ್ನು ಕರೆಯಿಸಿ–"ಈ ಬ್ರಾಹ್ಮಣದ್ವಯರಿಗೆ ಕೇವಲ ಯಾಚಕ ಬ್ರಾಹ್ಮಣರಿಗೆ ಕೊಡುವಷ್ಟು ಸಂಭಾವನೆಯನ್ನು ಕೊಟ್ಟು ಕಳಿಸಬೇಕು ಎಂದು ಅಪ್ಪಣೆ ಮಾಡಿದನು.



[೨೫]

ಒಂದು ದಿನ ಮುಚ್ಚಂಜೆಯು ಸಂಧಿ ಸಮಯದಲ್ಲಿ ಭೋಜರಾಜನು ಕಾಳಿದಾಸ, ಬಾಣ, ಮಹೇಶ್ವರಾಧಿ ಕವಿಗಳೊಂದಿಗೆ ರಾಜೋದ್ಯಾಯನದ ಸೊಬಗು ನಿರೀಕ್ಷಿಸುತ್ತ ನಡೆದಿದ್ದನು. ಅಷ್ಟರಲ್ಲಿ ರಾಜನ ದೃಷ್ಟಿಯು ಮುಳುಗುತ್ತಲಿರುವ ಸೂರ್ಯನ ಕಡೆಗೆ ಹೊರಳಿತು. ಆಗ ಅವನು—

"ಪರಿಪತತಿ ಪಯೋನಿಧೌ ಪತಂಗ (ಅರ್ಥ–ರವಿಯು ಸಮುದ್ರದಲ್ಲಿ ಮುಳುಗಿದನು)

ಎಂಬ ವಾಕ್ಯವನ್ನು ಶ್ಲೋಕದ ಮೊದಲ ಚರಣವನ್ನಾಗಿರಿಸಿ ಉಚ್ಚರಿಸಿದನು. ಆಗ ಬಾಣ ಕವಿಯು—

"ಸರಸೀರುಹ ಮುದುರೇಷು ಮತ್ತ ಭೃಂಗಃ|

(ಅರ್ಥ– ಕಮಲದ ಮಧ್ಯಭಾಗದಲ್ಲಿ ಭ್ರಮರಗಳು ಸುತ್ತಾಡುವವು)

ಎಂಬುದಾಗಿ ಉಚ್ಚರಿಸಲು ಅದು ನೇ ದ್ವಿತಿಯ ಚರಣವಾಯಿತು. ಆಗ ಮಹೇಶ್ವರ ಕವಿಯು ಭೋಜ-ಬಾಣರ ವಾಕ್ಯಗಳ ಪೋಷಕವಾಗಿ

"ಉಪವನ ತರುಕೋಟರೇ ವಿಹಂಗಃ

(ಅರ್ಥ–ಮರದ ಹೊದರಿನಲ್ಲಿ ಪಕ್ಷಿಗಳು ಸೇರುವವು.)

ಎಂದು ಉಚ್ಚರಿಸಿದನು. ಅದೇ ಶ್ಲೋಕದ ತೃತೀಯ ಚರಣವಾಯಿತು. ಆಗ ಭೋಜರಾಜನು ತನ್ನ ಬಲಪಾರ್ಶ್ವದಲ್ಲಿ ಸಾಗುತ್ತಲಿರುವ ಕಾಳಿದಾಸನನ್ನು ಕುರಿತು— ಕಾಳಿದಾಸ! ಇದೇನು ಸುಮ್ಮಾನವೋ ದುಮ್ಮಾನವೋ?" ಎಂದು ಕೇಳಲು ಕಾಳೀದಾಸನು ರಾಜನ್! ಸುಮ್ಮಾನ ದುಮ್ಮಾನಗಳೆರಡೂ ಅಲ್ಲ. ಹಾಗಾದರೆ ಅದು—

"ಯುವತಿ ಜನೇಷು ಶನೈಃಶನೈರನಂಗಃ ||"

(ಅರ್ಥ– ಯುವತಿಯರ ಶರೀರದಲ್ಲಿ ಕಾಮನು ಮೆಲ್ಲ ಮೆಲ್ಲನೆ ಸೇರುವನು.)

ಎಂದು ಕವಿವಾಣಿಯಿಂದುಚ್ಚರಿಸಿ ಶ್ಲೋಕ ಪೂರ್ಣ ಮಾಡಿದನು. ಆಗ ಭೋಜರಾಜನ ಹರ್ಷತೆಗೆ ಮೆರೆಯುಳಿಯಲಿಲ್ಲ. ಅವನು ಆ ಶ್ಲೋಕದ ೨ನೇ ೩ನೇ ಚರಣ ಸ್ಫುರಿತ ಕವಿಗಳಿಗೆ ಒಂದೊಂದು ಲಕ್ಷ ವರಹಗಳನ್ನೂ ಕೊನೆಯ ಚರಣಕರ್ತಾರನಿಗೆ ಎರಡು ಲಕ್ಷ ವರಗಳನ್ನೂ ಮೆಚ್ಚುಗೆಯಾಗಿ ಸನ್ಮಾನಿಸಿದನು.

## [೨೬]

ಒಬ್ಬಾನೊಬ್ಬ ಕವಿಯು ಧಾರಾ ನಗರಕ್ಕೆ ಬಂದನು. ಭೋಜರಾಜನ ದರ್ಶನಕ್ಕೆಂದು ಹಂಬಲಿಸಿ ರಾಜದ್ವಾರಕ್ಕೆ ಬಂದನು. ಸಮಯ ದೊರೆತ ಕೂಡಲೇ ಸಭೆಯ ಒಳಸೇರಿದನು. ಸಿಂಹಾಸನಾಲಂಕೃತನಾಗಿದ್ದ ಭೋಜರಾಜನನ್ನು ಕಂಡು ಅವನು–"ರಾಜನ್! ಸ್ವಸ್ತಿ ಎಂದು ಉಚ್ಚರಿಸಿದನು. ಹಾಗೂ ರಾಜಾಜ್ಞೆಯಿಂದ ಉಚಿತಾಸನದ ಮೇಲೆ ಕುಳಿತನು.

"ಕವಿಷು ವಾದಿಷು ಭೋಗಿಷು ದೇಹಿಷು
ದ್ರವಿಣವತ್ಸು ಸತಾಮುಪಕಾರಿಷು ||
ಧನಿಷು ಧನ್ವಿಷು ಧರ್ಮಧನೇಷ್ವಪಿ
ಕ್ಷಿತಿತಲೇನಹಿ ಭೋಜಸಮೋ ನೃಪಃ"

(ಅರ್ಥ– "ಕವಿಗಳಿಗೆ, ವಕ್ತಾರರಿಗೆ, ಭೋಗಗಳಿಗೆ ದೇಹದಾರಿಗಳಿಗೆ, ಸಾಧುಗಳಿಗೆ, ಉಪಕಾರ ಮಾಡುವವರಿಗೆ, ಧನಿಕರಿಗೆ, ಧನುರ್ಧಾರಿಗಳಿಗೆ, ಧಾರ್ಮಿಕರಿಗೆ ಇವರೆಲ್ಲರಿಗೂ ಈ ಜಗತ್ತಿನಲ್ಲಿ ಬೇಕಾಗುವಂಥವನು ಮಹಾರಾಜ ಭೋಜರಾಜನ ಹೊರತು ಇನ್ನೊಬ್ಬನು ಯಾವನೂ ಇರುವದಿಲ್ಲ. ಅರ್ಥಾತ್ ಮೇಲೆ ಹೇಳಿದ ಎಲ್ಲ ಗುಣಗಳಿಂದ ಈ ಮಹಾರಾಜನು ಅದ್ವಿತೀಯನಾಗಿರುವನು.)

ಎಂಬುದಾಗಿ ಹೊಗಳಿದನು. ಆಗ ರಾಜನು ಆವನಿಗೆ ಒಂದು ಲಕ್ಷ ವರಹಗಳನ್ನು ಕೊಟ್ಟನಲ್ಲದೆ, ಅನೇಕ ಆಭರಣಗಳನ್ನೂ, ಅಶ್ವವನ್ನೂ ಕೊಟ್ಟನು.

## [೨೭]

ವಸಂತ ಕಾಲದ ಒಂದು ದಿನ್ನ ಭೋಜರಾಜನು ತನ್ನ ಪಂಡಿತಮಂಡಲದಲ್ಲಿ ಸಿಂಹಾಸನವನ್ನು ಅಲಂಕರಿಸಿ ಕುಳಿತಿರುವನು. ಆ ಸಮಯದಲ್ಲಿ ದ್ವಾರಪಾಲಕನು ಬಂದು ಶಿರಬಾಗಿ–"ರಾಜನ್! ಕುಲದೇವ ಎಂಬ ಹೆಸರಿನ ಯಾವನೋ ದರಿದ್ರನು ದ್ವಾರದಲ್ಲಿ ಬಂದು ನಿಂತಿರುವನು ಎಂದು ಅಜ್ಞಾಪಿಸಿಕೊಂಡನು. ಆಗ ರಾಜನು ಬಾಣಕವಿಯನ್ನು ಕುರಿತು–"ಪಂಡಿತರೆ! ನೀವು ಶುಕದೇವನನ್ನು ತಿಳಿದಿರುವಿರಾ? ಎಂದು ಕೇಳಲು ಬಾಣನು–"ದೇವ! ಕಾಳಿದಾಸನಲ್ಲಿ ಶುಕದೇವನು ಅಭಿಜ್ಞನು ಜ್ಞಾನಿಯು ಅಂಥವನು ಇನ್ನೊಬ್ಬನಿರುವದಿಲ್ಲ" ಎಂದನು. ಆಗ ಭೋಜನು ಕಾಳಿದಾಸನನ್ನು ಕುರಿತು– "ಕವಿರತ್ನವೇ! ಮಿತ್ರನೆ! ಶುಕದೇವ ಕವಿಯನ್ನು ನೀನು ಬಲ್ಲೆಯಾ ?"– ಎಂದು ಕೇಳಲು ಕಾಳಿದಾಸನು– ದೇವ !

ಸುಕವಿ ದ್ವಿತಯಂ ಜಾನೆ ನಿಖಿಲೇಪ ಮಹಿತಲೇ |
ಭವಭೂತಿಃ ಶುಕಶ್ಚಾಯಂ ವಾಲ್ಮೀಕಿಸ್ತ್ರಿತಯೋ ನಯೋಃ||"

(ಅರ್ಥ- ದೇವ! ಇಡೀ ಜಗತ್ತಿನಲ್ಲಿ ನಾನು ಇಬ್ಬರು ಮಹಾನ್ ಕವಿಗಳನ್ನು ಮಾತ್ರ ಬಲ್ಲೆನು. ಅವರಲ್ಲಿ ಒಬ್ಬನು ಭವಭೂತಿಯು ಇನ್ನೊಬ್ಬನು ಶುಕದೇವ ಕವಿಯು. ಇವರಿಬ್ಬರಲ್ಲದೆ, ಮೂರನೇಯವನಾದ ವಾಲ್ಮೀಕಿಯನ್ನೂ ಬಲ್ಲೆನು.)

ಎಂದು ಕಾಳಿದಾಸನು ಹೇಳಿದನು. ಕೂಡಲೇ ಭೋಜಸಭೆಯಲ್ಲಿಯ ವಿದುಷಿ ಸೀತೆಯು-"ದೇವ!

ಕಾ ಕಾಃ ಕಿಂ ಕಿಂ ನ ಕರ್ವಂತಿ ಕ್ರೋಂಕಾರಂ ಯತ್ರತತ್ರವಾ
ಶುಗ ಏವ ಪರಂ ವಕ್ತಿ ನೃಪ ಹಸ್ತೋಪಲಾಲಿತಃ||"

(ಅರ್ಥ- ರಾಜನ್! ಮುಂಗೈ ಮೇಲೆ ಕುಳಿತು ಮಾತನಾಡುವಂಥ ಅರಗಿಳಿಗೆ ಎಲ್ಲಿ ಬೇಕಾದಲ್ಲಿ ಕುಳಿತು ಕಾವ್ ಕಾವ್ ಎಂದು ಒದರುತ್ತಿರುವ ಕಾಗೆಯು ಸರಿಯಾಗುವದೇ?)

ಈ ಪ್ರಕಾರ ಆಕೆ ನುಡಿದ ನಂತರ ಮಯೂರ ಕವಿಯು-ರಾಜನ್!

"ಅಪೃಷ್ಟಸ್ತು ನರಃ ಕಿಂಚಿತ್ ಯೋ ಬ್ರೂತೇ ರಾಜಸಂಸದಿ|
ನ ಕೇವಲ ಮಸಂಮಾನಂ ಲಭತೇ ಚ ವಿಡಂಬನಮ್||"

(ಅರ್ಥ- ರಾಜಸಭೆಯಲ್ಲಿ ಅಪ್ಪಣೆಯಿಲ್ಲದೆ ಭಾಷಣ ಮಾಡುವವನು ಕೇವಲ ಅಪ್ರತಿಷ್ಠೆಯನ್ನು ಸಹ ಹೊಂದುವದಿಲ್ಲ. ಆದರೆ ಅವನು ಎಲ್ಲರಿಂದ ಧಿಕ್ಕಾರಕ್ಕೆ ಒಳಗಾಗುವನು.

ಹಾಗೆಯೇ-

"ಕಾ ಸಭಾ ಕಿಂ ಕವಿಜ್ಞಾನಂ ರಸಿಕಾ ಕವಯಶ್ಚ ಕೇ|
ಭೋಜ ಕಿಂ ನಾಮ ತೇ ದಾನಂ ಶುಕಸ್ತುಷ್ಯತಿ ಯೇನ ಸಃ||

(ಅರ್ಥ- ಭೋಜರಾಜನೆ! ನಿನ್ನ ಸಭೆಯೇನು? ನಿನ್ನ ಕಾವ್ಯಜ್ಞಾನವೇನು? ರಸಿಕರಾದ ನಿನ್ನ ಕವಿಗಳೇನು? ನಿನ್ನ ಹೆಸರೇನು? ನಿನ್ನ ದಾನವೇನು? ನೀನು ಆ ಶುಕದೇವನನ್ನು ಯಾವುದರಿಂದ ಸಂತೋಷಪಡಿಸುವಿ?)

ಆದರೂ ದ್ವಾರ ಪ್ರದೇಶದಲ್ಲಿ ಆಗಮಿಸುವ ಶುಕದೇವನನ್ನು ಸಭೆಯೊ ಳಕ್ಕೆ ಬರಮಾಡಿಕೊಳ್ಳುವದು" ಎಂದನು. ಆಗ ರಾಜನು—'ಶುಕದೇವನ ಸಾಮರ್ಥ್ಯವನ್ನು ಕೇಳಿ ನನ್ನಲ್ಲಿ ಹರ್ಷ ವಿಷಾದ ಇವೆರಡೂ ಉದ್ಭವಿಸಿರುವವು ಮಹಾಕವಿಯ ದರ್ಶನವಾಗುವದರಿಂದ ಹರ್ಷವು ಕೋಬಿಸತ್ಕವಿ ಮುಕುಟ ಮಣಿಯಾಗಿರುವ ಆ ಕವಿಯ ಯೋಗ್ಯತೆಗೆ ಸಮನಾಗಿ ಕೊಡುವ ಭಾಗ್ಯವು ನನ್ನಲ್ಲಿಲ್ಲ ಎಂಬ ಬಗೆಗೆ ವಿಷಾದವು. ಆಗಲಿ, ದ್ವಾರಪಾಲಕನೇ! ಶುಕದೇವ ಕವಿಯನ್ನು ಒಳಕ್ಕೆ ಕಳುಹಿಸು" ಎಂದು ಹೇಳಲು ಅವನು ರಾಜಾಜ್ಞೆಯಂತೆ ಶುಕದೇವನನ್ನು ರಾಜಸಭೆಗೆ ಕರೆದೊಯ್ದನು. ರಾಜನು ಶುಕದೇವನ ಬರುವಿಕೆ ಯನ್ನು ದೂರದಿಂದಲೇ ನಿರೀಕ್ಷಿಸಿ ಸಿಂಹಾಸನದಿಂದ ಮೇಲಕ್ಕೆದ್ದನು. ಎಲ್ಲ ಪಂಡಿತರೂ ಶುಕದೇವನಿಗೆ ವಂದಿಸಿ ಅವನನ್ನು ಮರ್ಯಾದೆಯಿಂದ ಕುಳ್ಳಿರಿಸಿ ದರು. ಆಗ ಶುಕದೇವನು ರಾಜನನ್ನು ಕುರಿತು—"ದೇವ! ಧಾರಾನಾಥ ಶ್ರೀ ವಿಕ್ರಮ ನರೇಂದ್ರನ ದಾನಲಕ್ಷ್ಮಿಯು ನಿನ್ನ ಸೇವೆಗೊಳಗಾಗಿರುವಳು. ಆ ದೂರವೇಂದ್ರನಂತೆ ರಾಜಾ ನೀನೂ ಧನ್ಯನು! ನಿನ್ನಂತಹ ರಾಜರಾರೂ ಇರುವ ದಿಲ್ಲ. ಕಾಳಿದಾಸಾದಿ ಮಹಾ ಮಹಾ ಕವಿಗಳನ್ನು ಪಕ್ಷಿಗಳೋಪಾದಿಯಲ್ಲಿ ಸೂತ್ರದಿಂದ ಬಂಧಿಸಿರುವಿ ಮತ್ತು—

"ಪ್ರತಾಪ ಭೀತ್ಯಾ ಭೋಜ್ಯ ತಪನೋ ಮಿತ್ರತಾಮಗಾತ್|
ಔರ್ವೋ ವಾಡವತಾಂ ಧತ್ತೇ ತಟಿತ್ ಕ್ಷಣಿಕಂ ತಾಂ ಗತಾ||"

(ಅರ್ಥ— ಎಲೈ ರಾಜನೇ! ನಿನ್ನ ಪ್ರತಾಪದ ಭಯದಿಂದ ಸೂರ್ಯನು ಬಿಟ್ಟನಾಗಿ ಮಿತ್ರತೆಯನ್ನು ಹೊಂದಿದನು. ಸಮುದ್ರವು ವಾಡವತೆಯನ್ನು ಪಡೆಯಿತು ಹಾಗು ವಿದ್ಯುಲ್ಲತೆಯು ಕ್ಷಣಿಕತೆಯನ್ನು ಧರಿಸಿತು)

ಎಂದನು. ಆಗ ರಾಜನು—"ಕವಿಗಳೇ! ನಿಲ್ಲಿರಿ ನಾನೊಂದು ಶ್ಲೋಕ ನುಡಿಯುವೆನು"

"ಸುವರ್ಣ ಕಲಶಂ ಪ್ರಾದಾದ್ದಿವ್ಯ ಮಾಣಿಕ್ಯ ಸಂಭೃತಮ್|
ಭೋಜಃ ಶುಕಾಯ ಸಂತುಷ್ಟೋ ದಂತಿನಶ್ಚ ಚತುಃಶತಮ್||

(ಅರ್ಥ- ಭೋಜರಾಜನು ಶುಕದೇವ ಕವಿಗೆ ಪ್ರಸನ್ನತೆಯಿಂದ ನಾಲ್ಕು ನೂರು ಆನೆಗಳನ್ನೂ ಹಾಗು ರತ್ನಗಳಿಂದ ತುಂಬಿದ ಬಂಗಾರದ ಕಲಶವನ್ನೂ ಕೊಟ್ಟನು.)

ಈ ಪ್ರಕಾರ ನುಡಿದು ಭೋಜರಾಜನು ದಾನಪತ್ರದಲ್ಲಿ ಬರೆದು ಕೋಶಾಧಿಕಾರಿಯಲ್ಲಿಗೆ ಅಪ್ಪಣೆ ಮಾಡಿದನು. ಶುಕದೇವ ಕವಿಯು ಸ್ವದೇಶಕ್ಕೆ ಹೊರಡಲು ರಾಜನು ಸಂತೋಷದಿಂದ ಬೀಳ್ಕೊಟ್ಟನು. ಅಂದಿನ ದಿನವೆಲ್ಲ ಸಭಿಕರಿಗೆ ಆನಂದವೇ ಆನಂದವಾಗಿದ್ದಿತು.

## (೨೮)

ಒಂದು ದಿನ ಭೋಜರಾಜನು ಸಕಲ ವಿದ್ವಜ್ಜರೊಡನೆ ಸಭೆಯಲ್ಲಿ ಕುಳಿತಿರುವ ಸಮಯದಲ್ಲಿ ದ್ವಾರಪಾಲಕನು ಬಂದು—"ದೇವ ಶ್ರೀಶೈಲದಿಂದ ವಿದ್ವಾನ್ ಬ್ರಹ್ಮಚರ್ಯನಿಷ್ಠನೊಬ್ಬನು ಇಲ್ಲಿಗೆ ಬಂದು ದ್ವಾರದಲ್ಲಿ ನಿಂತಿರುವನು ಅಪ್ಪಣೆಯಾದರೆ...." ಎಂದು ಶ್ರುತಪಡಿಸುವಷ್ಟರಲ್ಲಿ ಭೋಜರಾಜನು "ಅಡ್ಡಿಯಿಲ್ಲ ಅವರಿಗೆ ಪ್ರವೇಶವಿದೆ'' ಎಂದು ಹೇಳಲು ದ್ವಾರಪಾಲಕನು ಆ ಬ್ರಹ್ಮಚಾರಿಯನ್ನು ಸಭೆಯೊಳಕ್ಕೆ ಕರೆದೊಯ್ದನು. ಬ್ರಹ್ಮಚಾರಿಯು ರಾಜನನ್ನು ಕಂಡು 'ಚಿರಂಜೀವ' ಎಂದು ಉಚ್ಚರಿಸಲು ರಾಜನು—ಬ್ರಹ್ಮನ್! ಚಿಕ್ಕ ವಯಸಿನವರಾದ ನೀವು ಈ ಕಲಿಕಾಲದಲ್ಲಿ ಆದಾವ ವ್ರತ ಸ್ವೀಕರಿಸಿರುವಿರಿ? ಎಂದು ಕೇಳಲು ಬ್ರಹ್ಮಚಾರಿಯು—'ದೇವ! ಮಹಿಮಾಯುಂತರಾದ ನಿಮಗೆ ಅಸಾಧ್ಯವೇನು'?

"ಸಾರಂಗಾಃ ಸುಹದೋ ಗೃಹಂ ತರಿಗುಹಾ ಶಾಂತಿಃ
ಪ್ರಿಯಾಗೇಹಿನೀ
ವೃತ್ತಿರ್ವರ್ನ್ಯಲತಾಫಲೈ ರ್ನಿವಸನಂ ಶ್ರೇಷ್ಠಂತರಲ್ಲಿಣಾಂ ತ್ವಚಃ||
ತದ್ಧ್ಯಾನಾಮೃತಪೂರ ಮಗ್ನ ಮನಸಾಂ ಯೇಷಾ
ಮಿಯಂ ನಿರ್ವೃತಿ

ಸ್ತೇಷಾಮಿಂದು ಕಲಾವಂತಸ ಯಮಿನಾಂ ಮೋಕ್ಷೇಪಿ

ನೋ ನಸ್ಪೃಹಾ''

ಅರ್ಥ_ಎಲೈ ಭೋಜರಾಜನೆ! ಸಾರಂಗಗಳು ನನ್ನ ಸ್ನೇಹಿತರು, ಗಿರಿ ಗುಹೆಯು ನನ್ನ ವಾಸಸ್ಥಾನವು, ಶಾಂತಿಯು ನನ್ನ ಪತ್ನಿಯು, ಅಗ್ನಿ, ಫಲ-ಬಳ್ಳಿ ಮೊದಲಾದವು ನನ್ನ ಆಹಾರ ವಸ್ತುಗಳು, ಮರದೋಟಗಳು ನಾನು ಧರಿಸುವ ವಸ್ತ್ರಗಳು ಈ ಪ್ರಕಾರದ ವೃತ್ತಿಯುಳ್ಳ ಸಂಯಮಿಗೆ ಕೇವಲ ಚಂದ್ರ ಕಲೆಯನ್ನು ಆಭರಣ ಮಾಡಿಕೊಂಡು ಶೋಭಿಸುವ ಶಿವನ ಧ್ಯಾನರೂಪದ ಅಮೃತನಂದ ಪೂರ್ಣ ಹಾಗು ಪ್ರಮುದಿತಚಿತ್ರವುಳ್ಳ ನನಗೆ ಶಿವನ ಸಂಬಂಧದ ವ್ರತದ ಅಭಿಲಾಷೆಯಿರುತ್ತದೆ ಹೊರತು ಮೋಕ್ಷದ ಇಚ್ಛೆಯಿರುವದಿಲ್ಲ. ಅರ್ಥಾತ್ ಶಿವದಿ ಸಂಬಂಧದ ವ್ರತದಲ್ಲಿಯೇ ನನ್ನ ಅಭಿಲಾಷೆಯಿರುತ್ತದೆ. ಮೋಕ್ಷ ಮುಟ್ಟುವದಕ್ಕೆ ಆಶೆಯಿಲ್ಲ. ಅಂದ ಮೇಲೆ ಇನ್ನುಳಿದ ಸಂಗೀತಗಳ ಮಾತೇ ನನಗೆ ಬೇಕಾಗಿಲ್ಲ.)

ಈ ಶ್ಲೋಕವನ್ನು ಪಠಿಸಿದ ಕೂಡಲೇ ರಾಜನು ಸಿಂಹಾಸನದಿಂದ ಇಳಿದು ಬಂದು ಆ ಬ್ರಹ್ಮಚಾರಿಯನ್ನು ವಂದಿಸಿದನು. ಮತ್ತು ಅವನು—"ಬ್ರಹ್ಮನ್! ನಾನು ತಮಗಾಗಿ ಅನುಸರಿಸುವ ಕರ್ತವ್ಯವೇನು?" ಎಂದು ಕೇಳಲು ಬ್ರಹ್ಮಚಾರಿಯು— "ದೇವ ! ನಾನು ಮಹಾಯಾತ್ರೆಗೆ ಹೊರಟಿರುವೆನು. ಈಗ ನನಗೆ ವಿಧಿಸುವದೇನಂದರೆ-- ಈ ನಿನ್ನ ಆಶ್ರಯದಲ್ಲಿದ್ದ ಪಂಡಿತಶ್ರೇಷ್ಠರನ್ನೇ ಅವರವರ ಪತ್ನೀಸಹಿತವಾಗಿ ನನ್ನ ಜೊತೆಗೆ ಕಾಶಿಗೆ ಹೊರಡಿಸಬೇಕು. ಇಂತಾದರೆ ನಾನು ಸಂತುಷ್ಟತೆಯಿಂದ ಕಾಶೀಯಾತ್ರೆ ಮುಕ್ತಾಯಗೊಳಿಸುವನು" ಎಂದು ಹೇಳಿದನು.

ಭೋಜರಾಜನು ಬ್ರಹ್ಮಚಾರಿಯ ಅಪ್ಪಣೆಯಂತೆ ತನ್ನಲ್ಲಿಯ ಎಲ್ಲ ಪಂಡಿತರನ್ನು ಅವರವರ ಪತ್ನಿಯರೊಂದಿಗೆ ಕಾಶಿಗೆ ತೆರಳಲು ಪ್ರೇರೇಪಿಸಿದನು. ಅನಾಯಾಸ ಒದಗಿದ ಪ್ರಸಂಗಕ್ಕೆ ಎಲ್ಲರೂ ಮಹಾಯಾತ್ರೆಗೆ ಸಪತ್ನೀಕರಾಗಿ ಹೊರಡಲು ಸಿದ್ಧರಾದರು. ಆದರೆ ಕಾಳಿದಾಸನೊಬ್ಬನು ನಿರಾಕರಿಸಿದನು. ಬೋಜರಾಜನು ಅವನನ್ನು ಕುರಿತು-- "ಕವಿರತ್ನ

ಕಾಳಿದಾಸನೇ! ನೀನು ಎಲ್ಲಿಯೂ ಹೋಗದಿರಲು ಕಾರಣವೇನು!" ಎಂದು ಕೇಳಲು ಕಾಳಿದಾಸನು:—

"ದೇವ! ನೀನು ಎಲ್ಲವನ್ನೂ ಬಲ್ಲವನಾಗಿರುವಿ
"ತೇ ಯಾಂತಿ ತೀರ್ಥೇಷು ಬುಧಾ ಯೇ
ಶಂಭೋರ್ದೂರ ವರ್ತಿನಃ |
ಯಸ್ಯ ಗೌರೀಶ್ವರಶ್ಚಿತ್ತೇ ತೀರ್ಥಂ ಭೋಜ
ಪರಂಹಿ ಸಃ" ||

(ಅರ್ಥ— ಎಲೈ ಭೋಜರಾಜ! ಆ ಪಂಡಿತರೂ ಶಿವನ ದರ್ಶನಕ್ಕಾಗಿ ತೀರ್ಥ ಕ್ಷೇತ್ರಗಳಿಗೆ ಹೋಗುವರು. ಆದರೆ ಅವರು ಆ ಶಂಭು ಶಿವನಿಂದ ದೂರದಲ್ಲಿಯೇ ಇರುವರು ಆದರೆ ಗೌರೀಶ್ವರ ಶಿವನನ್ನು ಅಂತಃಕರಣದಲ್ಲಿ ಇರಿಸಿಕೊಂಡವನೇ ಶ್ರೇಷ್ಠವಾದ ತೀರ್ಥಕ್ಕೆ ಸಮನಾಗುವನು)

ಈ ಪ್ರಕಾರವಾಗಿ ಹೇಳಿದನು. ಆಗ ಎಲ್ಲ ಪಂಡಿತರು ಕಾಳಿದಾಸನ ಹೊರತು ಕಾಶಿಗೆ ಹೋದರು ನಂತರ ಒಂದು ದಿನ ಸಭೆಯಲ್ಲಿ ರಾಜನು ಕಾಳಿದಾಸನನ್ನು— "ಕಾಳಿದಾಸ! ಈ ದಿನ ನಿನ್ನಿಂದ ಏನಾದರೂ ಶ್ರವಣ ಮಾಡುವ ಅವಲವಿಕೆ ನನ್ನಲ್ಲುಂಟಾಗಿದೆ" ಎಂದೆನ್ನಲು ಕಾಳಿದಾಸನು—

"ಮೇರೌ ಮಂದಿರ ಕಂದರೇಸು ಹಿಮವತ್ ಸ್ಥಾನೌ
ಮಹೇಂದ್ರಾಚಲೇ
ಕೈಲಾಸಸ್ಯ ಶಿಲಾತಲೇಷು ಮಲಯ ಪ್ರಾಗ್ಭಾರ
ಭಾಗೇಷ್ವಪಿ ||
ಸಹ್ಯಾದ್ರಾವಪಿ ತೇಷು ತೇಷು ಬಹುಶೋ ಭೋಜ
ಶ್ರುತಂ ತೇಮಯಾ
ಲೋಕಾಲೋಕಾ ವಿಚಾರ ಚಾರಣ ಗಣೈಃ
ಉದ್ಗೀಯ ಮಾನಂ ಯಶಃ ||"

(ಅರ್ಥ— "ಎಲೈ ಭೋಜರಾಜನೆ! ಮೇರುಗಿರಿಯಲ್ಲಿ ಮಂದಗಿರಿಯ ಗಂಹಾಂತರದಲ್ಲಿ, ಹಿಮಾಚಲದಲ್ಲಿ, ಮಹೇಂದ್ರ ಪರ್ವತದಲ್ಲಿ, ಕೈಲಾಸ ಶಿಲೆಗಳಲ್ಲಿ, ಮಲಯಗಿರಿಯ ಶಿಖರದಲ್ಲಿ, ಸಹ್ಯಾಚಲದ ಪ್ರದೇಶದಲ್ಲಿ ಇವೆಲ್ಲವುಗಳಲ್ಲಿ ಗಮನಾಗಮನ ಮಾಡುವಂಥ [illegible] ಲೋಕಾಲೋಕ ಪರ್ವತಗಳ

ಮೇಲೆ ಸಂಚರಿಸುವಂಥ, ಚಾರಣರಿಂದ (ವಂದಿ–ಮಾಗಧ–ಭಟ್ಟಂಗಿಯರಿಂದ) ಗಾಯನ ರೂಪದಿಂದ ಹೊಗಳಿಸಿಕೊಳ್ಳಲ್ಪಡುವ ನಿನ್ನ ಯಶಸ್ಸಿನ ವರ್ಣನೆಯನ್ನು ನಾನು ಕೇಳಿರುವೆನು.)

ಈ ಬಗೆಯಾಗಿ ಕಾಳಿದಾಸನು ಬಹು ಚಮತ್ಕೃತಿಯುಕ್ತ ಶ್ಲೋಕವನ್ನು ಉಚ್ಚರಿಸಿದುದನ್ನು ಕೇಳಿ ಬಲು ಸಂತುಷ್ಟತೆ ಹೊಂದಿದನು. ಹಾಗೂ ಆ ಶ್ಲೋಕದ ಪ್ರತಿ ಅಕ್ಷರಕ್ಕೂ ಒಂದೊಂದು ಲಕ್ಷ ವರಹದಂತೆ ಆ ಕವಿ ರಾಜ ಕಾಳಿದಾಸನಿಗೆ ಮೆಚ್ಚುಗೆಯಾಗಿ ಕೊಟ್ಟನು.

## (೨೯)

ವಿದ್ವದ್ವೃಂದವೆಲ್ಲ ಕಾಶಿಗೆ ಹೋದ ನಂತರ ಕಾಳಿದಾಸನು ಭೋಜ ಸಭೆಗೆ ಬಾರದೆಯಾಗಲೂ ವೇಶ್ಯಾಲಂಪಟನಾಗಿ ಇರಹತ್ತಿದನು. ಇದನ್ನು ಭೋಜರಾಜನು ತಿಳಿದು ತನ್ನಲ್ಲಿ—ಅಹಹ! ಬಾಣ ಮಯೂರ ಮೊದಲಾದ ಪಂಡಿತರು ನನ್ನ ಆಜ್ಞೆಯನ್ನು ಎಂದು ಉಲ್ಲಂಘಿಸಿರುವದಿಲ್ಲ. ಆದರೆ ಈ ಕಾಳಿದಾಸನು ಮಾತ್ರ ವೇಶ್ಯಾಲಂಪಟನಾಗಿ ಯಾವಾಗಲೂ ನನ್ನ ಆಜ್ಞೆಯನ್ನೇ ಲೆಕ್ಕಿಸುವದಿಲ್ಲ. ಇವನಿಗೇನು ಉಪಾಯ ಮಾಡಬೇಕು? ಎಂಬುದಾಗಿ ಬಹಳ ಹೊತ್ತಿನವರೆಗೆ ವಿಚಾರ ನಡೆಯಿಸಿದನು. ಕಡೆಗೆ ಅವನು "ಕಾಳಿದಾಸನನ್ನು ಧಿಕ್ಕರಿಸುವದೇ ಸೂಕ್ತ ಮಾರ್ಗವು ಎಂಬ ನಿಶ್ಚಿತ ಮನವನ್ನು ತಿರಸ್ಕಾರ ದೃಷ್ಟಿಯಿಂದ ಕಾಣಹತ್ತಿದನು. ಕಾಳಿದಾಸನು "ರಾಜನು ತನ್ನನ್ನು ಅಲಕ್ಷಿಸುತ್ತಿರುವನೆಂಬುದನ್ನು ಮನಗಂಡನು ಹಾಗು ಇನ್ನು ಈ ನಿಕಟವರ್ತಿಯಾಗಿರುವದರಲ್ಲಿ ಅರ್ಥವಿಲ್ಲ" ಎಂದು ವಿಚಾರಿಸಿ ರಾಜನಿಗೆ ಹೇಳದೆ ಧಾರಾನಗರದಿಂದ ಹೊರಬಿದ್ದು ಬಲ್ಲಾಳ ದೇಶಕ್ಕೆ ಹೋದನು. ಅಲ್ಲಿಯ ರಾಜಧಾನಿ ಪ್ರವೇಶಿಸಿ ಬಲ್ಲಾಳ ರಾಜನನ್ನು ಕಂಡು— ರಾಜಾ! ಮಾಳವದೇಶದ ಅಧಿಪತಿ ಭೋಜ ರಾಜನು ನನ್ನನ್ನು ಅನಾದರಿಸಹತ್ತಿದ್ದರಿಂದ ನಾನು ಅಲ್ಲಿಂದ ತ್ಯಜಿಸಿ ಬಂದಿರುವೆನು, ಕಾಳಿದಾಸನೆಂಬ ಹೆಸರಿನ ಕವಿಯು ನಾನಾಗಿರುವೆನು" ಎಂದು ಹೇಳಿದನು.

ಕಾಳಿದಾಸನ ಹೇಳಿಕೆಯನ್ನು ಕೇಳಿ ಬಲ್ಲಾಳ ರಾಜನು ಕಾಳಿದಾಸನನ್ನು ಮರ್ಯಾದೆಯಿಂದ ಸವಿೂಪಿಸಿ-ಸುಕವಿಯೆ! ಭೋಜ ಸಭೆಯಿಂದ ಇಲ್ಲಿಗೆ ಬಂದ ಪಂಡಿತರಾದ ನಿಮಗೆ ಸುಸ್ವಾತವು! ನೀವು ಸಾಕ್ಷಾತ್ ಸರಸ್ವತೀ ಸದೃಶ ಪಂಡಿತರೆಂದು ಖ್ಯಾತಿಯುಂಟು. ನಮ್ಮ ಹೃದಯೋಲ್ಲಾಸವಾಗುವಂತೆ ನಮಗೆ ಕವಿತ್ವ ಶ್ರವಣ ಮಾಡಿರಿ" ಎಂದೆನ್ನಲು ಕಾಳಿದಾಸನ—

"ಬಲ್ಲಾಳ ಕ್ಷೋಣಿಪಾಲ ತ್ವದಹಿತನಗರೇ ಸಂಚರಂತೀ ಕಿರಾತೀ
ಕೀರ್ಣಾನ್ಯಾದಾಯರತ್ನಾನುರುತರ ಖದಿರಾಂಗಾರಶಂಕಾಕುಲಾಂಗೀ||
ಕ್ಷಿಪ್ತ್ವಾ ಶ್ರೀಖಂಡಖಂಡಂ ತದುಪರಿ ಮುಕುಲೀ ಭೂತನೇತ್ರಾ ಧಮಂತೀ
ಶ್ವಾಸಾಮೋದಾನು ಯಾತೈರ್ಮಧುಕರ ನಿಕರೈ ರ್ಧೂಮಶಂಕಾಂ ಬಿಭರ್ತಿ ||"

(ಅರ್ಥ— "ಎಲೈ ಬಲ್ಲಾಳ ಭೂಪನೇ! ನಿನ್ನ ನಗರದಲ್ಲಿ ಸಂಚರಿಸುವ ಬೇಡತಿಯು ಉದುರಿಬಿದ್ದ ರತ್ನಗಳನ್ನು ಆಯ್ದು ತಂದಳು. ಅವಳು ಆ ರತ್ನಗಳನ್ನು ನಿಗಿನಿಗಿ ಕೆಂಡಗಳೆಂದು ಭಾವಿಸಿ ವ್ಯಗ್ರಳಾದಳು. ನಂತರ! ಅವಳು ಆ ರತ್ನಗಳನ್ನಿಟ್ಟು ಅವುಗಳ ಮೇಲೆ ಚಂದನ ಕಟ್ಟಿಗೆಯ ಚೂರುಗಳನ್ನು ಹಾಕಿದಳು. ಬಳಿಕ ತನ್ನ ಕಣ್ಣು ಮುಚ್ಚಿಕೊಂಡು ಆ ಕಟ್ಟಿಗೆಗೆ ಬಾಯಿಯಿಂದ ಊದ ಹತ್ತಿದಳು. ಆಕೆ ಮಂದವಾಗಿ ಉಸಿರು ಹಾಕಲು ಆ ಚಂದನದಿಂದ ಸುಗಂಧ ಎಡಗಿತ್ತು. ಆ ಸುಗಂಧಕ್ಕೆ ಮೋಹಿಸಿ ಭ್ರಮರಗಳು ಬಂದು ಅಲ್ಲಿ ಎರಗಿದವು. ಆ ಬೇಡತಿಯು ಭ್ರಮರಗಳನ್ನು ನೋಡಿ "ಚಂದನ ಕಟ್ಟಿಗೆಗಳು ಹೊತ್ತಿ ಹೊಗೆಯು ಹೊರಟಿರುವದು" ಎಂದು ಸಂಶಯ ತಾಳಿದಳು.)

ಎಂದು ಕಾಳಿದಾಸನು ಶ್ಲೋಕವನ್ನು ಉಚ್ಚರಿಸಿದನು. ಬಲ್ಲಾಳ ರಾಜನು ಅವನಿಗೆ ಪ್ರತ್ಯಕ್ಷರಕ್ಕೆ ಲಕ್ಷ ಲಕ್ಷದಂತೆ ಮೆಚ್ಚುಗೆ ನೀಡಿದನು.

——————

## [೩೦]

ಕಾಳಿದಾಸನು ಬಲ್ಲಾಳ ರಾಜನಲ್ಲಿ ಆಶ್ರಯಗೊಂಡಿರುವಾಗ ಆ ರಾಜನು— "ಸುಕವಿ ಕಾಳಿದಾಸರೇ! ಏಕಶಿಲಾ ನಗರವನ್ನು ವರ್ಣಿಸುವುದು ಎಂದು ಕೇಳಲು ಕಾಳಿದಾಸನು—

"ಅಪಾಂಗ ಪಾತ್ರೈರ ಪ್ರದೇಶ ಪೂರ್ವೈ |
ರೇಣಿ ದೃಶಾಮೇ ಶಿಲಾನಗಯಾಹವಾ ||
ವೀಧೀಷು ವಿಧೀಷು ವಿನಾಪರಾಧಂ |
ಪದೇ ಪದೇ ಶೃಂಖಲಿತಾ ಯುವಾನ: ||"

(ಅರ್ಥ— "ಏಕಶಿಲಾ ನಗರದಲ್ಲಿ ಪ್ರತಿಯೊಂದು ಬೀದಿಯಲ್ಲಿ ಅಲ್ಲಲ್ಲಿ ಸುಸ್ಥಾನಗಳಲ್ಲಿ ಯುವಕರನ್ನು ಏನೊಂದು ಅಪರಾಧವಿಲ್ಲದೆ ಮೃಗಾಕ್ಷಿಯರಂದದ ಸುಂದರಿಯರು ಲಕ್ಷಿಸಿ ತಮ್ಮ ಕಟಾಕ್ಷದಿಂದ ಹೊಡೆ ಹೊಡೆದು ಸಿಗೆದಿಂದ ಬಂಧಿಸಿದರು.)

ಎಂದು ಬಣ್ಣಿಸಿದ ಕೂಡಲೇ ರಾಜನು ಮತ್ತೆ ಅವನಿಗೆ ಪಚ್ಚೆಗೆ ಕೊಟ್ಟನು. ಆ ನಂತರ ಕವಿಯು ಮತ್ತೆ—

"ಅಂಭೋಜ ಪತ್ರಾಯುತ ಲೋಚನಾನಾ—
ಮಂ ಬೋಧಿ ದೀರ್ಘಾಸ್ವಿಹ ದೀರ್ಘಿಕಾಸು ||
ಸಮಾಗತಾನಾಂ ಕುಟಿಲೈರಪಾಂಗೈಃ
ಅನಂಗ ಬಾಣೈಃ ಪ್ರಹತಾಯುವಾನಃ ||

(ಅರ್ಥ— "ಕಮಲದಳದಂತೆ ನೀಳ್ದ ನಯನಗಳುಳ್ಳ ನಾರಿಯರು— ಸಾಗರದ ದೀರ್ಘತೆಗಿಂತಲೂ ದೀರ್ಘಕಾಯರಾದ ಪುರುಷರು ಬರಲು ತಮ್ಮ ಓರೆ ನೋಟದ ಕುಡಿಗಣ್ಣಿನಿಂದ ಚಿತ್ತನೆಂಬ ಮನರೂಪದ ಕಾಮಬಾಣಗಳಿಂದ ಹೊಡೆಯಲು ತರುಣರು. ವ್ಯಥೆಗೊಂಡರು.)

ಈ ಪ್ರಕಾರ ಕಾಳಿದಾಸನು ಶ್ಲೋಕವನ್ನು ಉಚ್ಚರಿಸಲು ಬಲ್ಲಾಳ ರಾಜನು ಮತ್ತೆ ಪ್ರತಿಯಕ್ಷರಕ್ಕೂ ಒಂದೊಂದು ಲಕ್ಷ ವರಹಗಳನ್ನು ಕೊಟ್ಟು ಕವಿಯನ್ನು ಸತ್ಕರಿಸಿದನು.

ಈ ಬಗೆಯಾಗಿ ದಿನಗಳೆಯುತ್ತ ಕಾಳಿದಾಸನು ಆ ಬಲ್ಲಾಳ ರಾಜನ ಆಶ್ರಯದಲ್ಲಿಯೇ ಇರುತ್ತಿದ್ದನು.

——————

# (೩೦)

ಕಾಳಿದಾಸನು ಬಲ್ಲಾಳ ರಾಜನ ಆಶ್ರಯದಲ್ಲಿ ಸ್ಥಿತನಾದ ನಂತರ ಭೋಜರಾಜ ನಗರಕ್ಕೆ ಮಾಘಕವಿಯು ಸಪತ್ನೀಕನಾಗಿ ಬಂದಿಳಿದನು. ರಾಜನಿಂದ ಮನ್ನಣೆ ಪಡೆದು ಆ ವಿದ್ವಾಂಸನು ಅತ್ಯಲ್ಪ ದಿವಸಗಳಲ್ಲಿಯೇ ಇಹಲೋಕ ತ್ಯಾಗ ಮಾಡಿದನು. ಅವನ ಧರ್ಮಪತ್ನಿಯು ಪತಿಯೊಡನೆ ಸಹಗಮನಕ್ಕೆ ತೆರಳಿದಳು. ಭೋಜರಾಜನು ಆ ಮಾಘನ ಮೃತಶರೀರವನ್ನು ನರ್ಮದೆಗೆ ಸಾಗಿಸಿ ತಾನೇ ಪುತ್ರನಂತೆ ಆ ಕವಿಯ ಔರ್ಧ್ವದೇಹಿಕ ಕ್ರಿಯೆಯನ್ನು ಮುಗಿಸಿದನು.

ಹೀಗೆ ಮಾಘಕವಿಯ ವಿಯೋಗ ತನಗಾದುದರಿಂದ ಕಾಳಿದಾಸನು ದೇಶತ್ಯಾಗ ಮಾಡಿ ದೂರಾದುದರಿಂದಲೂ ಹಾಗು ತನ್ನಲ್ಲಿಯ ಪಂಡಿತರೆಲ್ಲರು ಮಹಾಯಾತ್ರೆಗೆ ಹೋದುದರಿಂದಲೂ ಭೋಜರಾಜನ ಜೀವನಕ್ಕೆ ಆಘಾತವಾಗಿ ದಿನದಿನಕ್ಕೆ ಬಹುಳ ಪಕ್ಷದ ಚಂದ್ರನಂತೆ ಕೊರಗಿ ಕಂದಿ ಸೊರಗುತ್ತಿದನು.

ರಾಜನ ಅವಸ್ಥೆಯನ್ನು ನೋಡಿ ಮಂತ್ರಿವರ್ಗದವರೆಲ್ಲರೂ ವಿಚಲಿತರಾಗಿ ಬಹಳೇ ವಿಚಾರಕ್ಕೊಳಗಾದರು. ಅವರು ವಿಚಾರಪರ್ಯಂತದಲ್ಲಿ ಬಲ್ಲಾಳ ದೇಶದಿಂದ ಕಾಳಿದಾಸನನ್ನು ಬರಮಾಡಿಕೊಂಡಿದ್ದರೆ ರಾಜನ ಸ್ಥಿತಿಯು ಸುಧಾರಿಸುವದು ಈ ಪ್ರಕಾರ ನಿಶ್ಚಯಿಸಿ ಅವರೆಲ್ಲರೂ ಕೂಡಿ ಕಾಳಿದಾಸನಿಗೆ ಒಂದು ಪತ್ರವನ್ನು ಬರೆದರು. ಅದನ್ನು ತಮ್ಮೊಳಗಿನ ಒಬ್ಬ ಮಂತ್ರಿಯ ಕೈಯಲ್ಲಿ ಕೊಟ್ಟು ಬಲ್ಲಾಳ ರಾಜನ ಆಶ್ರಿತನಾಗಿದ್ದ ಕಾಳಿದಾಸನ ಕಡೆಗೆ ಕಳಿಸಿದರು. ಆ ಮಂತ್ರಿಯು ಕಾಳಿದಾಸನನ್ನು ಕಂಡು— "ಕವಿವರ! ರಾಜನೂ ಮಂತ್ರಿಶ್ರೇಷ್ಠರೂ ಕೂಡಿ ಬರೆದು ಕಳಿಸಿದ ಪತ್ರವಿದು ಸ್ವೀಕರಿಸಬೇಕು ಎಂದು ಆ ಪತ್ರವನ್ನು ಓದುತ್ತಾಳೆ!

"[illegible]ವತಿ ಸಭವತಿ ಚಿರಂಭವತಿ ಚಿರಂ ಚೇತಸೋ ವಿಸಂವಾದೀ |
[illegible] ಪ್ರಾಣಾಃ ಸ್ನೇಹೇನ ನೀಚಾನಾವ್ ||

ಸಹಕಾರೇ ಚಿರಂಸ್ಥಿತ್ವಾ ಸಲಿಲಂ ಬಾಲಕೋಕಿಲ |
ತಂ ಹಿತೋದ್ಯಾನ ವೃಕ್ಷೇಷು ವಿಚರನ್ನ ವಿಲಜ್ಜಸೇ ||
ಕಲಕಂಠ ಯಥಾ ಶೋಭಾ ಸಹಕಾರೇ ಭವದ್ಗಿರಃ |
ಖದಿರೇ ವಾ ಪಲಾಶೇ ವಾ ಕಿಂ ತಥಾ ಸ್ಯಾದ್ವಿಚಾರಯ ||

(ಅರ್ಥ-ಮೊಟ್ಟ ಮೊದಲು ಸಜ್ಜನರಿಗೆ ಸಿಟ್ಟು ದುರ್ಜನರಿಗೆ ಪ್ರೀತಿಯೂ ಹುಟ್ಟುವದಿಲ್ಲ. ಒಂದು ವೇಳೆ ಉತ್ಪನ್ನವಾದರೂ ಅದು ದೀರ್ಘ ಕಾಲದವರೆಗೂ ಉಳಿಯಲಾರದು. ಆ ಸಜ್ಜನರ ಸಿಟ್ಟು ದುರ್ಜನರ ಸ್ನೇಹವೂ ಸಮಾನವಾಗಿ ದೀರ್ಘಕಾಲವಿದ್ದರೆ ಅವುಗಳ ಫಲಗಳಲ್ಲಿ ಭಿನ್ನತೆಯುಂಟಾಗುವದು ಅರ್ಥಾತ್ ಸಜ್ಜನರ ಕ್ರೋಧದ ಫಲವು ಉತ್ತಮವೂ ದುರ್ಜನರ ಸ್ನೇಹದ ಫಲವು ಅರಿಷ್ಟಕರವೂ ಆಗುವದು.

"ಎಲೈ ಬಾಲಕೋಕಿಲವೆ! ನೀನು ಲೀಲೆಯಿಂದ ಮಾಮರದ ಮೇಲೆ ದೀರ್ಘ ಕಾಲದವರೆಗೆ ವಾಸವಾಗಿದ್ದಿ. ಈಗ ನೀನು ಆ ಮಾವಿನ ಮರವನ್ನು ಬಿಟ್ಟು ಬೇರೆ ಮರದ ಮೇಲೆ ಇರುವದಕ್ಕೆ ನಿನಗೆ ಲಜ್ಜೆ ಎನಿಸುವದಿಲ್ಲವೇ?

"ಎಲೈ ಮಧುರ ಕಂಠವುಳ್ಳ ಕೋಗಿಲೆಯೆ! ಸುಗಂಧ ಬೀರುವ ಮಾಮರದ ಮೇಲೆ ನೀನು ಇರುವಾಗ ನಿನ್ನ ವಾಣಿಯು ಶೋಭೆಗೊಳ್ಳುತ್ತಿದ್ದಂತೆ ನೀನು ತರೇದ ಅಥವಾ ಮುತ್ತಲ ಗಿಡದಲ್ಲಿ ವಾಸವಾದ್ದರೆ ಆ ನಿನ್ನ ವಾಣಿಯು ಶೋಭಿಸುವದೇ?

ಇಂತಿರುವ ಪತ್ರವನ್ನು ಓದಿದನು. ಮರುದಿನ ಬಲ್ಲಾಳ ರಾಜನ ಅಪ್ಪಣೆ ಪಡೆದು ಮಾಳವ ದೇಶಕ್ಕೆ ಬಂದನು. ಧಾರಾನಗರದಲ್ಲಿ ರಾಜ ಕ್ರಿಡೋದ್ಯಾನದಲ್ಲಿ ಇಳಿದನು. ಕಾಳಿದಾಸನು ಬಂದುದನ್ನು ಕೇಳಿ ಭೋಜರಾಜನು ತಾನೇ ತನ್ನ ಪರಿವಾರದೊಂದಿಗೆ ಅಲ್ಲಿಗೆ ಹೋಗಿ ಸನ್ಮಾನ ಪೂರ್ವಕವಾಗಿ ಅವನನು ಸ್ವಾಗತಿಸಿ ಕರೆತಂದನು.

ಆ ನಂತರ ಮುನ್ನಿನಂತೆ ದಿನದಿನವೂ ಭೋಜರಾಜನ ಸಭೆಯು ವಿದ್ವನ್ಮಂಡಲದಿಂದ ಪರಿಶೋಭಿಸಹತ್ತಿತು.

[೩೭]

ಆ ಬಳಿಕ ಒಂದು ದಿವಸ ಭೋಜರಾಜನು ಚಾವರ ಬೀಸುವ ವೇಶ್ಯೆಯನ್ನು ನೋಡಿ ಕಾಳಿದಾಸನನ್ನು ಕುರಿತು—

"ಸುಕವಿ ಕಾಳಿದಾಸನೆ! ಈ ವೇಶ್ಯೆಯನ್ನು ಮನರಂಜಿತವಾಗುವಂತೆ ವರ್ಣಿಸಬೇಕು" ಎಂದು ಹೇಳಲು ಕಾಳಿದಾಸನು—

"ಕಚಭಾರತ್ ಕುಚಭಾರಃ ಕುಚಭಾರತ್ ಭಾತಿ ಕಚ ಭಾರಃ |
ಕಚ ಕುಚಭಾರಾತ್ ಜಘನಂ ಕೋಯಂ ಚಂದ್ರಾನನೇ
ಚಮತ್ಕಾರಃ ||

(ಅರ್ಥ— ಎಲೈ ಇಂದುಮುಖಿಯೇ! ನಿನ್ನ ಹೆಳಲಿನ ಭಾರದಿಂದ ಸ್ತನಗಳ ಭಾರವು. ಸ್ತನಭಾರದಿಂದ ಹೆಳಲಿನ ಭಾರವು. ಹಾಗೂ ಇವೆರಡುಗಳ ಭಾರದಿಂದ ನಿನ್ನ ಜಘನಸ್ಥಲ (ಕಿಗ)ವು ಭಯಭೀತಿಗೊಳ್ಳುವವು. ಅಂದ ಮೇಲೆ ಇದೆಂಥ ಚಮತ್ಕಾರವು)

ಈ ಪ್ರಕಾರ ಬಣ್ಣಿಸುವದನ್ನು ಕೇಳಿ ಭೋಜರಾಜನು ಸಂತುಷ್ಟನಾಗಿ ತಾನೂ ಆ ವೇಶ್ಯೆಯನ್ನು ನಿರೀಕ್ಷಿಸಿ--

"ವದನಾತ್ ಪದಯುಗಲೀಯಂ
ವಚನಾದಧರಶ್ಚ ದಂತ ಪಂಕ್ತಿಶ್ಚ |
ಕಚತಃ ಕುಚಿಯುಗಲೀಯಂ
ಲೋಚನ ಯುಗಲಂ ಚ ಮಧ್ಯತಸ್ತ್ರಸತಿ ||

(ಅರ್ಥ- ಈ ವೇಶ್ಯೆಯಳ ಚರಣಗಳು ಮುಖದಿಂದಲೂ ತುಟಿ ಹಾಗು ದಂತ ಪಂಕ್ತಿ ಈಕೆಯ ಮಾತಿನಿಂದಲೂ ಕುಚಗಳು ಹೆಳಲಿನಿಂದಲೂ ಮತ್ತು ಕಣ್ಣುಗಳು ಈಕೆಯ ನಡುವಿನಿಂದಲೂ ಭಯಗೊಳ್ಳುತ್ತಿರುವವು )

ಈ ಪ್ರಕಾರ ವರ್ಣಿಸಿದನು.

## (೩೩)

ಒಂದಾನೊಂದು ಗ್ರೀಷ್ಮಕಾಲದಲ್ಲಿ ಭೋಜರಾಜನು ಅಂತಃಪುರದಲ್ಲಿ ವಿಹರಿಸಿ ಆಲಿಂಗನಾದಿ ಕ್ರಿಯಾರತನಾಗಿದ್ದನು ಬೆವರು ಬೇಗೆಯಿಂದ ತತನಾದನು. ಸರಸಸಲ್ಲಾಪಾದಿ ಉಪಚಾರಗಳನ್ನು ಅನುಭವಿಸಿದನು. ಆ ನಂತರ ಗಾಢನಿದ್ರೆಗೊಳಗಾದನು. ಒಳಿಕ ಬೆಳಗಿನ ಜಾವದಲ್ಲಿ ನಿದ್ರೆ ತಿಳಿದೆದ್ದು ಪ್ರಾತರ್ವಿಧಿಗಳನ್ನೆಲ್ಲ ಮುಗಿಸಿದನು. ನಂತರ ಹಾಗೇ ಸಭೆ ಪ್ರವೇಶಿಸಿ ಕುತೂಹಲದಿಂದ—

"ಮರುದಾಗಮ ವಾರ್ತಯಾಪಿ ಶೂನ್ಯಃ
ಸಮಯೇ ಜಾಗ್ರತಿ ಸಂಪ್ರವೃದ್ಧ ಏವ"

ಎಂದು ಉಚ್ಚರಿಸಿದನು. ಅಲ್ಲಿರುವ ಪಂಡಿತರಲ್ಲಿ ಶ್ರೇಷ್ಠನಾದ ಭವಭೂತಿಯು ರಾಜನ ಮೇಲಿನ ಶ್ಲೋಕದ ಎರಡೂ ಚರಣಗಳನ್ನು ಸೇರಿಸಿ ಅದರ ಭಾವವನ್ನು ಪ್ರಕಟಿಸುವದಕ್ಕೆ—

ಉರಗೀ ಶಿಶವೇ ಬುಭುಕ್ಷವೇ ಸಾ—
ಮದಿಶತ್ ಫೂತ್ಕೃತಿ ಮಾನನಾನಿತೀನ |
ಮರುದಾಗಮ ವಾರ್ತಯಾಪಿ ಶೂನ್ಯಂ
ಸಮಯೇ ಜಾಗ್ರತಿ ಸಂಪವೃದ್ಧ ಏವ"

(ಅರ್ಥ- ಸರ್ಪಿಣಿಯು ಬುಭುಕ್ಷಿತವಾದ ತನ್ನ ಶಿಶುವಿಗೆ ತನ್ನ ಮುಖದಿಂದ ಊದಿ ಫೂತ್ಕಾರವನ್ನು ಮಾಡಿತು. ಇಂಥ ಪ್ರಬಲ ಸಮಯದಲ್ಲಿಯೂ ಕೂಡ ಹವೆಯು ಸಂಚಲದ ಸುದ್ದಿಯೇ ಇದ್ದಿರಲಿಲ್ಲ)

ಎಂಬುದಾಗಿ ಶ್ಲೋಕ ಪಠಿಸಲು ಅದನ್ನು ಕೇಳಿ ಭೋಜರಾಜನು — "ಕವಿಶ್ರೇಷ್ಠ ಭವಭೂತಿಯೇ! ಈ ಲೋಕೋಕ್ತಿಯು ಚನ್ನಾಗಿ ಇರುವದು" ಎಂದು ಸನ್ಮಾನಿತ ನುಡಿಯನ್ನಾಡಿ ತನ್ನ ದೃಷ್ಟಿ ಹೊರಳಿಸಿ ಕಾಳಿದಾಸನನ್ನು ಕಂಡನು. ಕಾಳಿದಾಸನು ರಾಜನ ಇಂಗಿತವನ್ನರಿತುಕೊಂಡನು. ಆಗ ಕಾಳಿದಾಸನು—

"ಅಬಲಾಸು ವಿಲಾಸಿನೋನ್ವ ಭೂವ
ನ್ನಯನೈದೇವ ನಪೋಷು ಗೂಹನಾನಿ |
"ಮರುದಾಗಮ ವಾರ್ತಯಾಪಿ ||

(ಅರ್ಥ- ಇಂಥ ಪ್ರಬಲ ಸಮಯದಲ್ಲಿ ವಾಯು ಸಂಚಲನದ ವಾರ್ತೆಯೇ ಇಲ್ಲದಿರುವಾಗ ವಿಲಾಸಿಯಾದ ವಾಯು ಆಲಿಂಗನಾದಿಗಳಲ್ಲಿ ಘರ್ಷಣೆಂಟಾಗುವದೆಂದು ತಿಳಿದು ಕೇವಲ ತನ್ನ ನಯನಗಳಿಂದ ಕಾಮಿನಿಯನ್ನು ನಿರೀಕ್ಷಿಸುವದರಲ್ಲಿಯೇ ಹರುಷವನ್ನು ತಾಳಿದನು.

ಎಂದು ಉಚ್ಚರಿಸಲು ರಾಜನು ತನ್ನ ಅಭಿಪ್ರಾಯವನ್ನು ತಿಳಿದು ಸಂತುಷ್ಟತೆ ಹೊಂದಿದನು. ಹಾಗು ಕಾಳಿದಾಸನು ವಿಶಿಷ್ಟ ಪ್ರಕಾರದಿಂದ ಸನ್ಮಾನಿತನಾದನು.

(೩೪)

ಒಂದು ಸಾರೆ ಭೋಜರಾಜನು ತನ್ನ ನಗರದಲ್ಲಿ ಗುಪ್ತವೇಷದಿಂದ ಸಂಚರಿಸುತ್ತ ಮಧ್ಯಾಹ್ನದಲ್ಲಿ ಒಬ್ಬ ಮುದಿ ಹಾರವನ ಮನೆಯ ಹತ್ತಿರ ಹೋದನು. ಆ ಮನೆಯ ಬಾಹ್ಯ ಪ್ರದೇಶದ ಒಂದೆಡೆಯಲ್ಲಿ ನಿಂತನು. ಆಗ ಆ ಮನೆಯಲ್ಲಿಂದ ಬ್ರಾಹ್ಮಣನು ವೈಶ್ವ ದೇದ ಕ್ರಿಯೆಯನ್ನು ಮುಗಿಸಿ ಕಾಗೆ ಬಲಿಯಲ್ಲಿ ತಕ್ಕೊಂಡು ಅಂಗಳಕ್ಕೆ ಬಂದನು. ಅಲ್ಲಿ ಒಂದು ಸ್ಥಾನವನ್ನು ನೀರಿನಿಂದ ಶುದ್ಧಿಕರಿಸಿ ಆ ಕಾಕ ಬಲಿಯನ್ನಿಟ್ಟನು. ಕಾಗೆಗಳು ಕಾಣದ್ದರಿಂದ ಹಾ ಹೂ ಎಂದೊದರುತ್ತ ಚಪ್ಪಾಳೆ ತಟ್ಟಿ ಕಾಗೆಗಳನ್ನು ಕರೆಯ ಹತ್ತಿದನು. ಅಷ್ಟರಲ್ಲಿಯೇ ಒಂದು ಕಾಗೆಯು ಕಂಡುಬಂದಿತು. ಬಲಿಯನ್ನು ಕಂಡು ಕಾವ್ ಕಾವ್ ಎಂದು ಎಲ್ಲ ಕಾಗೆಗಳು ಒಂದೇಸವನೇ ಕೀಸರಿಟ್ಟವು. ಅವುಗಳ ಆ ಕರ್ಕಶ ಧ್ವನಿಯನ್ನು ಕೇಳಿ ಅಲ್ಲಿಯೇ ನಿಂತಿದ್ದ ಆ ವೃದ್ಧನ ತರುಣ ಪತ್ನಿಯು ಅಂಜಿದಳು. ಆಗ ಅವಳು "ಅಯ್ಯೋ ಅವ್ವಾ" ಎಂದು ಭಯದಿಂದೊದರಿ ಒಳಕ್ಕೆ ಓಡಿಹೋಗಹತ್ತಿದಳು. ಬ್ರಾಹ್ಮಣನು ಆಕೆಯನ್ನು ಕರೆದು__ "ಪ್ರಿಯೆ! ಶೀಲವತಿ ! ಬೆದರುತ್ತಿರುವಿ ?" ಎಂದ್ದ

ಕೇಳಲು ಆಕೆಳು_ "ನಾಥ! ನನ್ನಂಥ ಪತಿವ್ರತೆಯರಿಗೆ ಕ್ರೂರ ಕರ್ಕಶ ಧ್ವನಿ ಶ್ರವಣವು ಅಸಹ್ಯವು" ಎಂದಳು ಅದಕ್ಕೆ ಆ ಬ್ರಾಹ್ಮಣನು_ "ಸಾಧ್ವಿಯೇ! ನೀನು ಹೇಳುವದು ನಿಜ" ಎಂದು ಮರುಮಾತಾಡಿದನು.

ಒಂದೆಡೆಯಲ್ಲಿ ನಿಂತ ರಾಜನು ಇದೆಲ್ಲ ಸಮಯ ನಿರೀಕ್ಷಿಸಿದನು. ಅವನು ತನ್ನಲ್ಲಿ_ "ಆಹಾ ಕಾಗೆಯ ಧ್ವನಿಗೆ ಬೆದರಿ ಒದರಿ ಭಯ ನಟನೆಯನ್ನು ಪತಿಯೆದುರು ವ್ಯಕ್ತಪಡಿಸಿದ ಸ್ತ್ರೀಯಳು ನಿಜವಾಗಿಯೂ ದುಶ್ಶೀಲೆ ದುಷ್ಕ್ರಿಯಾಪ್ರವೃತ್ತಿಯವಳಾಗಿರಬೇಕು. ಯಾಕಂದರೆ ನಿರ್ನಿಮಿತ್ತವಾಗಿ ಈಕೆ ತಾನು ಅಂಜಿದ ಭಾವವನ್ನು ಪ್ರಕಟಿಸುವಳು ಹಾಗು ತಾನು ಪತಿವ್ರತೆಯೆಂದು ತಾನೇ ಪತಿಯೆದುರು ಹೇಳಿಕೊಳ್ಳುತ್ತಿರುವಳು. ನಿಜವಾಗಿಯೂ ಈಕೆ ಭೀತಿಯಿಲ್ಲದೆ ದುಷ್ಟ ವ್ಯವಹಾರದಲ್ಲಿ ವ್ಯವಹರಿಸುವ ದುಸ್ತ್ರೀಯಳೇ ಆಗಿರುವಳು" ಎಂಬುದಾಗಿ ರಾಜನು ಮನಗಂಡನು. ಇಷ್ಟೇ ಅಲ್ಲ ಈಕೆಯ ನೈಜಚರಿತ್ರೆಯನ್ನು ಪರೀಕ್ಷಿಸಿಯೇ ಬಿಡಬೇಕೆಂದು ನಿರ್ಧರಿಸಿ ಆಗಲೇ ಅಲ್ಲಿಂದ ಹಿಂದಿರುಗಿ ತನ್ನ ಅರಮನೆಗೆ ಬಂದನು.

ಅದೇ ದಿನದ ರಾತ್ರಿಯ ದ್ವಿತೀಯ ಯಾಮದಲ್ಲಿ ರಾಜನು ಮತ್ತೆಗುಪ್ತ ವೇಷದಿಂದ ಅದೇ ಬ್ರಾಹ್ಮಣನ ಮನೆಯ ಹತ್ತಿರ ಬಂದನು. ಒಂದೆಡೆಗೆ ತಾನು ಯಾರಿಗೂ ಕಾಣಿಸದಂತೆ ನಿಂತನು. ಮುಂದೆ ಕೆಲ ನಿಮಿಷಗಳಲ್ಲಿಯೇ ಆ ಮುದಿ ಹಾರವನ ಹೆಂಡತಿಯು ತನ್ನ ಗಂಡನು ಗಾಢ ನಿದ್ರೆಗೊಳಗಾದುದನ್ನು ತಿಳಿದಳು. ಹಾಗೂ ಆಗಲೇ ಅವಳು ಮಾಂಸ ತುಂಬಿದ ಪೆಟ್ಟಿಗೆಯೊಂದನ್ನು ತನ್ನ ದಾಸಿಯ ಮೇಲೆ ಹೊರಿಸಿಕೊಂಡು ಆ ಭೀಕರ ರಾತ್ರಿಯಲ್ಲಿಯೇ ಮನೆಯಿಂದ ಹೊರಬಿದ್ದಳು. ನರ್ಮದಾ ನದಿಯ ತೀರಕ್ಕೆ ಬಂದಳು.

ರಾಜನಾದರೂ ಇದೆಲ್ಲವನ್ನು ಕೊನೆಯ ವರೆಗೂ ಚನ್ನಾಗಿ ನಿರೀಕ್ಷಿಸುವ ನಿರ್ಧಾರಣೆಯಿಂದ ಆ ಬ್ರಾಹ್ಮಣನ ಹೆಂಡತಿ ಹಾಗೂ ಅವಳ ದಾಸಿಯ ಇವರನ್ನು ಬೆಂಬಲಿಸಿ ಕಳ್ಳ ಹೆಜ್ಜೆ ಹಾಕುತ್ತಾ ಅವನೂ ತೀರಕ್ಕೆ ಬಂದು ಒಂದೆಡೆ ನಿಂತನು.

ಆ ಬಳಿಕ ಬ್ರಾಹ್ಮಣನ ಪತ್ನಿಯು ನದಿಯ ಪ್ರವಾಹದಲ್ಲಿ ಸೇರಿಮುಂದೆ ಆಚೆಯ ತೀರಕ್ಕೆ ಸಾಗುವದಕ್ಕಾರಂಭಿಸಿದಳು. ಪ್ರವಾಹದಲ್ಲಿ ತನ್ನ ಕಡೆಗೆ ಬರುತ್ತಿರುವ ಮೊಸಳೆಗಳಿಗೆ ಮನೆಯಿಂದ ತಂದಿದ್ದ ಮಾಂಸದ ಕರಣೆಗಳನ್ನು ಚಲ್ಲುತ್ತ ಚಲ್ಲುತ್ತ ಮುನ್ನಡೆದು ನದಿಯಾಚೆಗೆ ಹೋದಳು. ರಾಜನು ಇದನ್ನು ನೋಡಿದನು.

ಆ ಸ್ತ್ರೀಯು ನದಿಯಾಚೆಗೆ ಹೋಗುವಷ್ಟರಲ್ಲಿಯೇ ಅವಳಿಗಾಗಿ ಹಾದಿ ಕಾಯುತ್ತಿದ್ದ ಆಕೆಯ ವಿಟಪುರುಷನು ಅಲ್ಲಿ ಬೆಳೆದ ಹುಲ್ಲಿನ ಮೇಲೆ ಕುಳಿತಿದ್ದನು. ಬ್ರಾಹ್ಮಣ ಸ್ತ್ರೀಯು ಕೂಡಲೇ ಅವನನ್ನಾಲಂಗಿಸಿ ಅವನೊಡನೆ ರಮಿಸಿ ಹಿಂದಿರುಗಿದಳು. ಹೋದ ಮಾರ್ಗದಿಂದಲೇ ಹಿಂದಿರುಗಿ ಟಕಮಕ ನೋಡುತ್ತ ಮನೆ ಸೇರಿದಳು. ಮುದಿಗಂಡನು ನಿದ್ದೆಯಿಂದ ಎಚ್ಚರಾಗುವದರೊಳಗೇ ಆ ದುಷ್ಟ ಸ್ತ್ರೀಯು ಇಷ್ಟೆಲ್ಲಿ ಕ್ರಿಯೆ ಮಾಡಿದಳು.

ರಾಜನು ಆ ಸ್ತ್ರೀಯಳ ಚರಿತ್ರೆಯನ್ನೆಲ್ಲ ಕಂಡು ಮನೋವ್ಯಗ್ರತೆಯಿಂದ ಹಿಂದಿರುಗಿ ಬಂದು ಅರಮನೆ ಸೇರಿದನು.

ಮರುದಿನ ಬೆಳಗಿನ ತನ್ನ ಸಭೆಯಲ್ಲಿ ಭೋಜರಾಜನು ಕಾಳಿದಾಸನನ್ನು ಕುರಿತು—"ಕವಿವರನೆ !

ದಿವಾಕಾಕರವಾತ್ ಭೀತಾ"

(ಅರ್ಥ–ಹಗಲಿನಲ್ಲಿ ಆಕೆಗೆ ಕಾಗೆಯ ಒದರುವಿಕೆಯ ಶಬ್ದದಿಂದ ಭಯವಾಗುವದು)

ಎಂದೆನಲು ಕಾಳಿದಾಸನು–

"ರಾತ್ರಾತರತಿ ನರ್ಮದಾಮ್"

(ಅರ್ಥ- ರಾತ್ರಿಯಲ್ಲಿ ನರ್ಮದೆಯನ್ನು ದಾಟುವಳು)

ಎಂದು ಹೇಳಲು ರಾಜನು ಸಂತುಷ್ಟನಾಗಿ ಮತ್ತೆ—

"ತಂತ್ರ ಸಂತಿ ಜಲೀಗ್ರಾಹಾಃ"

(ಅರ್ಥ— ಆ ನದಿಯಲ್ಲಿ ಮೊಸಳೆಗಳಿರುವವು)

ಎಂದೆನಲು ಕವಿವರ್ಯನು

"ಮರ್ಮಜ್ಞಾ ಸೈವ ಸುಂದರೀ "
(ಅರ್ಥ— ಆ ಸುಂದರಿಯು ಮರ್ಮಜ್ಞಳು)
ಈ ಪ್ರಕಾರ ಕಾಳಿದಾಸನು ಉಚ್ಚರಿಸಿದ ಕೂಡಲೇ ಭೋಜರಾಜನು ಮುಂದರಿಂದು ಬಂದು ಆ ಕವಿಗೆ ನಮಸ್ಕರಿಸಿದನು.

[೩೫]

ಒಂದು ಬಾರಿ ಭೋಜರಾಜನು ಧಾರಾ ನಗರದ ಮನ್ಮಥ ಬೀದಿಯಲ್ಲಿ ಸಹಜವಾಗಿ ಸಂಚರಿಸುತ್ತ ಸಾಗಿದ್ದನು. ಆ ಬೀದಿಯಲ್ಲಿ ಯಾವಳೋ ಒಬ್ಬ ಸುಂದರಿಯು ಚಂಡಿನಾಟವಾಡುತ್ತ ಅದೇ ಸಂಭ್ರಮದಲ್ಲಿ ಅತ್ತಿತ್ತ ಓಡಾಡುತ್ತಿದ್ದಳು. ಆಕೆಯು ಆ ಭ್ರಮಣವೇಗದಲ್ಲಿ ಅವಳು ಮಾರ್ಗದಲ್ಲಿ ಬರುವವರಾರನ್ನೂ ನೋಡುತ್ತಿರಲಿಲ್ಲ. ಹೀಗೆ ಓಡಾಡುತ್ತ ಬೀದಿಯಲ್ಲಿ ಬರುತ್ತಿದ್ದ ರಾಜನನ್ನು ನೋಡದೇ ಒಮ್ಮೆಲೇ ಕೆಳಕ್ಕೆ ಬಿದ್ದಳು. ಆದರೆ ಅವಳ ಬೀಳುವಿಕೆ ನೆಲದ ಮೇಲಾಗಲಿಲ್ಲ. ಎದುರಿನಿಂದ ಬರುತ್ತಿದ್ದ ರಾಜನ ಪಾದಗಳ ಮೇಲಾಯಿತು. ಅನಾಯಾಸವಾಗಿ ಅವಳಿಗೆ ರಾಜನ ಪಾದಗಳಿಗೆ ಹಣೆ ಹಚ್ಚಿ ನಮಸ್ಕರಿಸುವ ಯೋಗವು ಇಚ್ಛೆಯಿಲ್ಲದೆ ಒದಗಿತು.

ರಾಜನು ಹಾಗೇ ಮುಂದ ಸಾಗಿ ಮನೆಗೆ ಹೋದನು. ಮರುದಿನದ ಸಭೆಯಲ್ಲಿ ಮಿಲಿತರಾಗಿದ್ದ ಪಂಡಿತರನ್ನು ಕುರಿತು ಭೋಜರಾಜನು—

"ವಿದ್ವಾಂಸ ಕವಿಗಳೇ! ಚೆಂಡನ್ನು ಚೆನ್ನಾದ ರೀತಿಯಲ್ಲಿ ಬಣ್ಣಿಸಿರಿ ಎಂದು ಹೇಳಿದ ಕೂಡಲೇ ಭವಭೂತಿ ಕವಿಯು ಎದ್ದು ನಿಂತು—

"ವಿದಿತಂ ನನುಕಂದುಕ ತೇಹೃದಯಂ
ಪ್ರಮದಾಧರ ಸಂಗಮಲುಬ್ಧ ಇವ।
ವನಿತಾಕರ ತಾಮರಸಾಭಿಹತಃ
ಪತಿತಃ ಪತಿತಃ ಪುನರುತ್ಪತಸಿ ॥

(ಅರ್ಥ— ಎಲೈ ಪುಟಚಂಡೇ! ನಿನ್ನ ಇಂಗಿತವನ್ನು ಅರಿತಿರುವೆನು ಏನೆಂದರೆ——ನೀನು ಸ್ತ್ರೀಯರ ಅಧರಾಮೃತ ಸವಿಯು ಇಚ್ಛೆಯುಳ್ಳ

ವನ ಹಾಗೆ ಆ ಸ್ತ್ರೀಯಳ ಕರಕಮಲದಿಂದ ಪುಟಿ ಪುಟಿದು ಗರಗರನೆ ತಿರು ತಿರುಗಿ ಮೇಲಕ್ಕೆ ಹಾರುವಿಯಲ್ಲವೇ ?)

ಆ ಬಳಿಕ ಮರುಚಿಯು—

ಏಕೋಪಿ ತ್ರಯ ಅವಭಾತಿ ಕಂದುಕೋಯಂ
ಕಾಂತಾಯಾಃ ಕರತಲರಾಗರಕ್ತ ರಕ್ತಃ |
ಭೂಮೌ ತಚ್ಚರಣ ನಖಾಂಶು ಗೌರ ಗೌರಃ
ಸ್ವಸ್ಥಃ ನನ್ನಯನವರೀಚಿ ನೀಲ ನೀಲಃ ||

(ಅರ್ಥ—"ಈ ಒಂದೇ ಚೆಂಡು ಮೂರು ಪ್ರಕಾರಗಳಿಂದ ತೋರುವದು. ಹೇಗೆಂದರೆ- ಸ್ತ್ರೀಯಳ ಕೈಸೇರಿ ಅವಳ ಕೈಗೆಂಪಿನಿಂದ ಕೆಂಪು ಬಣ್ಣದ್ದಾಗಿಯೂ, ನೆಲಕ್ಕುರುಳಿದ ಆಕೆಯ ಪಾದ ನಖಾಭರಣಗಳಿಂದ ಬಿಳಿ ಬಣ್ಣದ್ದಾಗಿಯೂ, ಹಾಗೂ ಮೇಲಕ್ಕೆ ಪುಟಿದು ಆಕೆಯ ಕಣ್ನೋಟದ ಮೂಲಕ ನೀಲಿ ನೀಲಿ ವರ್ಣದ್ದಾಗಿಯೂ ಕಂಡುಬರುವದು.

ಆಗ ಕಾಳಿದಾಸನು ತನ್ನನ್ನು ಎಲ್ಲರೂ ನಿರೀಕ್ಷಿಸುತ್ತಿರುವಾಗ-

ಪಯೋಧರಾಕಾರಧರೋ ಹಿ ಕಂದುಕಃ
ಕರೇಣ ರೋಷಾದಭಿಹನ್ಯತೇ ಮುಹುಃ |
ಇತೀವ ನೇತ್ರಾಕೃತಿ ಭೀತ ಮುತ್ಪಲಂ
ಸ್ತ್ರೀಯಃ ಪ್ರಸಾದಾಯ ಪ್ರಪಾತ ಪಾದಯೋಃ ||

(ಅರ್ಥ—"ಈ ಚೆಂಡು ಸ್ತ್ರೀಯಳ ಕುಚದಂತೆ ಗೋಲಾಕೃತಿಯಾಗಿರುವದು. ಇದನ್ನು ಸಿಟ್ಟಿನಿಂದ ತೂರಿ ಒಗೆಯಲು ಇದು ಕಾಲ ಮೇಲೆ ಬೀಳುವದು. ಇದನ್ನು ನೋಡಿ ಆ ಕ್ರಿಯೆಯಿಂದ ಬೆದರಿದ ಕಮಲವು ಆ ಸ್ತ್ರೀಯಳನ್ನು ಸಂತುಷ್ಟಗೊಳಿಸುವದಕ್ಕೆ ಅವಳ ಕಾಲಿಗೆ ಎರಗುವದು.)

ಈ ಪ್ರಕಾರ ಮೂವರು ಮುಖ್ಯ ಪಂಡಿತರು ವರ್ಣಿಸಿದರು. ರಾಜನಿಗೆ ಅತೀವ ಸಂತೋಷ ! ಮೂವರನ್ನೂ ಸನ್ಮಾನಿಸಿದನು. ಕಾಳಿದಾಸನು ಅದ್ವಿತೀಯನೆಂದು ವಿಶಿಷ್ಟವಾಗಿ ಹೊಗಳಿದನು.

§ § ००० § §

# [೨೬]

ಒಂದು ದಿನ ಭೋಜರಾಜನು ತನ್ನ ಅಂತರ್ಗೃಹ ಪ್ರವೇಶ ಮಾಡಿದನು ಅಲ್ಲಿ ಅವನ ನಾಲ್ವರು ಹೆಂಡಂದಿರು ಅವನೊಡನೆ ಭೋಗ ಸ್ವೀಕರಿಸುವದಕ್ಕೆ ಆತುರರಾಗಿ ತಮ್ಮ ತಮ್ಮ ಮಂದಿರಗಳಲ್ಲಿ ಕುಳಿತು ರಾಜನು ಬರುವ ಮಾರ್ಗ ಪ್ರತೀಕ್ಷೆ ಮಾಡುತ್ತಿದ್ದರು. ಅವರಲ್ಲಿ ಒಬ್ಬಳು ಕುಂತಲೇಶನ ಮಗಳು ಪದ್ಮಾವತಿಯು ಆ ದಿನವೇ ಅವಳು ಋತುಸ್ನಾತೆಯಾಗಿದ್ದವಳು ಎರಡನೆಯವಳು ಅಂಗರಾಜನ ಪುತ್ರಿ ಚಂದ್ರಮತಿಯೆಂಬಾಕೆಯು ಅಂದಿನ ದಿನ ರಾಜನೊಡನೆ ಭೋಗ ಸ್ವೀಕರಿಸುವ ಸರತಿಯು ಅವಳದಾಗಿದ್ದಿತ್ತು. ಮೂರನೆಯವಳು "ಕಮಲೆ" ಎಂಬ ಹೆಸರಿನ ಪತ್ನಿಯು ಆಕೆ ಪತಿಯೊಡನೆ ಪಗಡಿಯಾಡಿ ಜಯ ಪಡೆದು ಅಂದಿನಿಂದ ರಾಜನನ್ನು ತನ್ನ ಅಂಕೆಗೆ ಒಳ ಪಡಿಸಿಕೊಂಡವಳು. ಇನ್ನು ನಾಲ್ಕನೆಯವಳು ಪಟ್ಟದರಾಣಿ ಲೀಲಾವತಿಯು. ಆಕೆ ತನ್ನ ದೂತಿಯ ಮುಖಾಂತರ "ಈ ದಿನದ ರಾತ್ರಿ ವಿಲಾಸ ಭೋಗಸುಖ ನೀಡುವದಕ್ಕೆ ತಪ್ಪದೆ ನೀವು ಬರಲಿಕ್ಕೇಬೇಕು" ಎಂದು ಪತಿಗೆ ಸಂದೇಶವನ್ನು ಕಳಿಸಿದ್ದಳು.

ಈ ಪ್ರಕಾರ ಮೇಲಿನ ನಾಲ್ವರೂ ಸತಿಯರ ವಚನ ಬದ್ಧನಾದ ರಾಜನು "ಇಂದಿನಿಂದ ಅದಾವ ಮಂದಿರ ಪ್ರವೇಶ ಮಾಡಲಿ?" ಎಂಬ ಆಲೋಚನೆ ಮಾಡುತ್ತ ತನ್ನ ಸ್ವತಂತ್ರ ಮಂದಿರದಲ್ಲಿ ಒಬ್ಬನೇ ಕುಳಿತನು. ಪೂರ್ವ ರಾತ್ರಿ ಮುಗಿಯುವ ವರೆಗೂ ಏಕಾಕಿಯಾಗಿ ಧರ್ಮಾಧರ್ಮ, ಯೋಗ್ಯಾಯೋಗ್ಯ, ಪಾಪ-ಪುಣ್ಯ ಇವುಗಳನ್ನು ವಿಚಾರದಲ್ಲಿ ತಂದುಕೊಂಡು ಯೋಚನೆ ನಡೆಸಿದನು. ಬಹಳ ರಾತ್ರಿಯ ವರೆಗೂ "ಯಾವಳ ಮಂದಿರಕ್ಕೆ ಹೋಗುವದು ಒಳಿತು" ಎಂಬುದರ ಬಗೆಗೆ ಅವನ ಆತ್ಮವು ಏನೊಂದೂ ನಿರ್ಣಯವನ್ನು ನಿಶ್ಚಯಿಸಲಿಲ್ಲ. ಅವನ ನಿರರ್ಥಕವಾದ ಆಳತೆಗೆ ಬೇಸತ್ತು ಅವನ ದೇಹವು ಬೇಜಾರುಗೊಂಡಿತು. ಇವನು ಯಾವಾಕೆಯ ಮಂದಿರಕ್ಕೆ ಹೋಗಲಿ ಹೋಗದಿರಲಿ ನಾನು ಮಾತ್ರ ನಿದ್ರಾಂಗನೆಯನ್ನು ಹೊಂದಿಕೊಳ್ಳುವೆನೆಂದು ದೇಹವು ನಯನನಿಸ್ಪಂದದಿಂದ ಸೂಚಿಸಿತು. ಹಾಗು ಅರೆಕ್ಷಣದಲ್ಲಿಯೇ ಅದು ತನ್ನ ಅಂಗಾಂಗಗಳ ಕ್ರಿಯೆಗಳನ್ನೆಲ್ಲ ಸ್ಥಗಿತಗೊಳಿಸಿತು.

ಇತ್ತ ರಾಜನು ಕಾಲಿತಲ್ಲಿಯೇ ನಿದ್ರೆ ಹೋದನು.

ಬೆಳ್ಳನೆ ಬೆಳಗಾಯಿತು. ರಾಜನ ಕಣ್ಣು ಫಳಕ್ಕನೆ ತೆರೆದವು ಮೇಲ ಕ್ಕೆದ್ದನು. ಪ್ರಾತರಾಹ್ನಿಕ ಕ್ರಿಯೆಗಳನ್ನೆಲ್ಲ ಮುಗಿಸಿಕೊಂಡು ದಿನಕ್ಕಿಂತಲೂ ಇಂದು ಅವಕಾಶ ಹೆಚ್ಚಾದುದನ್ನರಿತು ಲಗುಬಗೆಯಿಂದ ಹಾಗೆ ಸಭೆಗೆ ನಿರ್ಗ ಮನ ಮಾಡಿದನು. ಸಿಂಹಾಸನಾಧಿಷ್ಠಿತನಾಗಿ ಕಾಳಿದಾಸನನ್ನು ಕುರಿತು—

"ಕವಿವರ ! ನಾಲ್ಕರಲ್ಲಿ ಮೂರು ಕಳೆದರೆ ಒಂದೂ ಸಹ ಉಳಿಯುವ ದಿಲ್ಲೆಂಬ ಸಮಸ್ಯೆಯು ನನ್ನನ್ನು ಬಾಧಿಸುತ್ತಿದೆ ಎಂತೆಂದರೆ—

"ಅಪ್ರತಿಪತ್ತಿ ಮೂಢಮನಸಾ ದ್ವಿತ್ರಾಃ ! ಸ್ಥಿತಾನಾಡಿಕಾಃ ||

ಈ ಒಂದು ಶ್ಲೋಕ ಚರಣವನ್ನು ರಾಜನು ಉಚ್ಚರಿಸಿ– "ಸುಕವಿಯೆ| ಇದೇ ನನಗೆ ಮಹಾ ಸಮಸ್ಯೆಯಾಗಿದೆ" ಎಂದೆನ್ನಲು ಕಾಳಿದಾಸನು–"ದೇವ

ಸ್ನಾತಾ ತಿಷ್ಠತಿ ಕುಂತಲೇಶ್ವರ ಸುತಾ ವಾದಾಂಗ
ರಾಜಸ್ವಸು
ದೂತೇ ರಾತ್ರಿರಿಯಂ ಜಿತಾ ಕಮಲಯಾ ದೇವಿ
ಪ್ರಸಾದ್ಯಾಧುನಾ
ಇತ್ಯಂತಃಪುರಸುಂದರಿಜನ ಗುಣೇ ನ್ಯೂನಾಧಿಕಂ ಧಾಯುತಾ
ದೇವೇನಾ ಪ್ರತೆ ಪತ್ತಿ ಮೂಢ ಮನಸಾ ದ್ವಿತ್ರಾ:
ಸ್ಥಿತಾ ನಾಡಿಕಾಃ||

(ಅರ್ಥ— ಕುಂತಲೇಶನ ಪುತ್ರಿಯು ಇಂದು ಕ್ರಮಬದ್ಧವಾಗಿರು ವದು! ಇದು ಕಮಲಾದೇವಿಯು ಪಗಡೆಯಾಟದಲ್ಲಿ ನನ್ನನ್ನು ಸೋಲಿಸಿ ಇಂದಿನ ಮೈಗೂಡುವಿಕೆಯನ್ನು ಗೆದ್ದಿರುವಳು, ಅದರಂತೆ ಪಟ್ಟದ ರಾಣಿಯು ಇಂದು ಯಾವುದೋ ಕಾರಣದಿಂದ ಖಿನ್ನ ಮನಸ್ಕಳಾಗಿರುವಳು.

ಇಂಥ ಸ್ಥಿತಿಯಲ್ಲಿ ಅಂತ:ಪುರದ ಸುಂದರಿಯರ ಗುಣಗಳ ತಾರತಮ್ಯ ನೋಡುವದರಲ್ಲಿಯೇ ವಿಚಾರ ಮಾಡಿ ಭೋಜ ಮಹಾರಾಜನು ಕಿಂಕರ್ತವ್ಯ ಮೂಢ ಹೃದಯ ಚಿತ್ತನಾಗಿ ಎರಡು ಮೂರು ಘಳಿಗೆ ಕಾಲವನ್ನು ಕಳೆದನು.)

ಈ ಪ್ರಕಾರ ಮಹಾಕವಿಯು ಭೋಜರಾಜನ ಸಮಸ್ಯೆಯನ್ನು ಪೂರ್ಣಗೊಳಿಸಿದನು. ಆಗ ರಾಜನು ತನ್ನ ಹೃದಯಾದ್ಯಂತ ಸ್ಥಿತಿಯೆಲ್ಲವನ್ನೂ ಬಲ್ಲ ಈ ಕವಿಯು ಸಾಕ್ಷಾತ್ ದೇವಿಯು" ಎಂದು ನಿರ್ಧರಿಸಿ ಆಗಲೇ ಮುಂಬರಿದು ಬಂದು ಅವನಿಗೆ ನಮಸ್ಕಾರ ಮಾಡಿದನು.

ಭೋಜ ಕಾಳಿದಾಸರ ಅಂದಿನ ರಹಸ್ಯಮಯ ಸಮಸ್ಯೆಯನ್ನರಿಯದೆ ಎಲ್ಲ ವಿದ್ವಾಂಸರು ಕೌತುಕಾನ್ವಿತರಾದರು.

## (೩೭)

ಒಂದು ದಿನ ಭೋಜರಾಜನು ನಗರವಿಧಿಯಲ್ಲಿ ಸಾಗಿದ್ದನು. ಆಗ ಅವನು ತುಂಬಿದ ಕೊಡವನ್ನು ಹೊತ್ತುಕೊಂಡು ತನ್ನೆದುರು ಬರುತ್ತಿದ್ದ ಒಬ್ಬ ಸುಂದರಿಯನ್ನು ಕಂಡನು. ಆಕೆಯ ನಡಿಗೆಯಿಂದ ಕೊಡದಲ್ಲಿಯ ನೀರು ತುಳು ತುಳುಕಿ ಏನೋ ಶಬ್ದವಾಗುತ್ತಲಿದ್ದಿತು ಆ ಶಬ್ದವನ್ನು ಕೇಳಿ ರಾಜನು ತನ್ನಲ್ಲಿ—"ಕೊಡವು ಈ ಸುಂದರಿಯ ಕುತ್ತಿಗೆಯನ್ನು ಹಿಡಿದುದರಿಂದ ರತಿ ಕೋಗಿಲೆಯು ಮಾಡುತ್ತಿರುವ ಶಬ್ದ ಸಪ್ಪಳವು ಇದಾಗಿರುವದು" ಹೀಗೆ ತಿಳಿದುಕೊಂಡನು. ಹಾಗು ಅವನು ಸಭೆಗೆ ಬಂದು ಕಾಳಿದಾಸನನ್ನು ಕುರಿತು— "ಕೂಜಿತಂ ರತಿ ಕೂಜಿತಮ್" ಎನ್ನಲು ಆ ಕವಿಯು—

"ವಿದಗ್ಧೇ ಸುಮುಖೇ ರಕ್ತೇ ನಿತಂಬೋಪರಿ ಸಂಸ್ಥಿತೇ
ಕಾಮಿನ್ಯಾಕ್ಲಿಷ್ಟ ಸುಗತೀ ಕೂಜಿತಂ ರತಿ ಕೂಜಿತಮ್"

(ಅರ್ಥ– ಕೆಂಪುಬಣ್ಣದ ಮುಖವುಳ್ಳ ಸುಂದರ ಸ್ತ್ರೀಯಳ ಕೊಡದೊಳಗೆ ನೀರು ತುಂಬಿ ತನ್ನ ನಡುವಿನ ಮೇಲೆ ಅದನ್ನು ಹೊತ್ತುಕೊಂಡು ನಡೆದಳು. ಆ ಸಮಯದಲ್ಲಿ ಕೊಡದಲ್ಲಿಯ ನೀರು ಸೋರಹತ್ತಿತ್ತು. ಅರಕಳಿಯಾದ ಕೊಡವನ್ನು ಹೊತ್ತುಕೊಂಡು ಅವಳು ನಡೆಯುವಾಗ ಅದರಿಂದ ರತಿ ಸಮಯದಲ್ಲ ಉಂಟಾಗುವ ಶಬ್ದಕ್ಕೆ ಸಮಾನಾದ ಧ್ವನಿಯಾಗಹತ್ತಿತು.)

ಎಂದು ಶ್ಲೋಕ ಪೂರ್ಣ ಮಾಡಿದನು. ಸಂತುಷ್ಟ ಭೋಜರಾಜನು ಅವನನ್ನು ಸನ್ಮಾನಿಸಿದನು.

(೩೮)

ಭೋಜರಾಜನು ತನ್ನ ವಿಲಾಸಕ್ಕೆಂದು ಒಂದು ಹೊಸಮನೆಯನ್ನು ಕಟ್ಟಿಸಿದನು. ಆ ಮನೆಯಲ್ಲಿ ಪ್ರವೇಶ ಮಾಡುವ ಮುಹೂರ್ತ ಸಾಧಿಸಿ ಅಲ್ಲಿಗೆ ಸೇರುವದಕ್ಕೆ ಸಿದ್ಧನಾಗಲು ಅವನಿಗಿಂತಲೂ ಮೊದಲೇ ಒಂದು ಬ್ರಹ್ಮರಾಕ್ಷಸವು ಬಂದು ಆ ಮನೆಯಲ್ಲಿ ಪ್ರವೇಶ ಮಾಡಿತು ಅಂದಿನಿಂದ ಆ ಮನೆಯಲ್ಲಿ ಮಲಗಿದವರನ್ನು ಆ ಬ್ರಹ್ಮರಾಕ್ಷಸನು ಹೊತ್ತೊಯ್ದು ಬೀದಿಗೆ ಬೀಸಿ ಒಗೆಯಹತ್ತಿತು. ಇದನ್ನು ಕಂಡು ರಾಜನು ಆ ಬ್ರಹ್ಮರಾಕ್ಷಸನನ್ನು ಆ ಮನೆಯಿಂದ ಹೊರತಳ್ಳುವದಕ್ಕೆಂದು ಎಷ್ಟೋ ಜನ ಮಾಂತ್ರಿಕರನ್ನು ಕರೆಯಿಸಿದನು. ಮಾಂತ್ರಿಕರು ಆ ಮನೆಗೆ ಹೋಗಿ ತಮ್ಮ ಮಂತ್ರಕ್ರಿಯಾದಿಗಳನ್ನು ಆರಂಭಿಸಿದ ಕೂಡಲೇ ಅದು ಬಂದು ಅವರನ್ನೂ ಆ ಮನೆಯಿಂದ ಹೊತ್ತೊಯ್ದು ಹೊರಕ್ಕೆ ಚಲ್ಲಹತ್ತಿತು. ಮತ್ತು ಅದು ತಾನೊಂದೇ ಅನೇಕ ಪದ_ಪದ್ಯ ಅನೇಕ ಶ್ಲೋಕಗಳನ್ನು ಪಠಿಸುತ್ತ ಪ್ರತಿದಿನದ ರಾತ್ರಿಯನ್ನು ಕಳೆಯಹತ್ತಿತು.

ಲಕ್ಷಾಂತರ ವರಹಗಳನ್ನು ವೆಚ್ಚ ಮಾಡಿ ಕಟ್ಟಿಸಿದ ಮನೆಯು ಬ್ರಹ್ಮರಾಕ್ಷಸಕ್ಕೆ ಬೀಡಾಗಿರುವದನ್ನು ಕಂಡು ರಾಜನು ಬಹಳೇ ವ್ಯಸನಪಡಹತ್ತಿದನು. ಕಾಳಿದಾಸನು ರಾಜನ ಈ ವ್ಯಗ್ರತೆಯನ್ನರಿತು ರಾಜನನ್ನು ಕುರಿತು—

“ರಾಜನ್ ! ನೀವು ತಿಳಿದಿರುವಂತೆ ಆ ಮನೆಯಲ್ಲಿ ಪ್ರವೇಶ ಮಾಡಿದುದು ನಿಜವಾಗಿಯೂ ಬ್ರಹ್ಮರಾಕ್ಷಸನಲ್ಲ. ಅವನೊಬ್ಬ ಸಕಲ ಶಾಸ್ತ್ರ ಪ್ರವೀಣ ಕವೀಶ್ವರನಿರುವಂತೆ ತೋರುವದು ಆ ಕವೀಶ್ವರನನ್ನು ಸಂತುಷ್ಟಗೊಳಿಸಿದರೆ ಮಾತ್ರ ಅವನು ಆ ಮನೆಯಿಂದ ಹೊರಟು ಹೋಗುವನು. ಆದ್ದರಿಂದ ನೀವು ಅಲ್ಲಿಗೆ ಯಾವ ಮಾಂತ್ರಿಕರನ್ನೂ, ಕವಿ ಪಂಡಿತರನ್ನೂ ಕಳಿಸಬೇಡಿರಿ ನಾನೇ ಹೋಗಿ ಆ ಕವೀಶ್ವರನನ್ನು ಹೊರಹಾಕುವೆನು. ನನ್ನ ಮಂತ್ರಸಾಮರ್ಥ್ಯವೆಂತಿರುವದೆಂಬುದನ್ನು ನೋಡಿರಿ ಎಂದು ಹೇಳಿ

ಕಾಳಿದಾಸನು ಅಂದಿನ ರಾತ್ರಿಯಲ್ಲಿ ತಾನೊಬ್ಬನೇ ಆ ಮನೆಯಲ್ಲಿ ಹೋಗಿ ಮಲಗಿಕೊಂಡನು.

ಆಗ ರಾತ್ರಿಯ ಮೊದಲನೇ ಜಾವಕ್ಕಾರಂಭವಾಯಿತು. ಬ್ರಹ್ಮರಾಕ್ಷಸವು ಕಾಳಿದಾಸನು ಮಲಗಿರುವ ಸ್ಥಾನಕ್ಕೆ ಬಂದಿತು. ಹಾಗು ಅದು ಕಾಳಿದಾಸನನ್ನು ಕಂಡ ಒಂದು ಪಾಣಿನೀ ಸೂತ್ರವನ್ನು ಉಚ್ಚರಿಸಿತು. ಕಾಳಿದಾಸನು ಅದಕ್ಕೆ ಸರಿಯಾದ ಉತ್ತರ ಹೇಳಿದನು. ಅದಕ್ಕೆ ಆ ಬ್ರಹ್ಮರಾಕ್ಷಸವು ಮರು ಮಾತಾಡಲಿಲ್ಲ ಅದು ತನ್ನಲ್ಲಿ—"ಇವನು ಬ್ರಾಹ್ಮಣನು ನನಗಂತೂ ಕಾಣುವದು" ಎಂದು ತಿಳಿದುಕೊಂಡು ಮರೆಯಾಯಿತು

ಮುಂದೆ ರಾತ್ರಿಯ ಎರಡನೆಯ ಜಾವವು ಪ್ರಾಪ್ತವಾಯಿತು. ಆಗ ಬ್ರಹ್ಮರಾಕ್ಷಸವು ಮತ್ತೆ ಕಾಳಿದಾಸನ ಹತ್ತಿರ ಬಂದು—

"ಸರ್ವಸ್ಯದ್ವೇ" ಎಂದು ಉಚ್ಚರಿಸಿತು. ಅದಕ್ಕೆ ಕಾಳಿದಾಸನು—"ಸುಮತಿ ಕುಮತೀ ಸಂಪದಾ ಪತ್ತಿಹೇತೂ" ಎಂದ ಉತ್ತರ ಹೇಳಲು ಆ ಬ್ರಹ್ಮರಾಕ್ಷಸವು ತಿರುಗಿ ಮಾತಾಡದೆ ಗುಪ್ತವಾಯಿತು.

ಬಳಿಕ ರಾತ್ರಿಯ ಮೂರನೆಯ ಜಾವಕ್ಕೆ ಆರಂಭವಾಯಿತು. ಬ್ರಹ್ಮರಾಕ್ಷಸವು ಈ ಸಾರೆ ಸರಿಯಾದ ಉತ್ತರ ಕೊಡದಿದ್ದರೆ ಈ ಕಾಳಿದಾಸನನ್ನು ಕೊಂದುಹಾಕುವೆನು ಎಂದು ನಿರ್ಧರಿಸಿ ಅವನ ಹತ್ತಿರ ಬಂದು—

"ವೃದ್ಧೋಯುವನು" ಎಂದು ಉಚ್ಚರಿಸಿ ಅದಕ್ಕೆ ಕಾಳಿದಾಸನು—'ಸಹಪರಿಚಯಾತ್ತ್ಯಜ್ಯತೇ ಕಾಮಿನೀ' ಎಂದು ಉತ್ತರ ಹೇಳಲು ಅದು ಸರಿಯೆನ್ನಿಸಿ ಆ ಬ್ರಹ್ಮರಾಕ್ಷಸವು ಹಿಂದಿರುಗಿ ಮಾಯವಾಯಿತು.

ನಂತರ ರಾತ್ರಿಯ ಕೊನೆಯ ಜಾವವು ಪ್ರಾಪ್ತವಾಯಿತು ಇದೊಂದು ಬಾರಿ ಪ್ರಯತ್ನ ಮಾಡಿ ಕಾಳಿದಾಸನನ್ನು ನಿರುತ್ತರನನ್ನಾಗಿ ಮಾಡಿ ಕೊಲ್ಲುವೆನು ಎಂಬುದಾಗಿ ನಿಶ್ಚಯಿಸಿ ಆ ಬ್ರಹ್ಮರಾಕ್ಷಸವು ಕಾಳಿದಾಸನ ಹತ್ತಿರ ಬಂದು—

"ಏಕೋಗೋತ್ರೇ" ಎಂದು ಉಚ್ಚಾರ ಮಾಡಿತು. ಅದಕ್ಕೆ ಕಾಳಿದಾಸನು...."ಪ್ರಭವತಿ ಪುಮಾನ್ಯಃ ಕುಟುಂಬಂ ಬಿಭರ್ತಿ" ಎಂದು ಉತ್ತರ ಹೇಳಿದನು. ಮತ್ತೆ ಆ ಬ್ರಹ್ಮರಾಕ್ಷಸವು—"ಸ್ತ್ರೀ! ಪುವಚ್ಚ" ಎಂದಿತು.

ಆಗ ಕಾಳಿದಾಸನು-"ಪ್ರಭವತಿ ಯದಾ ತದ್ಧಿಂ ದೇಹಂ ವಿನಷ್ಟವಾ್॥ ಎಂದು ಉತ್ತರ ಕೊಟ್ಟನು.

(ಇದರಲ್ಲಿ ಬ್ರಹ್ಮರಾಕ್ಷಸ ಹಾಗೂ ಕಾಳಿದಾಸರ ವಾಕ್ಯಪೂರ್ಕಗಳಿವೆ)

(ಅರ್ಥ- ಬ್ರಹ್ಮರಾಕ್ಷಸ-'ಎಲ್ಲಪರಲ್ಲಿ ಎರಡು'

ಕಾಳಿದಾಸ-ಸುಮತಿಯು ಸಂಪತ್ತಿಗೂ, ಸುಮತಿಯು ವಿಪತ್ತಿಗೂ ಕಾರಣಭೂತಗಳಾಗಿವೆ

ಬ್ರಹ್ಮರಾಕ್ಷಸ-"ಮುದುಕನಾದವನಿಗೆ ಪ್ರಾಯದವನ"

ಕಾಳಿದಾಸ-ಸಹಪರಿಚಯುವಾಗಲು ಆ ವೃದ್ಧನು ಸ್ತ್ರೀಯುಳಿಂದ ತ್ಯಜಿಸಲ್ಪಡುವನು.

ಬ್ರಹ್ಮರಾಕ್ಷಸ-ಕಾಳಿದಾಸ-"ವಂಶಕ್ಕೆ ಒಬ್ಬನು"

ಕಾಳಿದಾಸ- 'ಸ್ತ್ರೀಯುಳು ಪುರುಷನಿಗೆ ಸಮ'

ಕಾಳಿದಾಸ- 'ಆಚರಣೆ ಮಾಡುವಂಥವಳಾದರೆ ಆ ವಂಶವು ನಿಶ್ಚಯವಾಗಿಯೂ ನಾಶವಾಗುವದು.

ಆಗ ಬ್ರಹ್ಮರಾಕ್ಷಸವು ಕಾಳಿದಾಸನು ಕೊಟ್ಟ ಉತ್ತರದಿಂದ ಸಂತುಷ್ಟತೆ ಹೊಂದಿ ಬೆಳಗು ಪ್ರಾಪ್ತವಾದ ಕೂಡಲೇ ಕಾಳಿದಾಸನ ಹತ್ತಿರ ಬಂದು-"ಕವಿವರ್ಯನೆ! ನಾನು ಸಂತಷ್ಟನಾದೆನು. ನಿನ್ನ ಮನೋಬಯಕೆಯೇನಿರುವದು" ಎಂದು ಕೇಳಿತು, ಆದಕ್ಕೆ ಕಾಳಿದಾಸನು-

"ಭಗವಾನ್ ನೀವು ಈ ಮನೆಯನ್ನು ಬಿಟ್ಟು ಬೇರೆ ಕಡೆಗೆ ಹೋಗಬೇಕು. ಇಷ್ಟೇ ನನ್ನ ಬಯಕೆಯಿರುವದು" ಎಂದು ಹೇಳಿದನು.

ಆ ಬಳಿಕ ಬ್ರಹ್ಮರಾಕ್ಷಸವು ಆ ಮನೆಯಲ್ಲಿ ಒಂದು ಕ್ಷಣ ಕಾಲ ಸಹ ನಿಲ್ಲದೆ ಹೊರಟು ಹೋಯಿತು.

ನಂತರ ಕಾಳಿದಾಸನು ಬಂದು ಭೋಜನನ್ನು ಕಂಡು ರಾತ್ರಿಯಲ್ಲಿ ವರ್ತಿಸಿದ ಬ್ರಹ್ಮರಾಕ್ಷಸ ಹಾಗೂ ತನ್ನ ಪ್ರಸಂಗವನ್ನು ಹೇಳಿದನಲ್ಲದೆ ಬ್ರಹ್ಮರಾಕ್ಷಸವು ಹೊರಬಿದ್ದುಹೋದುದನ್ನು ನಿವೇದಿಸಿದನು.

ಕಾಳಿದಾಸನು ಸುರಕ್ಷಿತ ಬಂದುದಕ್ಕೂ ಬ್ರಹ್ಮರಾಕ್ಷಸವು ಮನೆಬಿಟ್ಟು ಹೋದುದಕ್ಕೂ ರಾಜನಿಗೆ ಬಹಳೇ ಆನಂದವಾಯಿತು!

— — —

# [೩೯]

ಒಂದು ಸಮಯದಲ್ಲಿ ಸಮಸ್ತ ರಾಜರ ಶಿರೋಭೂಷಣ ರತ್ನದಂತೆ ಶೋಭಿಸುವ ಭೋಜರಾಜನು ಸಿಂಹಾಸನಾಧಿಷ್ಟನಾಗಿದ್ದನು. ಆಗ ದ್ವಾರಪಾಲಕನು ಬಂದು—"ದೇವ ! ದಕ್ಷಿಣ ದೇಶದಿಂದ ಮಲ್ಲಿನಾಥ ಎಂಬ ಹೆಸರಿನ ಕವಿಯು ಕೇವಲ ಕೌಪೀನಧಾರಿಯಾಗಿ ಬಂದು ಬಾಗಿಲಲ್ಲಿ ನಿಂತಿರುವನು" ಎಂದು ಶ್ರುತಪಡಿಸಲು ರಾಜನು ಆ ಕವಿಯನ್ನು ಒಳಕ್ಕೆ ಕರೆತರು ಎಂದು ಆಜ್ಞೆ ಮಾಡಿದನು. ಆದರಂತೆ ಆ ದ್ವಾರಪಾಲಕನು ಮಲ್ಲಿನಾಥ ಕವಿಯನ್ನು ರಾಜಸನ್ನಿಧಿಗೆ ಕರೆದೊಯ್ದನು, ಮಲ್ಲಿನಾಥನು— "ರಾಜಾ ! ನಿನಗೆ ಮಂಗಲವಾಗಲಿ" ಎಂದು ಉಚ್ಚರಿಸಿ ಅವನ ಆಜ್ಞೆಯಂತೆ ಕುಳಿತನು. ಮತ್ತು ಅವನು ರಾಜನನ್ನು ಉದ್ದೇಶಿಸಿ—

'ನಾಗೋ ಭಾತಿ ಮದೇನ ಖಂ ಜಲಂಧರೈಃ
ಪೂರ್ಣೇಂದುನಾ ಶರ್ವರೀ
ಶೀಲೇನ ಪ್ರಮದಾ ಜವೇನ ತುರುಗ ನಿತ್ಯೋತ್ಸವೈ
ರ್ಮಂದಿರವ್ ||
ವಾಣೀ ವ್ಯಾಕರಣೇನ ಹಂಸಮಿಥುನೈಃ ನದ್ಯ
ಸತ್ಪುತ್ರೇಣ ಕುಲಂ ತ್ವಯಾ ವಸಮತೀ
ಲೋಕತ್ರಯಂ ಭಾನುನಾ|| '

(ಅರ್ಥ– "ಎಲೈ ಭೋಜರಾಜನೆ! ಆನೆಯು ಮದವೇರಿದಾಗ ಶೋಭಿತವಾಗುವದು. ಆಕಾಶವು ಮೋಡಗಳಿರುವಾಗ ಒಪ್ಪುವದು. ಬೆಳ್ದಿಂಗಳ ಪೂರ್ಣಚಂದ್ರನಿಂದ ಶೋಭಿಸುವದು. ಆದರಂತೆ ವಿನಯಶೀಲಗಳಿಂದ ನಾರಿಯೂ ವೇಗದಿಂದ ಅಶ್ವವೂ, ನಿತ್ಯೋತ್ಸವದಿಂದ ಮಂದಿರವೂ, ವ್ಯಾಕರಣದಿಂದ ವಾಣಿಯೂ, ಹಂಸಮಿಥುನದಿಂದ ನದಿಯೂ, ಪಂಡಿತರಿಂದ ಸಭೆಯೂ, ಒಳ್ಳೇ ಮಗನಿಂದ ವಂಶವೂ, ಸೂರ್ಯನಿಂದ ತ್ರೈಲೋಕ್ಯವೂ ಹಾಗು ಜಲದಿಂದ ಪೃಥ್ವಿಯೂ ಇವೆಲ್ಲವೂ ರಂಜನೆಗೊಳ್ಳುವವು )

ಎಂದು ವರ್ಣಿಸಿದನು. ಅದನ್ನು ಕೇಳಿ ರಾಜನು— "ಪಂಡಿತನೇ ನಿನ್ನ ಉದ್ದೇಶವೇನು?" ಎಂದು ಕೇಳಲು ಕವಿಯು—

"ಅಂಬಾ ಕುಪ್ಯತಿ ನ ಮಯಾ ನಸ್ನುಷಯಾ ಸಾಪಿ
ನಾಂಬಯಾ ನ ಮಯಾ
ಅಹಮಪಿ ನ ತಯಾ ನತಯಾ ವದ ರಾಜನ್
ಕಸ್ಯ ದೋಷೋಯಮ್||"

(ಅರ್ಥ– "ರಾಜನ್! ನನ್ನ ತಾಯಿಯು ಸಿಟ್ಟಾಗುವಳು. ಆದರೆ ಆ ಸಿಟ್ಟು ನನ್ನ ಮೇಲೆಯೂ ಅಲ್ಲ, ನನ್ನ ಹೆಂಡತಿಯಾದ ಅವಳ ಸೊಸೆಯ ಮೇಲೆಯೂ ಅಲ್ಲ, ಅವಳಂತೆ ನನ್ನ ಹೆಂಡತಿಯು ಸಿಟ್ಟಾಗುವಳು. ಆಕೆಯ ಆ ಸಿಟ್ಟು ನನ್ನ ಮೇಲೆಯೂ ಅಲ್ಲ, ನನ್ನ ತಾಯಿಯ ಮೇಲೆಯೂ ಅಲ್ಲ. ನಾನಾದರೂ ಸಿಟ್ಟಿಗೇಳುವೆನು. ಆದರೆ ನನ್ನ ಸಿಟ್ಟು ತಾಯಿಯ ಮೇಲೆಯೂ ಅಲ್ಲ. ಹೆಂಡತಿಯ ಮೇಲೆಯೂ ಅಲ್ಲ ಅಂದಮೇಲೆ ಇದರಲ್ಲಿ ಯಾರ ಅಪರಾಧವೆಂದು ತಿಳಿಯಬೇಕು ?)

ಎಂದು ಆ ಪಂಡಿತನು ಹೇಳಲು "ರಾಜನು ಇವನು ದಾರಿದ್ರ್ಯದಿಂದ ಕಂಗಾಲಾಗಿರುವನು" ಎಂದು ಬಗೆದು ಅವನ ಮನೋರಥವನ್ನು ಪೂರ್ಣ ಮಾಡಿದನು.

## (೪೦)

ಒಂದು ಸಮಯದಲ್ಲಿ ದ್ವಾರಪಾಲಕನು ರಾಜನ ಸಮ್ಮುಖದಲ್ಲಿ ತಲೆಬಾಗಿ ನಿಂತು–"ಪ್ರಭು! ಮಹಾಕವಿ ಕವಿಶೇಖರನು ದ್ವಾರದಲ್ಲಿ ತಮ್ಮ ದರ್ಶನಕ್ಕಾಗಿ ಪ್ರತೀಕ್ಷೆ ನಡೆಯಿಸಿರುವನು" ಎಂದು ಹೇಳಲು "ಕವಿಯನ್ನು ಒಳಕ್ಕೆ ಬರಮಾಡು" ಎಂದು ಅಪ್ಪಣೆ ಕೊಟ್ಟನು. ಕೂಡಲೇ ಆ ದ್ವಾರಪಾಲಕನು ಕವಿಶೇಖರನನ್ನು ಸಭೆಯೊಳಕ್ಕೆ ಕಳಿಸಿದನು. ಕವಿಯು ರಾಜನಿಗೆ ಅಭಿನಂದಿಸಿ "ಸ್ವಸ್ತಿ" ಎಂದು ಉಚ್ಚರಿಸಿದನು. ಮತ್ತು ಅವನು ರಾಜನನ್ನು ಕುರಿತು —

"ರಾಜನ್ ಧೌವಾರಿಕಾದೇವ ಪ್ರಾಪ್ತವಾನ ಸ್ಮಿವಾರಣಮ್।
ಮದವಾರಣ-ಮಿಚ್ಛಾಮಿ ತ್ವಂದ್ದೇಹಂ ಜಗತೀ ಪತೇ॥"

(ಅರ್ಥ—ಎಲೈ ರಾಜನೆ! ದ್ವಾರಪಾಲಕನಿಂದ ನನಗೆ (ನಿನ್ನ ದರ್ಶನದ ಸಂಶಯವು) ನಿವಾರಣವಾಯಿತು. ಇನ್ನು ನಾನು ನಿನ್ನಿಂದ ಮದೋನ್ಮತ್ತ ವಾರಣ (ಆನೆ)ವನ್ನು ಆಶಿಸುತ್ತೇನೆ)

ಈ ಪ್ರಕಾರ ಕವಿಶೇಖರನು ಹೇಳಲು ರಾಜನು ಆ ಸಮಯದಲ್ಲಿ ಕವಿ ಶೇಖರನ ಪದ್ಯದಿಂದ ಮುಗ್ಧನಾದನು. ಹಾಗು ತಾನು ಪೂರ್ವ ದಿಕ್ಕಿಗೆ ಮುಖ ಮಾಡಿ ಕುಳಿತು ಅಂತಃಕರಣದಿಂದ ತನ್ನ ರಾಜ್ಯದ ಪೂರ್ವಭಾಗವನ್ನೆಲ್ಲ ಕವಿಗೆ ಅರ್ಪಿಸಿದ ತನ್ನ ಭಾವ ಸೂಚಿಸಿದನು. ನಂತರ ದಕ್ಷಿಣ ದಿಕ್ಕಿಗೆ ಮುಖ ಮಾಡಿ ಕುಳಿತು ಆ ದಿಕ್ಕಿನ ಭಾಗವನ್ನೂ ಅರ್ಪಿಸಿದನೆಂಬ ತನ್ನ ಭಾವವನ್ನು ತೋರಿಸಿದನು. ರಾಜನ ಈ ಭಾವಕೃತಿಯನ್ನು ಕಂಡು ಕವಿಶೇಖರನು ತನ್ನಲ್ಲಿ--"ಇದೇನು ! ರಾಜನು ಮೋರೆಯನ್ನು ಅತ್ತ ಕಡೆಗೆ ಮಾಡಿ ಕುಳಿತವನು ನನ್ನನ್ನು ನೋಡಲೊಲ್ಲನಲ್ಲ! ಎಂದು ವಿಚಾರ ಮಾಡಿ ತಾನೇ ರಾಜನ ಮುಂದೆ ಹೋಗಿ ನಿಂತು—

'ಅಪೂರ್ವೇಯಂ ಧನುರ್ವಿದ್ಯಾ ಭವತಾ ಶಿಕ್ಷಿತಾ ಕಥಮ್॥
ಮಾರ್ಗಣೌಘಃ ಸಮಾಯಾತಿ ಗುಣೋಯಾತಿ ದಿವಗಂತರಮ್ ॥'

(ಅರ್ಥ- ಎಲೈ ರಾಜನ್! ನೀನು ಈ ಅಪೂರ್ವ ಧನುರ್ವಿದ್ಯೆಯನು ಅದಾವ ಬಗೆಯಿಂದ ಸಂಪಾದಿಸಿಕೊಂಡಿರುವಿ? ಬಾಣಗಳು (ಯಾಚಕರ ತಂಡುತಂಡಾಗಿ (ನಿನ್ನೆಡೆಗೇ) ಬರುತ್ತಿರುವವು ಹದೆ ಅಂದರೆ ಗುಣವು (ಕೀರ್ತಿ ಶೂರತನಾದಿ ಗುಣ) ಆಕಾಶದ ಕಡೆಗೆ ಸಾಗಿರುವವು.

ಈ ಪ್ರಕಾರ ಕವಿಶೇಖರನು ಅರ್ಥವೈಚಿತ್ರತೆಯ ಪದ್ಯವನ್ನು ನುಡಿಯಲು ರಾಜನ ತನ್ನ ಹೃನ್ಮನದಿಂದ ದಕ್ಷಿಣದ ರಾಜ್ಯಭಾಗವನ್ನು ಆ ಕವಿಗೆ ಕೊಡುವ ವಿಚಾರ ಮಾಡಿದನು. ತದನಂತರ ತಾನು ಪಶ್ಚಿಮ ದಿಕ್ಕಿಗೆ ಮುಖ ಮಾಡಿ ಕುಳಿತನು. ಕವಿಯು ಆಗಲೂ ಅವನ ಮುಂದೆ ಹೋಗಿ ನಿಂತು—

'ಸರ್ವಜ್ಞ ಇತಿ ಲೋಕೋಽಯಂ ಭಾಷತೇ ಮೃಷಾ ||
ಪದಮೇಕಂ ನ ಜಾನಿಷೇ ವಕ್ತುಂ ನಾಸ್ತೀತಿ ಯಾಚಕೇ||'

(ಅರ್ಥ— ಮಹಾರಾಜನೆ! ಜಗತ್ತಿನಲ್ಲಿ ಸತ್ ಸಮಾಜವು ನಿನಗೆ ನಿರರ್ಥಕವಾಗಿ ಸರ್ವಜ್ಞನೆಂದು ಹೇಳುವದು ಯಾಕಂದರೆ ನೀನು ಯಾಚಕರಿಗೆ ಇಲ್ಲ' ಎಂದು ಹೇಳುವದೇ ನಿನಗೆ ಗೊತ್ತಿರುವದಿಲ್ಲ)

ಈ ಪ್ರಕಾರ ಆ ಕವಿಯು ವರ್ಣಿಸಿದನು. ಅದನ್ನು ಕೇಳಿ ರಾಜನು ಸಂತೋಷಪೂರ್ವಕ ತನ್ನ ರಾಜ್ಯದ ಪಶ್ಚಿಮ ಭಾಗವನ್ನೂ ಅವನಿಗೆ ಕೊಡುವ ನಿರ್ಧಾರ ಮಾಡಿ ಕೂಡಲೇ ಉತ್ತರ ದಿಕ್ಕಿಗೆ ಮೋರೆಮಾಡಿಕೊಂಡು ಕುಳಿತನು. ಆಗಲೂ ಕವಿಶೇಖರನು ರಾಜನೆದುರು ಹೋಗಿ ನಿಂತು—

'ಸರ್ವದಾ ಸರ್ವದೋಸೀತಿ ಮಿಥ್ಯಾತ್ವಂ ಕಥ್ಯಸೇ ಬುಧೈಃ ||
ನಾರಯೋ ಲೇಭಿರೇ ಪೃಷ್ಠಂ ನಚ ವಕ್ಷಃ ಪರಯೋಷಿತಃ |

(ಅರ್ಥ— ಎಲೈ ಭೋಜರಾಜನೇ ! ಮಾನವರೆಲ್ಲರು ನಿನಗೆ ವ್ಯರ್ಥವಾಗಿ ದಾತಾರನೆಂದು ಹೇಳುವರು. ಆದರೆ ವೈರಿಗಳಿಗೆ ನೀನು ನಿನ್ನ ನಿನ್ನನ್ನು ಹಾಗೂ ಪರಸ್ತ್ರೀಯರಿಗೆ ನೀನು ನಿನ್ನ ವೃಕ್ಷಸ್ಥಲವನ್ನೂ ಕೊಡಲಾರೆ)

ಈ ಪ್ರಕಾರ ಆ ಕವಿಶೇಖರನು ನುಡಿಯಲು ಭೋಜರಾಜನು ಆ ಕವಿಗೆ ತನ್ನ ಇಡೀ ರಾಜ್ಯವನ್ನೂ ಕೊಟ್ಟುಬಿಡುವ ನಿರ್ಧಾರ ಮಾಡಿ ಎದ್ದು ನಿಂತನು. ಆಗ ಕವಿಶೇಖರನು ರಾಜನ ಅಂತರ್ಯ ಭಾವನೆಯನ್ನು ತಿಳಿಯದೆ —

'ರಾಜನ್ ಕನಕ ಧಾರಾಭಿಃ ತ್ವಯಿ ಸರ್ವತ್ರ ವರ್ಷತಿ ||
ಅಭಾಗ್ಯಚ್ಛತ್ರ ಸಂಚ್ಛನ್ನೇಮಯಿ ನಾಯಾಂತಿ ಬಿಂದವಃ ||

(ಅರ್ಥ— 'ಎಲೈ ರಾಜನ್! ನಿನ್ನಿಂದ ಬಂಗಾರದ ಸುರಿಮಳೆಯು ಬೇಕಾದಷ್ಟು ಸುರಿಸಲ್ಪಟ್ಟರೂ ನನ್ನ ಮೇಲೆ ದಾರಿದ್ರ್ಯವೆಂಬ ಛತ್ರಿಕೆಯು ಎತ್ತಿಹಿಡಿಯಲ್ಪಟ್ಟಿರುವದರಿಂದ ಒಂದು ಹನಿಯೂ ಕೂಡ ನನ್ನ ಮೇಲೆ ಬೀಳದು)

ಈ ಪ್ರಕಾರ ಕವಿಶೇಖರನು ಉಚ್ಚರಿಸಿದನು.

ಇಷ್ಟಾದ ಮೇಲೆ ರಾಜನು ತನ್ನ ಅಂತಃಪುರಕ್ಕೆ ಹೋದನು. ಅಲ್ಲಿ ತನ್ನ ರಾಣಿಯಾದ ಲೀಲಾವತಿಯನ್ನು ಕುರಿತು—"ದೇವಿ! ನಾನು ಕವಿಶೇಖರನಿಗೆ ಸಂಪೂರ್ಣ ರಾಜ್ಯವನ್ನು ಅರ್ಪಿಸಿದೆನು. ಇನ್ನು ಮೇಲೆ ನನ್ನ ಸಂಗಡ ತಪೋವನಕ್ಕೆ ಹೊರಡು" ಎಂದು ಹೇಳುತ್ತಿರುವಾಗಲೇ ಕವಿಶೇಖರನು ಆ ಅಂತಃಪುರದ ದ್ವಾರಕ್ಕೆ ಬಂದನು. ಆಗ ರಾಜನ ವೃದ್ಧ ಮಂತ್ರಿಯು ಆ ಕವಿಯನ್ನು ಕುರಿತು—"ಕವಿವರನೇ! ನೀನು ರಾಜಸಭೆಯಲ್ಲಿ ರಾಜನಿಂದ ಏನನ್ನು ಸಂಪಾದಿಸಿದಿ? ಎಂದು ಕೇಳಲು ಕವಿಶೇಖರನು–"ಏನನ್ನು ಇಲ್ಲ" ಎಂದನು. ಆಗ ಮಂತ್ರಿಯು ಕವಿವರನೇ! ರಾಜಸಭೆಯಲ್ಲಿ ಉಚ್ಚರಿಸಿದ ಪದ್ಯಗಳನ್ನೆಲ್ಲ ಹೇಳು" ಎಂದೆನ್ನಲು ಕವಿಶೇಖರನು ತಾನು ನುಡಿದ ನಾಲ್ಕು ಪದ್ಯಗಳನ್ನು ಆ ಮಂತ್ರಿಯ ಎದುರಿನಲ್ಲಿ ನಿಂತು ಹೇಳಿದನು, ಆಗ ಮಂತ್ರಿಯು– "ಎಲೈ ಸುಕವಿಯೆ! ನಿನಗೆ ಈಗ ಲಕ್ಷ ಹೊನ್ನುಗಳನ್ನು ಕೊಡುವೆನು ನೀನು ಈ ಹೊನ್ನುಗಳು ನನಗೆ ಮುಟ್ಟಿದವು ಎಂದು ಬರೆದುಕೊಡು" ಎಂದು ಹೇಳಿ ಆ ಕವಿಗೆ ಅಷ್ಟು ಹೊನ್ನು ಕೊಟ್ಟನು, ಕವಿಶೇಖರನು ಆ ಹೊನ್ನುಗಳನ್ನು ಸ್ವೀಕರಿಸಿ ಮಂತ್ರಿಯ ಹೇಳಿಕೆಯಂತೆ ಆಗಲೇ ಬರೆದುಕೊಟ್ಟನು. ಮಂತ್ರಿಯು ಹೊನ್ನುಗಳನ್ನು ಕೊಟ್ಟು ಅವನನ್ನು ಅಲ್ಲಿಂದಲೇ ಬೀಳ್ಕೊಟ್ಟನು. ಆ ಬಳಿಕ ಮಂತ್ರಿಯು ರಾಜನ ಬಳಿಗೆ ಹೋಗಿ ಕುಳಿತನು. ಆಗ ರಾಜನು ಮಂತ್ರಿಯನ್ನು ನೋಡಿ—"ಮಂತ್ರಿವರ್ಯ ನಾನು ಈ ಇಡೀ ರಾಜ್ಯವನ್ನು ಕವಿಶೇಖರನಿಗೆ ಕೊಟ್ಟೆನು. ಇನ್ನು ಪತ್ನಿಯೊಡನೆ ಕೂಡಿಕೊಂಡು ತಪೋವನಕ್ಕೆ ಹೋಗಿ ಅಲ್ಲಿಯೇ ವಾಸ ಮಾಡಿಕೊಂಡು ಕಾಲಕಳೆಯುವೆನು. ಇಚ್ಛೆಯಿದ್ದರೆ ನೀನು ನಮ್ಮೊಡನೆ ವನಕ್ಕೆ ನಡೆ ಎಂದೆನ್ನಲು ಮಂತ್ರಿಯು— "ದೇವ! ನಾನು ಆ ಕವಿಶೇಖರನಿಗೆ ಒಂದು ಲಕ್ಷ ಹೊನ್ನು ಕೊಟ್ಟು ಈ ಇಡೀ ರಾಜ್ಯವನ್ನು ನಿಮಗಾಗಿ ಕೊಂಡಿರುವೆನು ಹಣವೆಲ್ಲವೂ ಆ ಕವಿಗೆ ಮುಟ್ಟಿರುವದು. ಇನ್ನು ಈ ರಾಜ್ಯವು ನಿಮ್ಮದೇ ಆಯಿತು! ಇದನ್ನು ನೀವು ಉಪಯೋಗಿಸಬೇಕು ಎಂದು ಮಂತ್ರಿಯು—ಹೇಳಲು ರಾಜನು ಜಾಣ್ಮನಕ್ಕೆ ಮೆಚ್ಚಿ ಅವನನ್ನು ಮರ್ಯಾದಿಸಿದನು.

[೪೧]

ಒಂದಾನೊಂದು ವರುಷದ ಬೇಸಿಗೆ ಕಾಲದಲ್ಲಿ ಭೋಜರಾಜನು ಬೇಟೆ ಯಾಡುವ ನಿಮಿತ್ತದಿಂದ ದೂರಿನ ಒಂದು ಅರಣ್ಯಕ್ಕೆ ಹೋದನು. ಅವನು ಮನದಣಿಯುವಂತೆ ಬೇಟೆಯಾಡಲು ಸೂರ್ಯನು ನೆತ್ತಿಯ ಮೇಲೆ ಬಂದನು. ಬಿಸಿಲಿನ ತಾಪದಿಂದ ಬಸವಳಿದು ಅವನು ನೀರಡಿಕೆಯಿಂದ ಬಳಲಿ ಬೆಂಡಾ ದನು. ಅಶ್ವಾರೋಹಿಯಾಗಿದ್ದ ಅವನು ಹಾಗೆಯೇ ನೀರಿಗಾಗಿ ಮುಂದೆ ಹೋಗ ಹೋಗುತ್ತ ಒಂದು ನಿರ್ಜಲ ಪ್ರದೇಶವನ್ನೇ ಸೇರಿದನು ಎಲ್ಲಿಯೂ ನೀರು ದೊರೆಯದ್ದರಿಂದ ಅವನು ಕಟ್ಟಕಡೆಗೆ ಒಂದು ವೃಕ್ಷವನ್ನು ಕಂಡು ಅದರ ನೆರ ಳಿನಲ್ಲಿ ಹೋಗಿ ವಿಶ್ರಮಿಸಿದನು. ಅಷ್ಟರಲ್ಲಿ ಸುಕುಮಾರ ಸುಂದರಿಯೂ ಮನೋಹಾರಿಣಿಯೂ ಆಗಿರುವ ಒಬ್ಬ ಗೋಪ ಕನ್ಯೆಯು ಹಾಲ್ಮೊಸರು ಮಾರುವದಕ್ಕೆಂದು ಧಾರಾನಗರಕ್ಕೆ ಹೋಗುತ್ತಿದ್ದಳು. ರಾಜನು ಆಕೆಯನ್ನು ನೋಡಿ ಇವಳ ತಲೆಯ ಮೇಲೆ ಹೊತ್ತಿರುವ ಪಾತ್ರೆಯಲ್ಲಿ ನೀರು ಇರಬಹು ದೆಂದು ಭಾವಿಸಿದನು. ಹಾಗೂ ಅವಳನ್ನು ಕುರಿತು— ಎಲೈ ಯುವತಿ! ನೀನು ತಲೆಯ ಮೇಲೆ ಏನನ್ನು ತೆಗೆದುಕೊಂಡು ಹೊರಟಿರುವಿ? ಎಂದು ಪ್ರಶ್ನೆ ಮಾಡಿದನು. ಗೋಪ ಯುವತಿಯು ತನ್ನನ್ನು ಮಾತನಾಡಿಸಿದ ಪುರುಷನು ಮುಖಕಾಂತಿಯುಳ್ಳವನೂ ರಾಜಲಕ್ಷಣಯುಕ್ತನೂ ಆಗಿರುವದರಿಂದ ಇವನು ನಿಜವಾಗಿಯೂ ಧಾರಾನಗರದ ಭೋಜರಾಜನೇ ಎಂದು ತನ್ನಲ್ಲಿ ನಿರ್ಧರಿಸಿ ಕೊಂಡಳು. ಮತ್ತು ಅವನ ಆಗಿನ ಸ್ವರೂಪ ನೋಡಿ “ಈ ರಾಜನಿಗೆ ನಿಶ್ಚಯ ವಾಗಿ ನೀರಡಿಕೆಯಾಗಿದೆ ಎಂದು ವಿಚಾರ ಮಾಡಿ ಅವನನ್ನು ಕುರಿತು—

“ಹಿಮಕುಂದ ಶಶಿಪ್ರಭ ಶಂಖ ನಿಭಂ ಪರಿಪಕ್ವ
ಕಪಿಸ್ಥ ಸುಗಂಧರಸಮ್ ।

ಯುವತೀಕರಪಲ್ಲವನಿರ್ಮಥಿತಂ ಪಿಬಹೇನೃಪರಾಜ
ರುಜಾಪಹರಮ್ ॥

(ಅರ್ಥ— "ಎಲೈ ನೃಪೇಂದ್ರನೇ! ಅರ್ಘ, ಕಮಲ, ಚಂದ್ರ ಹಾಗೂ ಶಂಖ ಇವುಗಳ ವರ್ಣದಂತೆ ಶುಭ್ರವಾಗಿರುವ, ಸಕ್ಕರೆಯಾಗಿರುವ ಬೇವಲ ಹಣ್ಣಿನ ಸುಗಂಧಿತ ರಸದಂತೆ ಇರುವ ಹಾಗೂ ಯುವತಿಯು ಕೋಮಲಕರ ಕೈಗಳಿಂದ ಘುಥನ ಮಾಡಲ್ಪಟ್ಟಿರುವ ಮತ್ತು ರೋಗ ರುಜಿಗಳನ್ನು ಕಳೆದು ಆರೋಗ್ಯವನ್ನುಂಟು ಮಾಡುವ ಇದೊಂದು ಪೇಯ ಪದಾರ್ಥವಿರುವದು ಇದನ್ನು ಕುಡಿಯುವದಾಗಬೇಕು.)

ಎಂದು ಆ ಗೋಪಾಲನಾರಿಯು ಅವನಿಗೆ ಕುಡಿಯುವದಕ್ಕೆಂದು ತನ್ನ ಪಾತ್ರೆಯಲ್ಲಿದ್ದ ಮಜ್ಜಿಗೆಯನ್ನು ಕೊಟ್ಟಳು. ನೀರಡಿಸಿದ ರಾಜನು ಆಕೆ ಕೊಟ್ಟ ಮಜ್ಜಿಗೆಯನ್ನು ಸಂತುಷ್ಟ ಪ್ರಾಶನಮಾಡಿ ಪ್ರಸನ್ನತೆಯನ್ನು ಹೊಂದಿದನು. ಬಳಿಕ ಅವನು ಆ ಗೋಪ ಯುವತಿಯನ್ನು ಕುರಿತು— "ಎಲೈ ಮಾನಿನಿ! ನೀನು ಇಚ್ಛಿಸುವದೇನು?" ಎಂದು ಕೇಳಲು ಆ ಗೋಪಾಂಗನೆಯು ತನ್ನ ಯೌವನ ಶೃಂಗಾರದ ಕಿಂಚಿತ್ ದರ್ಶನದಿಂದ ಮದಪರವಶ ಮೋಹ ಬೀರುವ ತನ್ನ ಚಂಚಲ ನೇತ್ರಗಳಿಂದ ರಾಜನನ್ನು ನೋಡಿ—

"ಇಂದುಂ ಕೈರವಿಣೀವ ಕೋಕಪಟಲೀ ವಾಂಭೋಜಿನೀ ವಲ್ಲಭ |
ಮೇಘಂ ಜಾತಕ ಮಂಡಲೀವ ಮಧುಪ ಶ್ರೇಣೀವ ಪುಷ್ಪವ್ರಜಮ್||
ಮಾಕಂದಂಪಿಕ ಸುಂದರೀವ ರಮಣೀ ಪ್ರಾತ್ಮೇಶ್ವರಂ ಪ್ರೋಷಿತಂ |
ಚೇತೋವೃತ್ತಿರಿಯಂ ಸದಾನೃಪವರ ತ್ವಾಂ ದ್ರಷ್ಟುಮುತ್ಕಂಠತೇ ||

(ಅರ್ಥ— ಮಹಾರಾಜನೆ! ಚಂದ್ರನಿಗೆ ಕುಮುದಿಯು ಸೂರ್ಯನಿಗೆ ಚಕ್ರವಾಕ್ಯವು, ಮೇಘಕ್ಕೆ ಚಾತಕವು ಕುಸುಮಗಳಿಗೆ ಭ್ರಮರವು, ಮಾಮರಕ್ಕೆ ಕೋಗಿಲೆಯು ಬಹುದಿನಗಳಿಂದ ಅಗಲಿದ ಪತಿಗೆ ಸ್ತ್ರೀಯು ಇವುಗಳಂತೆ ತನ್ನ ವೃತ್ತಿಯು ಯಾವಾಗಲೂ ನಿನ್ನ ದರ್ಶನಕ್ಕಾಗಿ ಉತ್ಕಂಠಿತವಾಗಿರುವದು.)

ಈ ಪ್ರಕಾರ ಗೋಪನಾರಿಯು ರಾಜನೆದುರಿನಲ್ಲಿ ತನ್ನ ಇಚ್ಛೆಯನು ಪ್ರಕಟಗೊಳಿಸಲು ಭೋಜರಾಜನು ಆಶ್ಚರ್ಯಚಕಿತನಾದನು ಹಾಗು

ಅವನು ಆಕೆಯನ್ನು ಕುರಿತು— "ಎಲೈ ಲಲನೆ! ನಾನು ನಿನ್ನನ್ನು ನನ್ನ ಪತ್ನಿ ಲೀಲಾದೇವಿಯ ಅನುಮತಿಯಿಂದಲೇ ಸ್ವೀಕರಿಸುವೆನು" ಎಂದು ಹೇಳಿ ಭೋಜರಾಜನು ಆ ಗೋಪಕನ್ಯೆಯನ್ನು ಕರೆದುಕೊಂಡು ಧಾರಾನಗರಕ್ಕೆ ಬಂದನು. ಹಾಗು ಪತ್ನಿ ಲೀಲಾವತಿಯು ಒಪ್ಪಿಗೆಯಿಂದ ಆಕೆಯನ್ನು ಪರಿಗ್ರಹಿಸಿದನು

—○○—

## (೪೨)

ಒಂದು ದಿನ ಭೋಜರಾಜನು ಸಭೆಯಲ್ಲಿ ಸಿಂಹಾಸನವನ್ನೇರಿ ಕುಳಿತಿದ್ದನು. ಆ ಸಮಯದಲ್ಲಿ ನಗರ ರಕ್ಷಕರು ಒಬ್ಬ ಕಳ್ಳನನ್ನು ಬಂಧಿಸಿ ರಾಜನೆದುರಿನಲ್ಲಿ ನಿಲ್ಲಿಸಿದರು. ರಾಜನು_ ಇವನಾರು? ಎಂದು ಕೇಳಲು ಆ ರಕ್ಷಕರು_ "ದೇವ! ಈತನು ಒಬ್ಬ ವೇಶ್ಯೆಯ ಮನೆಗೆ ಕನ್ನ ಹಾಕಿ ಅವಳ ದ್ರವ್ಯವನ್ನು ಅಪಹರಿಸಿರುವನು" ಎಂದು ಶ್ರುತಪಡಿಸಿದರು. ಅದನ್ನು ಕೇಳಿ ರಾಜನು— ಇವನು ಶಿಕ್ಷೆಗೆ ಅರ್ಹನು ಎಂದು ತಿಳಿದು ಅವನ್ನು ವಿಚಾರಿಸತೊಡಗಿದನು. ಅವನ ಹೆಸರು ಮುಂತಾದವುಗಳನ್ನು ಕೇಳಿದನು. ಆದಕ್ಕೆ ಕಳ್ಳನು–ರಾಜನ್! ನನಗೆ 'ಭುಕ್ಕುಂಡ' ಎಂಬ ನಾಮಧೇಯವಿರುವದು ಎಂದು ಹೇಳಿದಲ್ಲದೇ—

ಭಟ್ಟಿರ್ನಷ್ಟೋ ಭಾರವೀಯೋಪಿ ನಷ್ಟೋ
ಭಿಕ್ಷುರ್ನಷ್ಟೋ ಭೀಮಸೇನೋಪಿ ನಷ್ಟಃ
ಭುಕ್ಕುಂಡೋಹಂ ಭೂಪತಿಸ್ತ್ವಂಹಿಂ ಹಿ ರಾಜನ್
ಭಭ್ಬಾ ಪಂಕ್ತಾವಂತಕಃ ಸಂನಿವಿಷ್ಟಃ||

(ಅರ್ಥ— ಎಲೈ ರಾಜನ್! ಭಟ್ಟಿ ಭಾರವಿ, ಹಾಗೂ ಭಿಕ್ಷು ಮೊದಲಾದ ಕವಿ ಸಮುದಾಯವು ಮೃತರಾಗಿ ಹೋದರು. ಮತ್ತು ಭೀಮಸೇನನು ಸತ್ತು ಹೋದನು. ಇನ್ನು ಭುಕ್ಕುಂಡನಾದ ನಾನೂ ಭೂಪಾಲ ಭೋಜ ಹೆಸರಿನ ನೀನೂ ಆ ಯಮರಾಜನ ಭಬ್ಬಾಪಂಕ್ತಿಯಲ್ಲಿ ಪ್ರವೇಶವಾ

ಗುವದಿಷ್ಟೇ ಮಾತ್ರ ಉಳಿದಿದೆ. (ಇದ್ದರಿಂದ ಈಶ್ವರನು ನಮ್ಮನ್ನು ರಕ್ಷಿಸಲಿ) ಎಂದು ಪದ್ಯದಿಂದ ಉಚ್ಚರಿಸಿದನು.

ಆ ಬಳಿಕ ಭೋಜರಾಜನು— "ಎಲೆಲೆ ಭುಕ್ಕುಂಡನೇ! ಹೋಗು ನಿನ್ನ ಮನ ಬಂದ ಕಡೆಗೆ ಹೋಗು" ಎಂದು ಅಪ್ಪಣೆ ಕೊಟ್ಟನು.

## (೪೩)

ಮತ್ತೊಂದು ದಿನ ಭೋಜರಾಜನು ಮೃಗಯಾ ವಿಹಾರಾರ್ಥವಾಗಿ ಒಂದು ಘೋರಾರಣ್ಯಕ್ಕೆ ಹೋದನು. ಅಲ್ಲಿ ಅವನು ಬಹಳ ಹೊತ್ತಿನವರೆಗೆ ಬೇಟೆಯಾಡಿ ಶ್ರಮಪಟ್ಟನು. ತತ್ ಪರಿಹಾರಕ್ಕೆಂದು ಅವನು ಅತ್ತಿತ್ತ ಸುತ್ತಾಡಿ ಒಂದು ಸರೋವರದ ತೀರಕ್ಕೆ ಬಂದನು. ಆ ಜಲಾಶಯದಲ್ಲಿ ಇಳಿದು ಜಲಪ್ರಾಶನ ಮಾಡಿ ಬಂದು ಆ ಸರೋವರದ ತೀರದ ಮೇಲೆಯೇ ಒರಗಿ ಶ್ರಮ ನಿವಾರಣೆ ಮಾಡಿಕೊಳ್ಳುತ್ತಿರುವಾಗ ಉಂಟಾದ ದಣಿವಿಕೆಯಿಂದ ನಿದ್ರೆಗೊಳಗಾದನು ಮುಂದೆ ಕೆಲ ಹೊತ್ತಿನ ಮೇಲೆ ಸೂರ್ಯನು ಅಸ್ತನಾದನು ರಾತ್ರಿ ಸಮಯಕ್ಕಾರಂಭವಾಯಿತು. ಅವನು ಮಲಗಿದಲ್ಲಿಯೇ ಚಂದ್ರನ ಬೆಳಗಿದಿಂಗಳಿನಿಂದ ದೈದೀಪ್ಯಮಾನವಾದ ಆ ಇರುಳು ರಾಜನಿಗೆ ಸುಖದಾಯಕರವೂ ಆನಂದಪ್ರದವೂ ಆಯಿತು

ಬೆಳ್ಳನೆ ಬೆಳಗಾಯಿತು. ರಾಜನು ನಗರಕ್ಕೆ ಹಿಂದಿರುಗಿದನು. ಹೋಗ ಹೋಗುತ್ತ ಅವನು ಪಶ್ಚಿಮ ದಿಕ್ಕಿನ ಮಧ್ಯಭಾಗದಲ್ಲಿ ನೇತಾಡುತ್ತಿರುವ ಚಂದ್ರ ಬಿಂಬವನ್ನು ನೋಡಿ ಕೌತುಕಪಟ್ಟನು. ಆ ಕುತೂಹಲದಲ್ಲಿಯೇ ಅವನು ತನ್ನ ನಿಕಟವರ್ತಿಗಳಾಗಿ ಕುಳಿತ ಕವೀಂದ್ರರನ್ನು ನೋಡಿ—

'ಚರಮಗಿರಿ ನಿತಂಬೇ ಚಂದ್ರ ಬಿಂಬಂ ಲಲಂಬೇ'

ಎಂಬುದಾಗಿ ಒಂದು ಚರಣ ರೂಪದಿಂದ ತನ್ನ ಸಮಸ್ಯೆಯನ್ನು ಆ ಕವಿಜನರ ಮುಂದೆ ಇರಿಸಿದನು. ಅದನ್ನು ಕೇಳಿ ಭವಭೂತಿ ಕವಿಯು—

"ಅರುಣ ಕಿರಣ ಜಾಲೈರಂತರ್ಕ್ಷಿ ಗತಸ್ತೇ"

ಎಂದು ಉಚ್ಚರಿಸಿದನು. ಆಗ ದಂಡಿಯು ತಾನೂ ಎದ್ದು ನಿಂತು—

"ಚಲತಿ ಶಿಶಿರವಾತೋ ಮಂದ ಮಂದಂ ಪ್ರಭಾತೇ"
ಎಂಬುದಾಗಿ ಉಚ್ಚರಿಸಿ ಕುಳಿತನು. ನಂತರ ಕಾಳಿದಾಸನು--
"ಯುವತಿ ಜನ ಕದಂಬೇ ನಾಥ ಮುಕ್ತೌಷ್ಠಬಿಂಬೇ
ಚರಮಗಿರಿ ನಿತಂಬೇ ಚಂದ್ರಬಿಂಬಂ ಲಲಂಬೇ ||"
ಎಂದು ಉಚ್ಚರಿಸಿದನು.

ಇಂತು ರಾಜನಿಂದ ಉದಿತ ಸಮಸ್ಯೆಯು ಮೂವರು ಕವೀಂದ್ರರ ಮೂರು ಚರಣಗಳಿಂದ ಸೇರಿ ತಾನು ನಾಲ್ಕನೆಯ ಚರಣವಾಗಿ ಒಂದು ವೃತ್ತ ಸ್ವರೂಪವನ್ನೇ ಹೊಂದಿ ಛಂದೋಬದ್ಧವಾಗಿ ಮೆರೆಯಿತು

(ಇದೇ ವೃತ್ತದ ಅರ್ಥವು—
"ಸೂರ್ಯಕಿರಣ ಸಮೂಹದಿಂದ ಆಕಾಶದಲ್ಲಿ ನಕ್ಷತ್ರಗಳಡಗಿದ ಮೇಲೆ
ಬೆಳಗಿನ ಸುಳಿಗಾಳಿಯು ಮಂದ ಮಂದವಾಗಿ ಬೀಸಹತ್ತಿದ ಮೇಲೆ
ಪ್ರಿಯನಿಂದ ಪ್ರೇಯಸಿಯು ತನ್ನ ಅಧರಬಿಂದುಗಳನ್ನು ಬಿಡಿಸಿಕೊಂಡ ಮೇಲೆ
ಅಸ್ತಾಚಲದ ಮಧ್ಯಭಾಗದಲ್ಲಿ ಚಂದ್ರಮಂಡಲವು ನೇತಾಡಹತ್ತಿತು.)

ಇಷ್ಟಾದ ಬಳಿಕ ಭೋಜರಾಜನು ಆ ಕವೀಂದ್ರನನ್ನು ಸನ್ಮಾನಿಸಿದನು ಹಾಗು ಅವರಲ್ಲಿಯೂ ಕಾಳಿದಾಸನನ್ನು ವಿಶಿಷ್ಟ ಬಗೆಯಿಂದ ಗೌರವಿಸಿದನು.

## (೪೪)

ಒಂದು ದಿವಸ ಭೋಜರಾಜನು ನಗರದಿಂದ ಬಾಹ್ಯ ಸಂಚರಣೆಗಾಗಿ ಹೋದನು. ನಗರದಿಂದ ಸ್ವಲ್ಪ ಅಂತರದ ಮೇಲೆ ತಾನೇ ಒಂದು ಹೊಸ ಕೆರೆಯನ್ನು ಕಟ್ಟಿಸಿದನು, ಅವನು ಆ ಕೆರೆಗೆ ಹೋಗಿ ಈಜಾಡಹತ್ತಿದನು. ಅವನು ಬಾಲ್ಯದಿಂದ ಬೆಳೆಯಿಸಿದ ತನ್ನ ತಲೆಗೂದಲುಗಳನ್ನು ನೀರಿನಿಂದ ತಿಕ್ಕಿ ತಿಕ್ಕಿ ಸ್ವಚ್ಛಮಾಡಿಕೊಳ್ಳಹತ್ತಿದನು. ಬೊಗಸೆಯಿಂದ ತನ್ನ ತಲೆಯ ಮೇಲೆ ನೀರು ಹಾಕಿಕೊಳ್ಳುತ್ತಿರುವಾಗ ಬೊಗಸೆಯಲ್ಲಿ ನೀರಿನೊಡನೆ ಬಂದ ಒಂದು ಮೀನಿನ ಮರಿಯು ಅವನ ತಲೆಗೂದಲಿನ ಜಡೆಯಲ್ಲಿ ಸೇರಿತು. ಹಾಗೂ ಆಗಲೇ ಅವನ ತಲೆ ಪರಟೆಯನ್ನು ಕುಕ್ಕಿ ತಲೆಯಲ್ಲಿ ಸೇರಿಕೊಂಡ

ಡಿತು. ಆದನ್ನರಿತು ಅವನು ಹಾಗೆಯೇ ಹಿಂದಿರುಗಿ ಮನೆಗೆ ಬಂದನು. ಆ ಚಿಕ್ಕ ಮೀನು ತಲೆಯಲ್ಲಿ ಹೊಕ್ಕದುದರ ಪರಿಣಾಮವಾಗಿ ಅವನಿಗೆ ಅಸಹ್ಯವಾದ ಮಸ್ತಕಶೂಲೆಯ ಬಾಧೆಯಾಗಹತ್ತಿತು. ನಗರದಲ್ಲಿ ನಾಮಾಂಕಿತ ವೈದ್ಯರುಗಳನ್ನೆಲ್ಲ ಕರೆಯಿಸಿ ಔಷಧೋಪಚಾರ ಮಾಡಿಸಿಕೊಳ್ಳಹತ್ತಿದನು. ಎಷ್ಟೊಂದು ಪ್ರಯತ್ನ ಮಾಡಿದರೂ ಅವನ ತಲೆಶೂಲೆಯು ನಿಲ್ಲಲಿಲ್ಲ. ಈ ಪ್ರಕಾರ ಅವನಿಗುಂಟಾದ ಆ ಬೇನೆಯು ಮಹಾರೋಗದ ಸ್ವರೂಪಕ್ಕಿಳಿದು ಅತ್ಯಲ್ಪ ಕಾಲದಲ್ಲಿಯೇ ಅವನು ಅತ್ಯವ್ಯಸ್ಥೆಗೆ ಗುರಿಯಾದನು.

|| ಕ್ಷಾಮಂ ಕ್ಷಾಮ ಮಭೂದ್ವಪುರ್ಗತಸುಖಂ
ಹೇಮಂತ ಕಾಲೇಬ್ಜವತ್ |
ವಕ್ತ್ರಂನಿರ್ಗತಕಾಂತಿರಾಹುವದನಾಕ್ರಾಂತಾಬ್ಜ
ಬಿಂಬೋಪಮಂ ||
ಚೇತಃ ಕಾರ್ಯಪದೇಷು ತಸ್ಯ ವಿಮುಖಂ
ಕ್ಲೀಬಸ್ಯನಾರೀಷ್ವಿವ
ವ್ಯಾಧಿಃ ಪೂರ್ಣತರೋ ಬಭೂವ ವಿಪಿನೇ
ಶುಷ್ಕೇ ಶಿಖಾವಾನಿವಾ

(ಅರ್ಥ– ರಾಜನ ಶರೀರವು ಹೇಮಂತ ಋತುವಿನ ಕಮಲದಂತೆ ಸುಖರಹಿತವಾಗಿ ದುರ್ಬಲವಾಯಿತು. ಅವನ ಮುಖದ ತೇಜವೂ ರಾಹುಗ್ರಸ್ತ ಚಂದ್ರನಂತೆ ತೇಜೋಹೀನವಾಯಿತು. ಅವನ ಚಿತ್ತ ವೃತ್ತಿಯು ಈ ಬಗೆಯಾಗಿ ಕಾರ್ಯಗಳಿಂದ ನಪುಂಸಕ ಚಿತ್ರವೃತ್ತಿಯು ಸ್ತ್ರೀ ಸಮೂಹದಿಂದ ಹಿಂದೋಡುವಂತೆ ಹಿಂದೆಗೆಯಹತ್ತಿತು ಒಣಗಿದವನಲ್ಲಿಯ ಅಗ್ನಿಯಂತೆ ಆ ರಾಜನ ದೇಹದಲ್ಲಿ ವ್ಯಾಧಿಯು ವರ್ಧಿಸಹತ್ತಿತು.

ಇದೇ ಸ್ಥಿತಿಯಲ್ಲಿ ಆ ರಾಜನು ಒಂದು ವರುಷ ಕಾಲವನ್ನು ನೂಕಿದನು. ಯಾವುದರಿಂದಲೂ ಅವನ ರೋಗವು ಗುಣವಾಗಲಿಲ್ಲ. ಅವನು ಹಲವು ಪ್ರಕಾರದ ಔಷಧಗಳನ್ನು ಸೇವನೆ ಮಾಡಿದನು. ಗುಣಮುಖವಾಗದ್ದರಿಂದ ಬಹಳೇ ದುಃಖಿತನಾಗಿ ಶೋಕಸಾಗರದಲ್ಲಿ ಮುಳುಗಿದನು. ಆಗ ಅವನ ಬಳಿಯಲ್ಲಿ ಕುಳಿತಿದ್ದ ಬುದ್ಧಿಸಾಗರನೆಂಬ ಚತುರ ಮಂತ್ರಿಯು ರಾಜನನ್ನು

ಸ್ವಾಂತನಗೊಳಿಸಲು ಪ್ರಯತ್ನಿಸಿದನು. ಆದರೂ ರಾಜನು ಏನನ್ನು ಲಕ್ಷಿಸದೆ ಆ ಬುದ್ಧಿಸಾಗರನನ್ನು ಕುರಿತು-- "ಎಲೈ ಮಂತ್ರಿಯೇ ಇನ್ನು ರಾಜ್ಯದಲ್ಲಿ ಯಾವನೂ ವೈದ್ಯನೆಂಬವನು ಇರಕೂಡದು. ಅದರಂತೆ ವಾಗ್ಭಟ, ಚರಕ ಮುಂತಾದ ಭೇಷಕ ಕೋಶ ಗ್ರಂಥಗಳು ನದಿಗಳಲ್ಲಿ ಹರಿದುಹೋಗಲಿ, ಇನ್ನು ನಾನು ಸ್ವರ್ಗಕ್ಕೆ ತೆರಳುವ ಕಾಲವು ಸಮೀಪಿಸಿತು ಎಂದು ತಳಮಳಿಕೆಯಿಂದ ರಾಜನ ಈ ಅಭದ್ರ ವಾಕ್ಯಗಳನ್ನು ಶ್ರವಣಮಾಡಿ ನಾಗರಿಕರೂ, ಕವಿ ಸಮೂಹವೂ ಹಾಗೂ ಅಂತಃಪುರ ನಿವಾಸಿಗಳೂ ಒಂದೇ ಸನನೆ ಕಣ್ಣೀರು ಉದರಿಸ ಹತ್ತಿದರು.

ಅದೇ ಸಮಯದಲ್ಲಿ ದೇವಲೋಕದಲ್ಲಿ ಇಂದ್ರನ ಸಭೆಗೂಡಿದೆ. ನಾರದನು. ಅದೇ ತನ್ನ ಭೂಲೋಕ ಸಂಚಾರವನ್ನು ಮುಗಿಸಿಕೊಂಡು ಆ ಸಭೆಯಲ್ಲಿ ಸೇರಿದನು. ಇಂದ್ರನು ನಾರದನನ್ನು ನೋಡಿ:-- ನಾರದನೇ ಮೃತ್ಯು ಲೋಕದ ವಾರ್ತೆಯೇನು ಎಂದು ಕೇಳಲು ಮುನಿಯು ಧಾರಾನಗರದಲ್ಲಿ ಭೋಜ ರಾಜನಿಗಾದ ಬೇನೆಯ ವೃತ್ತವನ್ನೂ ಹಾಗೂ ಅವನು ತನ್ನ ಕಟ್ಟಪ್ಪಣೆಯಿಂದ ರಾಜ್ಯದಲ್ಲಿನ ವೈದ್ಯ ಹಾಗೂ ವೈದ್ಯಶಾಸ್ತ್ರಗಳಿಗೆಲ್ಲ ಉತ್ಥಾಪ್ಪನೆಯನ್ನುಂಟು ಮಾಡಿದುದನ್ನೂ ಹೇಳಿದನು. ನಾರದನ ಈ ಹೇಳಿಕೆ ಕಿವಿಗೆ ತಾಗಿದ ಕೂಡಲೇ ಇಂದ್ರನು ಅಲ್ಲಿಯೇ ಕುಳಿತಿದ್ದ ಅಶ್ವಿನೀ ಕುಮಾರರನ್ನು ಕುರಿತು:-- ಎಲೆ ಸುರವೈದ್ಯರೇ ನಿಮ್ಮ ಧನ್ವಂತರಿ ಶಾಸ್ತ್ರವು ಅಸತ್ಯವೋ?" ಎಂದು ಕೇಳಲು ಅಶ್ವಿನೀ ಕುಮಾರರು:- "ದೇವರಾಜ ನಮ್ಮ ವೈದ್ಯಶಾಸ್ತ್ರವು ಸದಾ ಸತ್ಯವು ಆದರೆ ಭೂಲೋಕದಲ್ಲಿ ನೃಪತಿ ಭೋಜರಾಜನಿಗೆ ಉಂಟಾದ ಬೇನೆಯು ಮಾನವ ವೈದ್ಯನಿಂದ ವಾಸಿಯಾಗುವದಿಲ್ಲ. ಚಿಕ್ಕ ಮೀನೊಂದು ತಲೆ ಬುರುಡೆಯಲ್ಲಿ ಸೇರಿ ಅವನಿಗೆ ರೋಗವುಂಟಾದುದರಿಂದ ಅದರ ನಿವಾರಣೆ ಮಾನವರಿಂದಾಗದು" ಎಂದು ಹೇಳಲು ಇಂದ್ರನು ಹಸಿತನಾಗಿ:— "ಸುರವೈದ್ಯರೇ ನೀವೇ ವೇಷಾಂತರಿತರಾಗಿ ಭೂಲೋಕಕ್ಕೆ ಹೋಗಿರಿ, ಆ ಧಾರಾನಗರಾಧೀಶನನ್ನು ರೋಗದಿಂದ ಮುಕ್ತಗೊಳಿಸಿ ಬಂದುಬಿಡಿರಿ, ಇಂತಾದರೆ ಮಾತ್ರ ವೈದಿಕ ಶಾಸ್ತ್ರದ ಸತ್ಯತತೆಯು ಅಬಾಧಿತವಾಗುವದು ಎಂದು ಹೇಳಿ ಇಂದ್ರನು ಆ ಅಶ್ವಿನೀಕುಮಾರರನ್ನು ಭೂಲೋಕಕ್ಕೆ ಕಳಿಸಿಕೊಟ್ಟನು.

ಇಂದ್ರನ ಅಪ್ಪಣೆಯಂತೆ ಆ ಸುರವೈದ್ಯರು ವೇಷಾಂತರದಿಂದ ಧಾರಾನಗರಕ್ಕೆ ಬಂದರು, ರಾಜಮಂದಿರಕ್ಕೆ ಹೋದರು. ಆಸನ್ನಮರಣ ಸ್ಥಿತಿ ಭೋಜರಾಜನ ಬಳಿಗೆ ಬಹು ಪ್ರಯತ್ನದಿಂದ ಹೋದರು. ಗುಣಪಡಿಸುವದಾಗಿ ಆ ರಾಜನಿಗೆ ತಿಳಿಸಿದರು. ಇದು ಅಸತ್ಯ ಭ್ರಮವೆಂದು ರಾಜನು ಉದಾಸೀನತೆ ತಾಳಿ ತಾನು ಇಕ್ಕಿಕೊಂಡ ಮೋರೆಯ ಮುಸುಕನ್ನು ಓರೆಮಾಡಿ ಆ ವೇಷಾಂತರಿತ ಸುರವೈದ್ಯರನ್ನು ನೋಡಿದನು. ಅವರ ಮುಖ ದರ್ಶನದಿಂದ ತತ್ ಕ್ಷಣವೇ ರಾಜನ ಮಸ್ತಕಶೂಲೆಯು ಮಾಯವಾಯಿತು. ಶರೀರದಲ್ಲಿ ನಿಶ್ಚೇತನಗೊಂಡ ಚೈತನ್ಯವು ಮತ್ತೆ ಚೇತರಿಸಿಕೊಂಡಿತು. ಎಲ್ಲರೂ ನೋಡನೋಡುತ್ತಿರುವಾಗಲೇ ರಾಜನಿಗೆ ಸಂಪೂರ್ಣ ಆರೋಗ್ಯ ಸ್ಥಿತಿಯು ಲಭಿಸಿತು. ಆ ಬಳಿಕ ವೇಷಾಂತರಿತ ವೈದ್ಯರು:— "ರಾಜನ್! ಇನ್ನು ಭಯಪಡಬೇಡ, ನಿನ್ನ ರೋಗವು ಹಿಮ್ಮೆಟ್ಟಿತೆಂದು ತಿಳಿ ಇನ್ನು ನಾವೂ ನೀನೂ ಏಕಾಂತದಲ್ಲಿ ಕುಳಿತು ವಿಚಾರಿಸೋಣ ನಡೆ, ಎಂದೆನ್ನಲು ರಾಜನು ಅವರೊಂದಿಗೆ ಕಟ್ಟೇಕಾಂತದ ಮಂದಿರಕ್ಕೆ ಕರೆದೊಯ್ದನು.

ಆ ಏಕಾಂತ ಸ್ಥಳಕ್ಕೆ ಹೋದ ಕೂಡಲೇ ವೇಷಾಂತರಿತ ವೈದ್ಯರು ರಾಜನೊಡನೆ ಇನ್ನೊಂದು ನುಡಿಯಲಿಲ್ಲ. ತಮ್ಮಲ್ಲಿದ್ದ ಮೋಹಚೂರ್ಣವನ್ನು ಉಪಯೋಗಿಸಿ ಅವನನ್ನು ಮೂರ್ಛೆಗೊಳಿಸಿದರು. ಆಗಲೇ ಅವನ ತಲೆ ಬುರುಡೆಯನ್ನು ಶಸ್ತ್ರದಿಂದ ಸುಳಿದರು. ಒಳಸೇರಿದ್ದ ಚಿಕ್ಕ ಮೀನವನ್ನು ಹೊರತೆಗೆದು ತಲೆಯನ್ನು ಮುನ್ನಿದಂತೆ ಹೊಂದಿಕೆ ಮಾಡಿದರು. ತಮ್ಮಲ್ಲಿ ಸಂಜೀವನ ಗುಳಿಗೆಯನ್ನು ರಾಜನ ಬಾಯಿಯಲ್ಲಿರಿಸಿ ಅವನನ್ನು ಸಚೇತಗೊಳಿಸಿದರು. ಕೂಡಲೇ ರಾಜನು ಅಲ್ಲಿಯೇ ಒಂದು ಪಾತ್ರೆಯಲ್ಲಿಟ್ಟಿದ್ದ ಮೀನಿನ ಮರಿಯನ್ನು ನೋಡಿ ಚಕಿತನಾದನು. ಅವನು— "ವೈದ್ಯವರ್ಯರೇ! ಇದೇನು ವಿಚಾರ" ಎಂದು ಕೇಳಲು ಅವರು— "ರಾಜಾ ನೀನು ಬಾಲ್ಯದಿಂದಲೂ ಅಭ್ಯಾಸಮಾಡುತ್ತಿದ್ದ ಕಪಾಲ ಶೋಧನೆಯ ಪರಿಣಾಮವೇ ಇದು" ಎಂದರು. "ಆಗ ರಾಜನು—ನಿಮ್ಮಿಂದಲೇ ನನ್ನ ರೋಗವಾಸಿಯಾಯಿತು. ಇನ್ನು ಮೇಲೆ ನಾನು ಅನುಸರಿಸುವ ಪಥ್ಯಪಳಿಗಳೇನು?" ಎಂದು ಕೇಳಲು ಆ ವೇಷಾಂತರಿತ ವೈದ್ಯರು—

||ಅಶೀತೆನಾಂಭಸಾ ಸ್ನಾನಂ
ಪಯಃಪಾನಂ ವರಾಃ ಸ್ತ್ರೀಯಃ
ಏತದ್ಧೋ ಮಾನುಷಾಃ ಪಥ್ಯಮ್

ಈ ಮೂರು ಚರಣಗಳನುಚ್ಚರಿಸಿ ಆ ವೈದ್ಯರು ಸುಮ್ಮನೆ ಕುಳಿತರು. ಈ ಮೇಲಿನ ವಾಕ್ಯಗಳಲ್ಲಿಯ 'ಮಾನುಷಾಃ' ಎಂಬುದಾಗಿ ಸಂಭೋಧಿಸಿದುದನ್ನು ಕೇಳಿ ಭೋಜರಾಜನು ಆ ವೇಷಾಂತರಿತ ವೈದ್ಯರುಗಳನ್ನು ತನ್ನ ಕೈಗಳಿಂದ ಗಟ್ಟಿಯಾಗಿ ಹಿಡಿದನು. ಮತ್ತು ಅವರನ್ನು ಕುರಿತು—ನಾವು ಮಾತ್ರ ಮನುಷ್ಯರು ಆದರೆ ನೀನಾರು? ಎಂದು ಕೇಳು ಕೇಳುತ್ತಿರುವಷ್ಟರಲ್ಲಿ ಅವರು ಅಂತರ್ಧಾನವಾಗುವ ಸಮಯದಲ್ಲಿ— "ರಾಜಾ ! ನಮ್ಮ ಶ್ಲೋಕದ ನಾಲ್ಕನೆಯ ಚರಣವನ್ನು ಕಾಳಿದಾಸನಿಂದ ರಚಿಸಿ ಕೇಳಿಯಾದರೆ ನಿಮಗೆ ವಿದಿತವಾಗುವದು" ಎಂದು ಹೇಳಿ ಅಲ್ಲಿಯೇ ಗುಪ್ತರಾದರು.

ಚಕಿತನಾದ ರಾಜನು ಏಕಾಂತದಿಂದ ಹೊರಬಂದು ಎಲ್ಲರಿಗೂ ಈ ಸಂಗತಿಯನ್ನು ಹೇಳಿದನು ಅದನ್ನು ಕೇಳಿ ಎಲ್ಲರೂ ಆಶ್ಚರ್ಯಗೊಂಡರು. ಅಶ್ವಿನೀಕುಮಾರರು ಹೇಳಿದ ಮೂರು ಚರಣಗಳನ್ನು ರಾಜನು ಕಾಳಿದಾಸನಿಗೆ ಹೇಳಲು ಅವನು—

ಸ್ನಿಗ್ಧಮುಷ್ಣಂ ಚ ಭೋಜನಮ್||

ಎಂಬುದಾಗಿ ನಾಲ್ಕನೆಯ ಚರಣದಿಂದ ಆ ಶ್ಲೋಕ ಪೂರ್ಣ ಮಾಡಿದನು. (ಇಡೀ ಶ್ಲೋಕದ ಅರ್ಥ—

"ಬಿಸಿ ನೀರಿನಿಂದ ಸ್ನಾನ ಮಾಡುವದು, ಹಾಲನ್ನು ಕುಡಿಯುವದು, ಸುಂದರಂತೆ ಸ್ತ್ರೀಯೊಡನೆ ರಮಿಸುವದು, ಇದಲ್ಲದೆ ಸ್ನಿಗ್ಧಯುಕ್ತ ಬಿಸಿಯು ಭೋಜನ ಸ್ವೀಕರಿಸುವದು ಇದೇ ಪಥ್ಯವು)

ಅನಂತರ ಭೋಜರಾಜನು— ಕಾಳಿದಾಸನು ಮನುಷ್ಯ ರೂಪದಿಂದ ಲೀಲೆಯನ್ನು ಮಾಡುವ ದೇವಮೂರ್ತಿಯು" ಎಂದು ನಿಶ್ಚಯವಾಗಿ ತಿಳಿದುಕೊಂಡು ಅವನನ್ನು ಬಹು ಸನ್ಮಾನದಿಂದ ಆದರಿಸಿದನು.

# [೪೫]

ಭೋಜರಾಜನು ವ್ಯಾಧಿಯಿಂದ ಮುಕ್ತನಾದ ನಂತರ ಅವನು ದಿನ ದಿನವೂ ಶುಕ್ಲಪಕ್ಷದ ಚಂದ್ರನಂತೆ ಬಲವಂತನೂ, ಕಾಂತಿಯುಕ್ತನೂ, ಆಗಿ ಶೋಭಿಸಹತ್ತಿದನು. ಒಂದು ದಿನ ಅವನು ಸಭೆಯಲ್ಲಿ ಕಾಳಿದಾಸ, ಭವಭೂತಿ, ದಂಡಿ, ಬಾಣ, ಮಯೂರ ಹಾಗೂ ವರರುಚಿ ಮುಂತಾದ ಕವಿಶ್ರೇಷ್ಠರಿಂದ ಮಿಲಿತನಾಗಿ ಕುಳಿತಿದ್ದನು. ಆಗ ದ್ವಾರಪಾಲಕನು ಬಂದು— ಮಹಾರಾಜ! ಯಾರೋ ಒಬ್ಬ ಕವಿಯು ದ್ವಾರದಲ್ಲಿ ಬಂದು ನಿಂತಿರುವನು. ಅವನು ಕೈಯಲ್ಲಿ ಪುಸ್ತಕ ರೂಪವಾದ ಒಂದು ಪತ್ರವನ್ನು ಕೊಟ್ಟು ಇದನ್ನು ರಾಜಸಭೆಯಲ್ಲಿ ಕೊಡು ಎಂದು ಹೇಳಿರುವನು ಎಂದು ನುಡಿದು ಆ ಪತ್ರವನ್ನು ರಾಜನ ಕೈಗೆ ಕೊಟ್ಟನು. ರಾಜನು ಆ ಪತ್ರವನ್ನು ಬಿಚ್ಚಿ ಓದಹತ್ತಿದನು—

ಕಾಚಿದ್ ಬಾಲಾ ರಮಣಾ ವಸತೀ
ಪ್ರೇಷಯಂತೀ ಕರಂಡಂ
ದಾಸೀ ಹಸ್ತಾತ್ ಸಭಾಯಾ ಮಲಿಖತ್
ವ್ಯಾಲಮಸ್ಯೋ ಪರಿಷ್ಠಿವಾ
ಗೌರೀಕಾಂತಂ ಕವನ ತನಯಂ ಚಂಪಕಂ
ಚಿತ್ರಭಾವಂ
ಪಶ್ಚತ್ಯಾರ್ಯೋ ನಿಪುಣ ತಿಲಕೋ
ಮಲ್ಲಿನಾಥಃ ಕವೀಂದ್ರಃ॥

(ಅರ್ಥ– ಯಾವಳೋ ಒಬ್ಬ ಸ್ತ್ರೀಯಳು ತನ್ನ ದಾಸಿಯಿಂದ ತನ್ನ ಪತಿಗೆ ಒಂದು ಪೆಟ್ಟಿಗೆಯನ್ನು ಕಳುಹಿಸಿದಳು. ಅವಳು ಆ ಪೆಟ್ಟಿಗೆಯ ಮೇಲೆ ಒಂದು ಹಾವಿನ ಚಿತ್ರವನ್ನು ಬರೆದಳು. ಆ ಪೆಟ್ಟಿಗೆಯ ಎಡಬಲ ಬದಿಗೆ ಶಿವ, ಹನುಮ ಹಾಗೂ ಸಂಪಗೆಯ ಹೂ ಇವುಗಳ ಚಿತ್ರಗಳನ್ನು ಬರೆದಿದ್ದಳು. ಹೀಗೆ

ಆ ಸ್ತ್ರೀಯಳು ಬರೆದಿರುವಲ್ಲಿ ಅವಳ ಉದ್ದೇಶವೇನಿರಬಹುದು? ಎಂದು ಶ್ರೇಷ್ಠ ವಿದ್ವಾಂಸನಾದ ಮಲ್ಲಿನಾಥ ಕವಿರಾಜ ಕೇಳುತ್ತಿರುವನು.

ಈ ಪ್ರಕಾರ ಬರೆದಿರುವ ಪೆಟ್ಟಿಗೆಯ ರಚನೆಯನ್ನು ಕೇಳಿ ಸಭೆಯೊಳಗಿನ ವಿದ್ವಾಂಸರೆಲ್ಲರೂ ಆಶ್ಚರ್ಯಚಕಿತರಾದರು. ಆಗ ಕಾಳಿದಾಸನು ರಾಜನನ್ನು ಕುರಿತು—'ರಾಜಾ ಮಲ್ಲಿನಾಥ ಕವಿಯನ್ನು ಶೀವ್ರವಾಗಿ ಕರೆಯಿಸುವದಾಗಬೇಕು' ಎಂದು ಹೇಳಿದನು. ಬಳಿಕ ರಾಜಾಜ್ಞೆಯಿಂದ ದ್ವಾರಪಾಲಕನು ಹೋಗಿ ಮಲ್ಲಿನಾಥ ಕವಿಯನ್ನು ಸಭೆಗೆ ಕರೆತಂದನು. ಭೋಜರಾಜನು ಹೋಗಿ ಮಲ್ಲಿನಾಥನನ್ನು ಕುರಿತು— ಎಲೈ ವಿದ್ವಾಂಸನಾದ ಕವಿಯೇ! ಪುಸ್ತಕ ರೂಪದಿಂದ ರಚಿತವಾದ ಶ್ಲೋಕವು ಬಲು ಚೆನ್ನಾಗಿದೆ ಎಂದು ಅದೇಕೆ ಹೇಳುವಿರಿ ? ಪ್ರಸಾದದಲ್ಲಿರುವ ಪ್ರಾಣೇಶನ ಚರಿತ್ರೆಯ ವರ್ಣನೆಯಲ್ಲಿ ಎಲ್ಲ ಭಾವವೂ ಸೈರಿ ಅದು ಹೊಗಳಿಕೆಗೆ ತಕ್ಕದ್ದಾಗಿರುವದು ಎಂದನು. ಆಗ ಭವಭೂತಿ ಕವಿಯು– "ಈ ಪುಸ್ತಕದಲ್ಲಿ ರಾವಣನ ಉದ್ಯಾನವನ್ನು ನಾಶ ಮಾಡುವ ಹನುಮಂತನ ವರ್ಣನೆಯು ಬಹು ಸುಂದರವಾಗಿ ಹೇಳಿರುವದು" ಎಂದನು. ಆಗ ಭೋಜರಾಜನು ಸಂತುಷ್ಟನಾಗಿ ಮಲ್ಲಿನಾಥನಿಗೆ ಒಂದು ಲಕ್ಷ ಹೊನ್ನುಗಳನ್ನು ಹಾಗೂ ಐದು ಆನೆ, ಹತ್ತು ಕುದುರೆಗಳನ್ನು ಕೊಟ್ಟನು. ಅದರಿಂದ ಕವಿಯು ಸಂತುಷ್ಟನಾಗಿ ರಾಜನಿಗೆ ನಮಸ್ಕರಿಸಿದನು.

|| ದೇವ ಭೋಜ ತವದಾನ ಜಲೌಘೈಃ
ಸಾತ್ರಯೀ ಸ್ಪೃಷ್ಟಮಿತಿ ವೆಶಂ ಕೇ |
ಅನ್ಯತ್ರಾದ್ರುದಿತೇ ಶಿಲಾಗೋ ತರುಘು
ಕಥಮೀದ್ಯ ಶಾದಾದ್ಯತಂ ||

(ಅರ್ಥ– ಎಲೈ ಭೋಜರಾಜ ಪ್ರಭುವೆ ! ನೀನು ದಾನ ಕೊಟ್ಟ ಜಲದಿಂದ ಪ್ರಸಿದ್ಧವಾದ ಚಿಂತಾಮಣಿ ಕಾಮಧೇನು ಕಲ್ಪವೃಕ್ಷ ಈ ಮೂರು ವಸ್ತುಗಳು ಉತ್ಪತ್ತಿಯಾಗುವದೆಂದು ಸಂಶಯ ಬರುತ್ತದೆ ಸಾಮಾನ್ಯವಾಗಿರುವ ಫಲರಾಶಿಯಿಂದ ಉತ್ಪನ್ನವಾಗುವ ಕಲ್ಲು ಆಕಳು ಹಾಗೂ ವೃಕ್ಷಗಳಲ್ಲಿ ಇಷ್ಟೊಂದು ಜ್ಞಾನಶಕ್ತಿಯು ಅದೆಂತು ಬರುವದು ?

ಮಲ್ಲಿನಾಥನ ಈ ಅದ್ಭುತ ಶ್ಲೋಕವನ್ನು ಶ್ರವಣ ಮಾಡಿ ಭೋಜರಾಜನು ಅವನಿಗೆ ಮೂರು ಲಕ್ಷ ಹೊನ್ನುಗಳನ್ನು ಕೊಟ್ಟನು. ಆಗ ಕೋಶಾಧ್ಯಕ್ಷನು ಧರ್ಮಪತ್ರದಲ್ಲಿ-

|| ಪ್ರೀತಃ ಶ್ರೀ ಭೋಜ ಭೂಪಃ ಸದಸಿವಿರಹಿಣೋ
ಗೂಢ ನರ್ಮೋಕ್ತಿ ಪದ್ಯಂ
ಶ್ರುತ್ವಾ ಹೇವತ್ನಂ ಚಲಕ್ಷಂ ದಶ ವರ ತುರಗಾನ್
ಪಂಚ ನಾಗಾನಯುಚ್ಛತ್ ||
ಪಶ್ಚಾತ್ತತ್ರೈ ವ್ಯ ಸೋ ಯಂ ವಿತರಣ ಗುಣ ಸದ್ವರ್ಣನಾತ್
ಪ್ರೀತಚೇತಾ
ಲಕ್ಷಂ ಲಕ್ಷಂ ಚ ಲಕ್ಷಂ ಪುನರಪಿಚ ದದೌ
ಮಲ್ಲಿನಾಥಾಯ ತಸ್ಮೈ ||

(ಅರ್ಥ- ರಾಜಸಭೆಯಲ್ಲಿ ಭೋಜರಾಜನು ಸಂತುಷ್ಟನಾಗಿ ವಿರಚಿತೇಸ್ತ್ರೀಯ ಗುಪ್ತ ಯುಕ್ತ ಶ್ಲೋಕವನ್ನು ಶ್ರವಣ ಮಾಡಿ ಮಲ್ಲಿನಾಥ ಕವಿಗೆ ಒಂದು ಲಕ್ಷ ಹೊನ್ನುಗಳ ಒಂದು ಆನೆ ಹತ್ತು ಕುದುರೆಗಳನ್ನೂ ಕೊಟ್ಟನು. ಆ ಬಳಿಕ ರಾಜನು ತನ್ನ ಉದಾರ ಗುಣದ ಕೀರ್ತಿಯನ್ನು ಶ್ರವಣ ಮಾಡಿ ಆ ಮಲ್ಲಿನಾಥ ಕವಿಗೆ ಮತ್ತೆ ಮೂರು ಲಕ್ಷ ಹೊನ್ನುಗಳನ್ನು ಕೊಟ್ಟನು )

## [೪೬]

ಆ ಬಳಿಕ ಉತ್ತರ ದೇಶದಿಂದ ಒಬ್ಬ ಕವಿಯು ಭೋಜರಾಜನ ಸಭೆಗೆ ಬಂದನು. ಅವನು ರಾಜನನ್ನು "ರಾಜಾ ನಿನಗೆ ಮಂಗಲವಾಗಲಿ ಎಂದು ಆಶೀರ್ವಾದ ಮಾಡಿದನು. ಭೋಜರಾಜನು ಅವನನ್ನು ಕುರಿತು — ಮಹಾರಾಜ ಅಮೃತವನ್ನು ಜಲವೆಂದು ನಿಂದಿಸುವ ಸ್ಥಾನದಲ್ಲಿ ದೇವತೆಗಳೊಡನೆ ಚಾಂಡಾಲರು ಸ್ಪರ್ಧಿಸುವ ಪ್ರದೇಶದಲ್ಲಿ ಹಾಗೂ ಚಿಂತಾಮಣಿಯನ್ನು ಪಾಷಾಣ ಸದೃಶವೆಂದು ತಿಳಿಯುವಲ್ಲಿ ನಾನು ವಾಸ ಮಾಡಿಕೊಂಡು ಇರುವೆನು ಎಂದು ಹೇಳಿ

ದನು ಈ ಹೇಳಿಕೆಗೆ ರಾಜನು ಮೆಚ್ಚಿ ಅವರಿಗೆ ಒಂದು ಲಕ್ಷ ಹೊನ್ನುಗಳನು ಕೊಟ್ಟು—"ಎಲೈ ಪಂಡಿತನೆ! ಕಾಶೀಪ್ರದೇಶದಲ್ಲಿಯು ವಿಶೇಷ ವಾರ್ತೆಯೇನು? ಎಂದು ಕೇಳಿದನು. ಅದಕ್ಕೆ ಆ ಕವಿಯು— ಎಲೈ ರಾಜನೆ! ಈಗ ನಾನು ಅಲ್ಲಿಯ ನಷ್ಟ ಜನರ ಮುಖದಿಂದ ದೇವತೆಗಳು ಬಹಳೇ ಕ್ಲೇಶಪಡುತ್ತಿರು ವರು ಎಂಬ ಸಂಗತಿಯನ್ನು ಕೇಳಿರುವೆನು ಎಂದು ಹೇಳಿದನು. ಅದಕ್ಕೆ ಆ ರಾಜನು—"ಎಲೈ ವಿದ್ವಾಂಸನೆ! ದೇವತೆಗಳಿಗೆ ದುಃಖವೆಂತಾಗುವದು?" ಎಂದು ಪುನಃ ಕೇಳಲು ಆ ಕವಿಯು:—

ನಿವಾಸಃ ಕ್ವಾದ್ಯ ನೋ ದತ್ತೋ ಭೋಜೇನ
ಕನಕಾಚಲ |
ಇತಿ ವ್ಯಗ್ರಧಿಯೋ ದೇವಾ ಭೋಜವಾರ್ತೇತಿ
ನೂತನಾ ||

(ಅರ್ಥ— ಭೋಜರಾಜ! ನೀನು ಕನಕಾಚಲವನ್ನು ದಾನ ನೀಡಿ ಕುಳಿತಿರುವಿ. ಈ ಮೂಲಕವಾಗಿಯೇ ದೇವತೆಗಳು "ಇನ್ನು ನಾವು ಅದೆಲ್ಲಿಗೆ ಹೋಗಿ ಇರಬೇಕು! ಎಂದು ಚಿಂತಾಗ್ರಸ್ತರಾಗಿರುವರು. ರಾಜಾ! ಇದೇ ಆ ಪ್ರದೇಶದಲ್ಲಿ ವರ್ಣಿಸಿದ ಅದ್ಭುತ ಸುದ್ದಿಯು ಎಂದನು.

ಆಗ ಭೋಜರಾಜನು ಆ ಕವಿಯ ಆಶ್ಚರ್ಯಕಾರಕ ಹೇಳಿಕೆಯಿಂದ ಪ್ರಸನ್ನನಾಗಿ ಆ ಕವಿಗೆ ಒಂದು ಲಕ್ಷ ಹೊನ್ನುಗಳನ್ನು ಕೊಟ್ಟನು

## [೪೭]

ಒಂದು ದಿನದ ರಾತ್ರಿಯಲ್ಲಿ ಭೋಜರಾಜನು ನಗರದಲ್ಲಿ ಸುತ್ತಾಡುತ್ತಿದ್ದನು. ಆಗ ಅವನು ಒಂದು ಮನೆಯಲ್ಲಿ ಸ್ತ್ರೀಯೊಬ್ಬಳು ಒರಳಲ್ಲಿ ಒನಿಕೆಯಿಂದ ಧಾನ್ಯವನ್ನು ತಳಿಸುತ್ತಿರುವದನ್ನು ಕಂಡನು. ಅವನು ಚಂದ್ರಾನನೆಯೂ ಕೋಮಲಾಂಗಿಯೂ ಆಗಿರುವ ಆ ಯುವತಿಯು ಕೈಯಲ್ಲಿಯ ಒನಿಕೆಯನ್ನು ನೋಡಿ ಅದನ್ನೇ ಕುರಿತು— ಎಲೈ ಒನಕೆಯೆ! ಈ ತರುಣಿಯ ಪಲ್ಲವ ಸದೃಶವಾದ ಹಸ್ತದಲ್ಲಿ ಬಂದು ಸೇರಿದ್ದರೂ ನೀನು ಪಲ್ಲವನಂತೆ

ಕೋಮಲತೆಯನ್ನು ಹೊಂದಿರುವದಿಲ್ಲ. ಪೂರ್ಣವಾಗಿ ನೀನು ಕಟ್ಟಿಗೆಯಾಗಿಯೇ ಇರುವಿ ಎಂದು ಉಚ್ಚರಿಸಿದನು. ಮತ್ತು ಆದಕ್ಕನುಸರಿಸಿ ಒಂದು ಶ್ಲೋಕದ ಚರಣವನ್ನು ಅಲ್ಲಿಯೇ ರಚಿಸಿ ಪಠಿಸಿದನು. ಎಂತೆಂದರೆ–

|| ಮುಸಲ ಕಿಸಲಯಂ ತೇ
ತತ್‍ಕ್ಷಣಾದ್ಯನ್ನ ಜಾತವ್ ||

ಆ ಬಳಿಕ ಮರುದಿನ ರಾಜನು ಸಭೆಯನ್ನು ಪ್ರವೇಶಿಸಿ ಕಾಳಿದಾಸನನ್ನು ನೋಡಿ ತಾನು ರಚಿಸಿದ ಶ್ಲೋಕ ಚರಣಗಳನ್ನು ಉಚ್ಚರಿಸಿದನು. ಮತ್ತು ಅವನನ್ನು ಕುರಿತು— ಎಲೈ ಕವಿಪರ್ಯನೆ? ಈ ಶ್ಲೋಕ ಚರಣದೊಂದಿಗೆ ಇನ್ನುಳಿದ ಮೂರು ಚರಣಗಳನ್ನು ಉಚ್ಚರಿಸು" ಎಂದನು. ಆಗ ಕಾಳಿದಾಸನು—

"ಜಗತಿ ವಿದಿತ ಮೇತತ್ ಕಾಷ್ಠಮೇವಾಸಿ ನೂನಂ
ತದಪಿಚಕಿಸತ್ಯಂ ಕಾನನೇ ವರ್ಧಿತೋಽಸಿ ||
ನವ ಕುವಲಯನೇತ್ರಿ ಪಾಣಿ ಸಂಗೋತ್ಸವೇಸ್ಮಿನ್?
ಮುಸಲಕಿಸಲಯಂ ತೇ ತತ್ ಕ್ಷಣಾದ್ಯನ್ನಜಾತವ್ ||

(ಅರ್ಥ– "ಎಲೆ ಒನಿಕೆಯೆ ! ನೀನು ಅರಣ್ಯದಲ್ಲಿ ಬೆಳೆದ ಕಟ್ಟಿಗೆಯೆಂಬುದು ಜಗತ್ತಿಗೇ ತಿಳಿದ ಮಾತಾಗಿದೆ. ಇದೀಗ ನೀನು ನವಕಮಲದಳನೇತ್ರೆಯಾದ ಸ್ತ್ರೀಯಳ ಹಸ್ತಸ್ಪರ್ಶದಿಂದ ವಿವಾಹಕ್ಕೆತಕ್ಕವಳಾದ ಅವಳಂತೆ ನೀನು ಪಲ್ಲವದಂತೆ ಕೋಮಲತೆಯನ್ನೂ ಆದೇಕೆ ಹೊಂದಲಿಲ್ಲ? ಯಾವ ಪುರುಷನಾದರೂ ವಿವಾಹ ಸಮಯದಲ್ಲಿ ಸ್ತ್ರೀಯಳ ಹಸ್ತಸ್ಪರ್ಶದಿಂದ ರೋಮಾಂಚಿತಗೊಳ್ಳುವನು. ಅವನಂತೆಯೂ ನೀನೇಕೆ ಆಗಲಿಲ್ಲ?

ಈ ಪ್ರಕಾರ ಕಾಳಿದಾಸನು ರಾಜನಿಂದ ರಚಿತ ಒಂದು ಚರಣಕ್ಕೆ ತನ್ನ ಮೂರು ಚರಣಗಳನ್ನು ಸೇರಿಸಿ ಒಂದು ಶ್ಲೋಕವನ್ನು ಪಠಿಸಿದನು.

ಕಾಳಿದಾಸನ ಈ ವಿದ್ವತ್ತೆಗೆ ಮೆಚ್ಚಿ ಭೋಜರಾಜನು ಒಂದೊಂದು ಚರಣಕ್ಕೆ ಒಂದೊಂದು ಲಕ್ಷ ಹೊನ್ನಿನಂತೆ ಅವನಿಗೆ ಮೂರು ಲಕ್ಷ ಹೊನ್ನು ಕೊಟ್ಟು ಸನ್ಮಾನಿಸಿದನು.

೪೮

ಒಂದು ದಿನ ರಾತ್ರಿಯಲ್ಲಿ ಭೋಜರಾಜನು ತನ್ನ ಉಪ್ಪರಿಗೆಯ ಮಂದಿರದಲ್ಲಿ ಪ್ರಿಯ ಪತ್ನಿಯ ಬರುವಿಕೆಯ ಸಮಯವನ್ನು ಕಾಯುತ್ತ ಕುಳಿತಿದ್ದನು. ಆಕೆಯು ಪತಿಸನ್ನಿಧಿಗೆ ಬರುವದಕ್ಕೆ ಸ್ವಲ್ಪ ಅವಕಾಶವಾಯಿತು. ಆದರೂ ಅವಳು ಪತಿಯ ರೋಷಕ್ಕೆ ಗುರಿಯಾಗಬಾರದೆಂದು ಲಗುಬಗೆಯಿಂದ ತನ್ನ ದಿನದ ಎಲ್ಲ ಕೆಲಸಗಳನ್ನು ಮುಗಿಯಿಸಿದಳು. ನಂತರ ಪಂಚಾರತಿಯನ್ನು ಅಳವಡಿಸಿಕೊಂಡಳು. ಅದನ್ನೂ ಪನ್ನೀರು ತುಂಬಿದ ಬಂಗಾರದಿಂದ ಗಿಂಡಿಯನ್ನು ಕೈಯಲ್ಲಿ ಹಿಡಿದುಕೊಂಡು ಭರಭರನೆ ದ್ವಾರಕ್ಕೆ ಬಂದಳು. ಉಪ್ಪರಿಗೆಯ ಪಾವಟಿಗೆಗಳನ್ನು ಒಳ್ಳೇ ಗಡಿಬಿಡಿಯಿಂದ ಏರಹತ್ತಿದಳು. ಆಗ ಅವಳು ತಾನು ಪತಿಯೊಡನೆ ಕ್ರೀಡಿಸುವ ಲೀಲಾವಿಲಾಸ ಕ್ರಿಯೆಗಳನ್ನೇ ಹೃದಯದಲ್ಲಿ ತುಂಬಿಕೊಂಡು ಬಾಹ್ಯ ಸ್ಮೃತಿಯಿಲ್ಲದೆ ಮೇಲಿನ ಪಾವಟಿಗೆಗೆ ಬರುವಷ್ಟರಲ್ಲಿಯೇ ಮುಗ್ಗರಿಸಿದಳು. ಆಕೆಯ ಕೈಯಲ್ಲಿಯ ಪಂಚಾರತಿಯ ತಾಟೂ ಪನ್ನೀರಿನ ಗಿಂಡಿಯೂ ಕೆಳಕ್ಕೆ ಬಿದ್ದವು. ಅವು ಬಿದ್ದ ನಂತರ ಒಳಗಿನ ಪಾವಟ್ಟಿಗೆಗಳ ದ್ವಾರದಿಂದ ಠಣ ಠಣ ಸಪ್ಪಳ ಮಾಡುತ್ತ ಮೊದಲನೆಯ ಪಾವಟ್ಟಿಗೆ ದಾಟಿ ಹೋಗಿ ಬಿದ್ದವು. ಮುಗ್ಗರಿಸಿದ ಆಕೆ ಸಾವರಿಸಿಕೊಂಡೆದ್ದು ಪತಿ ಸನ್ನಿಧಿಗೆ ಹೋದಳು. ರಾಜನು ಆ ಪಂಚಾರತಿ ಹಾಗೂ ಕಲಶಗಳಿಂದ ಅಂತ್ಯ ಬಿಡದೆ ಹುಟ್ಟಿದ ಸಪ್ಪಳವನ್ನು ಕೇಳಿ ಆಗಲೇ ಒಂದು ಶ್ಲೋಕಚರಣವನ್ನು ಸಮಸ್ಯೆಯಾಗಿ ಸಿದ್ಧಪಡಿಸಿದನು. ಹಾಗೂ ಮರುದಿನ ಸಭೆಗೆ ಹೋದನು. ತಾನು ರಾತ್ರಿಯಲ್ಲಿ ವಿರಚಿಸಿದ ಧ್ವನಿ ಸಮಸ್ಯೆಯ ಚರಣವನ್ನು ಅಲ್ಲಿ ಮಿಲಿತರಾಗಿದ್ದ ಪ್ರತಿಯೊಬ್ಬ ಪಂಡಿತನೆದುರಿಗೆ "ಠಾಠಂ ಠಠಂಠಠಠಠಂ ಠಠಂ ಠಃ॥" ಎಂದು ಉಚ್ಚರಿಸಹತ್ತಿದನು. ಯಾರೂ ಅವನ ಸಮಸ್ಯೆಯನ್ನು ಪೂರ್ಣ ಮಾಡಲು ಸಮರ್ಥರಾಗಲಿಲ್ಲ.

ಕಡೆಗೆ ಕಾಳಿದಾಸನು ಆ ಸಭೆಗೆ ಬಂದನು. ಅವನು ನಿತ್ಯದಂತೆ ರಾಜನಿಗೆ ಆಶೀರ್ವಾದ ಮಾಡಿ ತನ್ನ ಆಸನದ ಮೇಲೆ ಕುಳಿತುಕೊಳ್ಳಲು ಹೋಗುವಷ್ಟರಲ್ಲಿಯೇ ಭೋಜರಾಜನು– "ಕಾಳಿದಾಸರೇ!

ಠ ಠಂ ಠಠಠಂ ಠಠಠಂಠ ಠಂಠಃ||

ಎಂದು ಉಚ್ಚರಿಸಿದನು. ಕಾಳಿದಾಸನು ರಾಜನ ಮುಖೋದ್ಗಳಿತ ಸಮಸ್ಯೆಯನ್ನು ಕೇಳಿ ಮುಗುಳ್ನಕ್ಕು–"ರಾಜಾ!

ಭೋಜಸ್ಯ ಭಾರ್ಯಾ ಮದ ವಿಹ್ವಲಾಯಾಃ
ಕರಚ್ಚ್ಯುತಂ ಚಂದನ ಹೇಮಪಾತ್ರಂ ||
ಸೋಪಾನ ಮಾರ್ಗೇ ಪಕರೋತಿ ಶಬ್ದಂ

(ಅರ್ಥ–''ಭೋಜರಾಜನ ಸತಿಯು ಕಾಮವಿಹ್ವಲತೆಯುಳ್ಳವಳಾಗಿ ಕೈಯಲ್ಲಿ ಚಂದನಯುಕ್ತ ಸುವರ್ಣ ಕಲಶ ಹಾಗೂ ಪಂಚಾರತಿಯನ್ನೆತ್ತಿಕೊಂಡು ಬರುವಾಗ ಕಾಲ್ದಪ್ಪಿತು. ಆಗ ಅವಳು ಕೈಯಲ್ಲಿ ಹಿಡಿದಿದ್ದ ಪಂಚಾರತಿ ಕೆಲಸಗಳು ಕೆಳಕ್ಕೆ ಬಿದ್ದವು. ಮತ್ತು ಅವು ಪಾವಟ್ಟಿಗೆಗಳಿಂದ ಗುಡುಗುಡು ಉರುಳುತ್ತ ಕೆಳಕ್ಕೆ ಹೋಗುವಾಗ ಠಾ ಠಣ್ ಠಣ್ ಎಂಬ ಸಪ್ಪಳವಾಯಿತು)

ಈ ಪ್ರಕಾರ ಕಾಳಿದಾಸನು ದೇವಿಯ ಪ್ರಸನ್ನತೆಯಿಂದ ತತ್‌ಕ್ಷಣವೇ ಸಮಸ್ಯೆಯನ್ನು ಪೂರ್ಣ ಮಾಡಿದನು. ಅದನ್ನು ಕೇಳಿ ರಾಜನಿಗೆ ಏಕಕಾಲಕ್ಕೆ ಆನಂದ ಆಶ್ಚರ್ಯಗಳುಂಟಾದವು

ಕೂಡಲೇ ಅವನು ನೆರೆದ ವಿದ್ವಜ್ಜನರ ಸಮಕ್ಷಮವೇ ಕಾಳಿದಾಸನನ್ನು ಯಥೋಚಿತವಾಗಿ ಮರ್ಯಾದಿಸಿದನು.

## (೪೬)

ಒಂದು ದಿನ ಒಬ್ಬ ಸೇವಕನು ರಾಜಮಂದಿರಕ್ಕೆ ಬಂದು– ಎಲೈ ಮಹಾರಾಜ! ತಾವು ರಾಜಬೊಕ್ಕಸದೊಳಗಿನ ದ್ರವ್ಯಗಳನ್ನೆಲ್ಲ ಕವಿಗಳಿಗೆ ನೀಡಿಬಿಟ್ಟಿರಿ ಈಗ ಕೋಶಾಗಾರದಲ್ಲಿ ಧನವೇ ಇಲ್ಲದಂತಾಗಿದೆ ಎಷ್ಟೋ ಕವಿಗಳು ಬಂದು ದ್ವಾರದಲ್ಲಿ ನಿಂತಿರುವರು. ಪ್ರಧಾನಮಂತ್ರಿಗಳು ನನ್ನನ್ನು ಕುರಿತು– ಇನ್ನು ಮೇಲೆ ಯಾವ ಕವಿಯೇ ಬರಲಿ, ವಿದ್ವಾಂಸರೇ ಬರಲಿ, ಅವರನ್ನು ಮಹಾರಾಜನ ಸನ್ನಿಧಿಗೆ ಕಳಿಸಿಕೊಡಬೇಡ ಹಾಗೂ ರಾಜನು ಇಡೀ ಬೊಕ್ಕಸ

ಬರಿದು ಮಾಡಿಗವನು ಎಂದು ಹೇಳಿದನು. ಅದನ್ನೇ ನಾನು ಈಗ ತಮಗೆ ವಿದಿತಪಡಿಸುವೆ" ಎಂದು ಸೇವಕನು ನುಡಿದನು. ಆಗ ರಾಜನು— "ಎಲೈ ಸೇವಕನೇ! ನೀನು ಈಗಲೇ ಮಹಾದ್ವಾರಕ್ಕೆ ಹೋಗು ಅಲ್ಲಿ ನಿಂತಿರುವ ಕವಿಗಳನ್ನು ಕರೆದುಕೊಂಡು ಬಂದುಬಿಡು" ಎಂದು ಆಜ್ಞೆ ಮಾಡಿದನು. ರಾಜಾಜ್ಞೆಯಂತೆ ಸೇವಕನು ಹೋಗಿ ದ್ವಾರದಲ್ಲಿ ನಿಂತಿರುವ ಕವಿಗಳನ್ನು ಕರೆತಂದನು. ಆ ಕವಿಗಳು ರಾಜನಿಗೆ ವಂದಿಸಿ "ರಾಜನ್! ನಿನಗೆ ಮಂಗಳವಾಗಲಿ" ಎಂದು ಆಶೀರ್ವಾದ ಮಾಡಿದರು. ಅವರಲ್ಲಿ ಒಬ್ಬ ಕವಿಯು—

"ನಭಸಿ ನಿರವಲಂಬೇ ಸೀದತಾ
ದೀರ್ಘಕಾಲಂ
ತ್ವದಭಿ ಮುಖವಿಸೃಷ್ಟೋತ್ತಾನ
ಚಂಚೂ ಪುಟೇನ ||
ಜಲಧರ್ಕ ಜಲಧಾರಾ ದೂರತಸ್ತಾ
ವದಸ್ತಾ
ಧ್ವನಿರುಪಿ ಮಧುರಸ್ತೇನ
ಶ್ರುತಶ್ಚಾತಕೇನ ||"

(ಅರ್ಥ— ಎಲೈ ಮೇಘನೇ! ದೀರ್ಘಕಾಲದಿಂದ ನಿರಾಶ್ರಿತನಾಗಿ ಕಷ್ಟ ಸೋಸಿದರೂ ನಿನ್ನನ್ನು ಕಂಡು ಬಾಯ್ದೆರೆದು ಚುಂಚವನ್ನು ವಿಸ್ತಾರವಾಗಿ ಮಾಡಿದ ಆ ಚಾತಕ ಪಕ್ಷಿಯಂತೆ ಜಲಧಾರೆಯು ದೂರೇ ಇರುವದು ನಿನಗೆ ಆ ಪಕ್ಷಿಯ ಮಧುರ ಧ್ವನಿಯು ಕೇಳ ಬರಲಿಲ್ಲವೇ)

ಈ ಪ್ರಕಾರ ಕವಿಯು ನುಡಿದ ಶ್ಲೋಕವನ್ನು ಕೇಳಿ ಭೋಜರಾಜನು ವಿಚಾರಕ್ಕೊಳಗಾದನು. ಅವನು ತನ್ನಲ್ಲಿ ವಿದ್ವಾಂಸರಾದ ಕವಿಗಳು ಬಂದು ದ್ವಾರದಲ್ಲಿ ನಿಂತು ಕಷ್ಟವನ್ನು ಹೊಂದುವರೆಂದ ಮೇಲೆ ಈ ನನ್ನ ಜೀವನಕ್ಕೆ ಧಿಕ್ಕಾರವಿರಲಿ ಎಂದು ನುಡಿದುಕೊಂಡು ತಾನು ಮೈಮೇಲೆ ಧರಿಸಿದ್ದ ಎಲ್ಲ ಅಲಂಕಾರಗಳನ್ನು ತೆಗೆತೆಗೆದು ಆ ಕವಿಗಳಿಗೆ ಕೊಟ್ಟುಬಿಟ್ಟನು. ಮತ್ತು ಅವನು ಕೋಶಾಧೀಶನನ್ನು ಕರೆಯಿಸಿ— ಎಲೈ ಕೋಶರಕ್ಷಕನೆ! ಮಂಜುರ್‍ಾಜನ ಹಾಗು ನನ್ನ ಪೂರ್ವಜರ ಕೋಶಾಗಾರದಲ್ಲಿ ಸಂಗ್ರಹಿಸಿಟ್ಟ ರತ್ನಗಳಿಂದ

ತುಂಬಿದ ಕೊಡಗಳು ಎಲ್ಲಿ ಇರುವ ? ಎಂದು ಕೇಳುತ್ತಿರುವಷ್ಟರಲ್ಲಿಯೇ ಕಾಶ್ಮೀರದಿಂದ ಮುಚುಕುಂದನೆಂಬ ಕವಿಯು ಬಂದು ರಾಜನಿಗೆ ಸ್ವಸ್ತಿ ಎಂದು ಉಚ್ಚರಿಸಿದನು. ಮತ್ತು ಅವನು--

|| ತ್ವದ್ಯಶೋ ಸಿಂಧೌ ಭೋಜಮಜ್ಜನ
ಭಯಾದಿವ |
ಸೂರ್ಯೇಂದು ಬಿಂಬಮಿಷತೋ ಧತ್ತೆ
ಕುಂಭದ್ವಯಂನಭಃ ||

(ಅರ್ಥ-- ಭೋಜರಾಜನೆ! ನಿನ್ನ ಕೀರ್ತಿರೂಪವಾದ ಸಮುದ್ರದಲ್ಲಿ ಮುಳುಗುವದಕ್ಕೆ ಬೆದರಿ ಆಕಾಶವು ಸೂರ್ಯ ಹಾಗೂ ಚಂದ್ರಬಿಂಬಗಳೆಂಬ ಎರಡು ಕುಂಭಗಳನ್ನು ಧಾರಣ ಮಾಡಿಕೊಂಡಿರುವದು)

ರಾಜನು ಮುಕುಂದ ಕವಿಗೆ ಪ್ರತಿ ಅಕ್ಷರಕ್ಕೂ ಒಂದೊಂದು ಲಕ್ಷದಂತೆ ಹೊನ್ನುಗಳನ್ನು ಕೊಟ್ಟನು.

ಮತ್ತೆ ಆ ಕವಿಯು—

|| ಆಸನ್ ಕ್ಷೀಣಾನಿ ಯಾವಂತಿ
ಜಾತಕಾಶ್ರೂಣಿ ತೇಂಬುದ |
ತಾನಂತೋಪಿ ತ್ವಯೋದಾರ
ನ ಮುಕ್ತಾ ಜಲ ಬಿಂದವಃ "

(ಅರ್ಥ- ಎಲೈ ಮೇಘವೇ! ಜಲವೃಷ್ಟಿಯಲ್ಲಿ ಸುರಿಸುವಲ್ಲಿ ಕೃಪಣತನವನ್ನು ತೋರುವಷ್ಟು ಜಾತಕವು ತನ್ನ ಕಣ್ಣೀರು ಸುರಿಸಿ ಅಷ್ಟೇ ಔದಾರ್ಯವನ್ನು ವ್ಯಕ್ತಪಡಿಸಿತು. ಎಲೈ ಮೋಡವೆ! ನೀನು ಜಾತಕದ ಅಶ್ರುಬಿಂದುವಿಗೆ ಕೊಡತಕ್ಕಷ್ಟು ಜಲಬಿಂದುವನ್ನು ಕೊಡಲಿಲ್ಲ)

ಈ ಶ್ಲೋಕವನ್ನು ಕೇಳಿ ಭೋಜರಾಜನು ಆ ಮುಚುಕಂದ ಕವಿಗೆ ಒಂದು ನೂರು ಕುದುರೆಗಳನ್ನು ಪ್ರಸನ್ನತೆಯಿಂದ ಕೊಟ್ಟನು. ಆಗ ಬೊಕ್ಕಸದ ಲೆಖ್ಖ ಬರೆಯುವ ಭಂಡಾರಿಯು—

|| ಮುಚುಕುಂದಾಯ ಕವಿಯೇ
ಜಾತ್ಯಾನಶ್ವಾನ್ ಶತಂ ದದೌ

ಭೋಜ ಪ್ರದತ್ತ ಲಕ್ಷೋಪಿ
ತೇನಾಸೌ ಯಾಚಿತಃ ಪುನಃ ||

(ಅರ್ಥ- ಭೋಜರಾಜನು ಮುಚುಕುಂದ ಕವಿಗೆ ಅವನ ಶ್ಲೋಕದ ಪ್ರತಿಯಕ್ಷರಕೆ ಒಂದೊಂದು ಲಕ್ಷ ಹೊನ್ನುಗಳನ್ನು ಕೊಟ್ಟನು. ಪುನರ್ಯಾಚನೆಗೆ ಒಂದುನೂರು ಶ್ರೇಷ್ಠ ಕುದುರೆಗಳನ್ನು ಕೊಟ್ಟನು) ಎಂದು ಉಲ್ಲೇಖಿಸಿದನು.

ಬಳಿಕ ಭೋಜರಾಜನು ಎಲ್ಲರಿಗೂ ಅಪ್ಪಣೆ ಕೊಟ್ಟು ಕಳಿಸಿ ತಾನು ತನ್ನ ಮಂದಿರಕ್ಕೆ ಹೋದನು.

## (೫೦)

ಆ ನಂತರ ರಾಜನಿಗೆ ಚಾಮರ ಬೀಸುವ ಸೇವಿಕೆಯೋರ್ವಳು ಬಂದು

|| ರಾಜನ್ಮುಂಜ ಕುಲಪ್ರದೀಪ ಸಕಲ ಕ್ಷ್ಮಾಭರ್ತ
ಚೂಡಾಮಣೇ |
ಯುಕ್ತರಿ ಸಂಚರಣಂ ತವಾದ್ಭುತಮಣಿಚ್ಛತ್ರೇಣ
ರಾತ್ರಾವಪಿ ||
ಮಾಭೂತ್ತ್ವದನಾವಲೋಕನ ವಶಾದ್ ವ್ರಿಡಾಭಿ
ನವ್ರಃಶಶೀ |
ಮಾಭೂಚ್ಚೇಯಮರುಂಧತೀ ಭಗವತೀ
ದುಶೀಲತಾ ಭಾಜನಮ್ ||

(ಅರ್ಥ- ಎಲೈ ಮುಂಜವಂಶದೀಪಕನೇ! ಸಮಸ್ತ ರಾಜ ಮುಕುಟ ಮಣಿಯೇ ನಿನ್ನ ಕಾಂತಿಯುಕ್ತ ರತ್ನಖಚಿತ ಛತ್ರದಿಂದುದಿತ ಪ್ರಭೆಯು ಹೊಳೆಯುವದು. ಆದರಿಂದ ರಾತ್ರಿಯಲ್ಲಿ ಸಹಸಂಚರಣೆಯು ಸುಖದಾಯಕವೆನ್ನಿಸುವದು ಆದರೆ ಎಲೈ ರಾಜನೇ ನಿನ್ನ ಕಮಲವದಂತಿರುವ ಮುಖವನ್ನು ನೋಡಿ ಚಂದ್ರನು ಲಜ್ಜಿತನಾಗದಿರಲಿ, ಭಗವತಿಯಾದ ಅರುಂಧತಿಯು ದುಶ್ಶೀಲತೆಯನ್ನು ಹೊಂದದಿರಲಿ)

(೫೧)

ತದನಂತರ ಕೆಲ ದಿನಗಳ ಮೇಲೆ ಕುಂಡಿನೀಪುರದಿಂದ 'ಗೋಪಾಳ' ಎಂಬ ಹೆಸರಿನ ಕವಿಯು ಭೋಜನ ಸಭೆಯ ಸಭೆಗೆ ಬಂದನು. ಅವನು 'ರಾಜನಿಗೆ ಮಂಗಲವಾಗಲಿ ಎಂದು ಉಚ್ಚರಿಸಿ.—

|| ತ್ವಚ್ಚಿತ್ತೆಭೋಜನಿರ್ಯಾತಂ
ದ್ವಯಂ ತೃಣಕಣಾಯತೇ ||
ಕ್ರೋಧೇವಿರೋಧಿನಾಂಸೈನಂ
ಪ್ರಸಾದೇಕನಕೋಚ್ಚಯಃ ||

(ಅರ್ಥ– "ಎಲೈ ರಾಜನ್! ನಿನ್ನ ಅಂತಃಕರಣದಲ್ಲಿ ಉತ್ಪನ್ನವಾದ ಎರಡು ವಸ್ತುಗಳು ತೃಣ ಹಾಗು ಕಣಗಳಿವೆ. ಸದೃಶವಾಗಿ ಇರುವವು. ಹೇಗೆಂದರೆ– ಸಿಟ್ಟಿನ ಸಮಯದಲ್ಲಿ ನೀನು ವೈರಿಗಳ ಸೈನ್ಯವನ್ನು ತೃಣಕ್ಕೆ ಅಂದರೆ ಹುಲ್ಲುಕಡ್ಡಿಗೆ ಬಗೆಯುವಿ ಅದರಂತೆ ಆನಂದದ ಪ್ರಸಂಗದಲ್ಲಿ ಹೊನ್ನಿನ ರಾಶಿಯನ್ನು ಕಣ (ಚೂರು) ಎಂದು ಬೆಳೆಸುವಿ)

ಎಂಬ ಅರ್ಥಯುಕ್ತ ಶ್ಲೋಕವನ್ನು ಉಚ್ಚರಿಸಿದನು. ಅದನ್ನು ಕೇಳಿ ರಾಜನು ಸಂತುಷ್ಟನಾದರೂ ಆ ಕವಿಗೆ ಮೆಚ್ಚುಗೆಯನ್ನು ಕೊಡಲಿಲ್ಲ. ಬೇರೆಯವರೊಡನೆ ಮಾತಾಡುತ್ತ ಕುಳಿತನು. ಆಗ ಕವಿಯು ತನ್ನಲ್ಲಿ ಈ ರಾಜನು ಶ್ಲೋಕವನ್ನು ಕೇಳಿದರೂ ನನ್ನನ್ನು ಅಲಕ್ಷಿಸಿದನಲ್ಲ! ಎಂದು ವಿಚಾರಿಸಿ ಅತ್ತಿತ್ತ ನಿರೀಕ್ಷಿಸಿದನು. ಆಕಾಶದಲ್ಲಿ ಮುಸುಕಿದ ಮೋಡವನ್ನು ಕಂಡನು ಅದನ್ನೇ ತನ್ನ ಇನ್ನೊಂದು ಶ್ಲೋಕಕ್ಕೆ ವಸ್ತುತನ್ನಾಗಲೀ ರಾಜನನ್ನು ಕುರಿತು.—

|| ಹೇಪಾಥೋದ ಯಃಥೋನ್ನಂತಂ ಹಿ ಭವತಾ
ದಿಗ್ವ್ಯಾಪ್ತಾ ಸರ್ವತೋ |
ಮನ್ಯೇಧೀರ ತಥಾ ಕರೀಷ್ಯಸಿಖಿಲು
ಕ್ಷೀರಾಬ್ಧಿ ತುಲ್ಯಂ ಸರಃ ||

ಕೆಂತೇಪ ಕ್ಷನುತೇ ನಹಿ ಕ್ಷಣಮುಹಿಗ್ರೀಷ್ಮೋಷ್ಮಣಾ
ವ್ಯಾಕುಲಃ |
ಪಾಠೀನಾದಿಗಣ ಸ್ತ್ವದೇಕ ಶ ಣ ಸ್ತದ್ವರ್ಷತಾಂ
ಕುತ್ರಚಿತ್ ||

(ಅರ್ಥ— "ಎಲೈ ಪಾಂಥಸ್ಥರು ಕಷ್ಟನೀಗುವ ಮೊದಲೇ! ನೀನು ಎಲ್ಲ ದಿಕ್ಕುಗಳಲ್ಲಿ ಪಸರಿಸುವೆ ಎಲೈ ಧೀರನೇ! ನೀನು ಮಳೆ ಸುರಿಸಿ ಎಲ್ಲ ಜಲಾಶಯಗಳನ್ನು ತುಂಬಿಸಿ ಬಿಡುವಿ. ಹಾಗೂ ಅವುಗಳನ್ನು ನೀನು ಕ್ಷೀರ ಸಾಗರದಂತೆ ಮಾಡಿಬಿಡುವಿ ಆದರೆ ಎಲೈ ಮಹಾಶಯನೇ! ಆ ಉಷ್ಣತೆಯ ತಾಪವನ್ನು ಮೀನು ಮುಂತಾದ ಜೀವ ಜಂತುಗಳು ಸ್ವಲ್ಪ ಕಾಲ ಸಹ ತಾಳಿಕೊಳ್ಳಲಾರವು ಆದ್ದರಿಂದ ನೀನು ಎಲ್ಲಿಯಾದರೂ ಮಳೆಯನ್ನು ಸುರಿಸು)

ಈ ಪ್ರಕಾರ ಆ ಕವಿಯು ಉಚ್ಚರಿಸಿದನು.

ಭೋಜರಾಜನು ಈ ಗೋಪಾಲ ಕವಿಯ ಹೃದ್ಭಾವವನ್ನು ಅರಿತುಕೊಂಡು— ಎಲೈ ಗೋಪಾಲ ಕವಿಯೇ? ನೀನು ದರಿದ್ರವೆಂಬ ಅಗ್ನಿಯಿಂದ ಬಲು ಸಂತಪ್ತನಾಗಿರುವಿ" ಎಂದು ಹೇಳಿ ಆಗಲೇ ಅವನಿಗೆ ಹದಿನಾರು ಅಮೂಲ್ಯ ರತ್ನಗಳನ್ನು ಹದಿನಾರು ಆನೆಗಳನ್ನೂ ಕೊಟ್ಟನು.



## (೫೨)

ಒಂದು ನದಿ ದೂರದಿಂದ ಒಬ್ಬ ವಿದ್ವಾಂಸನು ತನ್ನ ಸತಿ—ಸುತ ಹಾಗೂ ಸೊಸೆ ಇವರೆಲ್ಲರಿಂದ ಕೂಡಿಕೊಂಡು ಧಾರಾನಗರಕ್ಕೆ ಬಅದರು. ಅವನು ತನ್ನ ಪರಿವಾರ ಸಹಿತ ಭೋಜರಾಜನ ಪವಿತ್ರ ವಿದ್ವತ್ಕುಲ ಸಭಾಮಂದಿರದ ದ್ವಾರದಲ್ಲಿ ಹೋಗಿ ರಾಜದರ್ಶನದ ಸಮಯ ಕಾಯುಹತ್ತಿದನು. ಕೆಲ ಹೊತ್ತಿನ ಮೇಲೆ ರಾಜನು ಬೇರೊಂದು ಮಹತ್ವದ ಕೆಲಸವೆಂದು

ಅಂದಿನ ಸಭೆಯನ್ನು ವಿಸರ್ಜಿಸಿ ಮಹಾಕವಿ ಮೊದಲಾದವರೊಂದಿಗೆ ರಾಜದ್ವಾರಕ್ಕೆ ಬಂದು ನೋಡುತ್ತಾನೆ ಆ ವೃದ್ಧ ಬ್ರಾಹ್ಮಣನ ಪರಿವಾರವು. ಅವರು ರಾಜನನ್ನು ಕಂಡಕೂಡಲೇ ಸ್ವಸ್ತಿವಾಚನವನ್ನುಚ್ಚರಿಸಿ ರಾಜದರ್ಶನದಿಂದ ತಮಗಾದ ಆನಂದವನ್ನು ತಮ್ಮ ತಮ್ಮ ಮುಖಚರ್ಯೆಯಿಂದ ವಿದಿತಪಡಿಸಿ ಅಲ್ಲಿಂದ ಹಿಂದಿರುಗಲನುವಾದರು. ಆಗ ರಾಜನು ಬ್ರಾಹ್ಮಣನನ್ನು ಕುರಿತು—"ವಿಪ್ರೇಂದ್ರ! ಮಹಾಪುರುಷರ ಕ್ರಿಯಾಸಿದ್ಧಿಯು ಪೌರುಷದಿಂದಲೋ ಸಾಧನ ಸಾಮಗ್ರಿಯಿಂದಲೋ ಎಂದು ಕೇಳಲು ಆ ಬ್ರಾಹ್ಮಣ ವಿದ್ವಾಂಸನು—

ಘಟೋಜನ್ಮ ಸ್ಥಾನಂ ಮೃಗಪರಿಜನೋಭೂರ್ಜವಸನೋ ।
ವನೇವಾಸಃ ಕಂಧಾದ್ಯಧಿಕಮಶನಪುವ ವಿಗುಣಃ ॥
ಅಗಸ್ತ್ಯಃ ಪಾಥೋಧಿಂ ಯದಕೃತ ಕರಾಂಭೋಜ ಕುಹರೇ ।
ಕ್ರಿಯಾ ಸಿದ್ಧಿಃ ಸತ್ವೇ ಭವತಿ ಮಹತಾಂ ನೋಪಕರಣೇ ॥

(ಅರ್ಥ— ರಾಜನ್! ಅಗಸ್ತ್ಯ ಋಷಿಯು ಕೊಡದಿಂದ ಜನಿಸಿದನು. ಆಶ್ರಯದಲ್ಲಿ ಸಂಚರಿಸುವ ಮೃಗಾದಿಗಳು ಅವನ ಪರಿಹಾರವು ವೃಕ್ಷಲತೆಗಳ ತೊಗಟೆಯೇ ಅವನ ವಸ್ತ್ರಗಳು ಅರಣ್ಯವೇ ಅವನ ವಾಸಸ್ಥಾನವು ಕಂದಮೂಲಾದಿಗಳೇ ಅವನ ಆಹಾರವು ಇಂಥ ಸ್ವರೂಪಿ ಸ್ಥಿತಿಯ ಅಗಸ್ತ್ಯನು ತನ್ನ ಕರಮಲನಿಂದ ಸಾಗರವನ್ನು ಒಂದೇ ಗುಟುಕಿನ ಆಚಮನದಿಂದ ಗುಟುಗರಿಸಿದನೆಂದ ಮೇಲೆ ಮಹಾಪುರುಷರ ಕ್ರಿಯಾಸಿದ್ಧಿಯು ಪೌರುಷದಲ್ಲಿ ಇರುವದೇ ಹೊರ್ತು ಸಾಧನ ಸಾಮಗ್ರಿಯಲ್ಲಿ ಇರುವಂತಿಲ್ಲ. ಹೀಗೆ ಉಚ್ಚರಿಸಿದ ಬ್ರಾಹ್ಮಣನನ್ನು ಸತ್ಕರಿಸಿದನು. ಮತ್ತು ವಿಪ್ರಪತ್ನಿಯನ್ನು ಇನ್ನುಳಿದವರನ್ನು ನೋಡಿ ತಾಯಿ ಈ ಮಾತಿಗೆ ನೀವೇನು ಹೇಳುವಿರಿ ಎಂದು ಕೇಳಲು ಬ್ರಾಹ್ಮಣ ಪತ್ನಿಯು—

ರಥಸ್ಯೈಕಂ ಚಕ್ರಂ ಭುಜಗಯಮಿತಾ ಸಪ್ತಮಿ
ನಿರಾಲಂಬೋ ಮಾರ್ಗಶ್ಚರಣವಿಕಲಃ ಸಾರಥಿರಪಿ
ರವಿರ್ಯಾತ್ಯೇವಾಂತಂ ಪ್ರತಿದಿನಮುಗರಸ್ಯನಭಸಃ
ಕ್ರಿಯಾ ಸಿದ್ಧಿ ಸತ್ವೇ ಭವತಿ ಮಹಾದ್ವಾನೋಪಕರಣೇ ॥

ಬ್ರಾಹ್ಮಣ ಪುತ್ರನು—

ವಿಜೇತವ್ಯಾಲಂಕಾ ಚರಣರಣೀ ಜಲನಿಧಿ
ವಿಪಕ್ಷಃ ಪೌಲಸ್ತ್ಯೋ ರಣಭುವಿ ಸಹಾಯಾಶ್ಚ ಕಪಯ ||
ಪದಾತಿರ್ಮರ್ತ್ಯೋಂಸಾ ಸಕಮಲವುವಧೋದ್ರಕ್ಷಸಕುಲಂ
ಕ್ರಿಯಾ ಸಿದ್ಧಿ ಸತ್ವೆ ಭವತಿ ಮಹತಾಂ ನೋಪಕರಣೇ ||

ಬ್ರಾಹ್ಮಣನ ಸೊಸೆಯು—

ಧನುಃ ಪುಷ್ಪಂ ಮೌರ್ವೀ ಮಧುಕರ ಮಯೀ
ಚಂಚಲ ದೃಶಾಂ ||
ದೃಶಾಂಕೋಣೋ ಬಾಣಃ ಸುಹೃದಪಿ ಜಡಾತ್ಮಾ
ಹಿಮಕರಃ
ಸ್ವಯಂಚೈಕೋನಂಗಃ ಸಕಲ ಭುವನಂ
ವ್ಯಾಕುಲಯತಿ |
ಕ್ರಿಯಾಸಿದ್ಧಿಃ ಸತ್ವೇ ಭವತಿ ಮಹಾತಾಂ
ನೋಪಕರಣೇ ||

(ಮೇಲಿನ ಮೂವರು ನುಡಿದ ಶ್ಲೋಕಗಳಿಗೆ ಕ್ರಮವಾಗಿ ಅರ್ಥ)

(ಅರ್ಥ— "ರಥಕ್ಕೆ ಒಂದೇ ಗಾಲಿ, ಸರ್ಪಗಳಿಂದ ಬಿಗಿದ ಹೂಡಿದ ಸಪ್ತತುರಗಗಳು, ಅದರ ಗಮನಕ್ಕೆ ನಿರಾಶ್ರಿಯ ಆಕಾಶದ ಮಾರ್ಗವು, ಕಾಲಿಲ್ಲದ ಸಾರಥಿಯು ಇಂಥ ಅನುಕೂಲತೆಯಿಂದ ಸೂರ್ಯನು ಸದಾ ಆಕಾಶದಲ್ಲಿ ಸಾಗಿ ಪಾರಾಗುವನು. ಅಂದ ಮೇಲೆ ಪೌರುಷದಿಂದಲೇ ಕ್ರಿಯಾಸ್ಥಿಯು)

(ಅರ್ಥ— ಲಂಕೆಯನ್ನು ಗೆದ್ದ, ಸಾಗರವನ್ನು ಕಾಲಿನಿಂದ ದಾಟಿದ, ಕಪಿಗಳ ಸಹಾಯದಿಂದ ರಣದಲ್ಲಿ ರಾವಣನನ್ನು ವಿಪಕ್ಷಗೊಳಿಸಿದ. ಇಂಥ ಮಹಾಪುರುಷ ರಾಮನು ಮನುಷ್ಯ ರೂಪದಿಂದ ರಾಕ್ಷಸರನ್ನು ಸಂಪೂರ್ಣ ನಾಶಗೊಳಿಸಿದನು. ಅಂದಮೇಲೆ ಅವನ ಕ್ರಿಯಾ ಸಿದ್ಧಿಗೆ ಪೌರುಷವೇ ಸತ್ವನಾಗಿ ಪರಿಣಮಿಸಿತು ಹೊರತು ಸಾಧನಗಳಲ್ಲ.

(ಅರ್ಥ— ಎಲೈ ರಾಜನ್! ಪುಷ್ಪ ಧನುಸ್ಸನು ಹಿಡಿದಿದ್ದವನು, ಭ್ರಮರಗಳ ಹೆದೆಯನು ಮಾಡಿಕೊಂಡವನು, ಚಂಚಲ ನೇತ್ರೆಯರ ಕಟಾಕ್ಷ

ರೂಪದ ಬಾಣ ಧರಿಸುವನು. ಜಡಾತ್ಮರೂಪ ಚಂದ್ರಮನ ಸ್ನೇಹಿತನಾದವನು ಹಾಗೂ ಅಂಗಹೀನನು, ಇಷ್ಟೆಲ್ಲ ಸ್ವರೂಪಿನ ಕಾಮದೇವನು ತಾನು ಒಬ್ಬನೇ ಆಗಿದ್ದರೂ ಸಕಲ ಲೋಕಗಳನ್ನು ವಿಚಾರದಿಂದ ವ್ಯಾಕುಲಗೊಳಿಸುವನು)

ಈ ಪ್ರಕಾರ ಆ ಬ್ರಾಹ್ಮಣ ಪರಿಹಾರವು ಹೇಳಿದ ಶ್ಲೋಕಗಳನ್ನು ಕೇಳಿ ಬ್ರಾಹ್ಮಣ ಹಾಗೂ ಬ್ರಾಹ್ಮಣಪುತ್ರ ಇವರಿಗೆ ರತ್ನ ಮಾಣಿಕ ಹಾಗೂ ಗಜಾಶ್ವಗಳನ್ನು ಕೊಟ್ಟನು. ರಾಜನ ಪಟ್ಟದ ರಾಣಿಯು ಬ್ರಾಹ್ಮಣನ ಪತ್ನಿ ಹಾಗೂ ಇವರಿಗೆ ವಸ್ತ್ರಾಭರಣ ನೀಡಿದಳಲ್ಲದೇ ಬೆಲೆಯುಳ್ಳ ಬಂಗಾರ ಮುತ್ತುಗಳನ್ನು ಕೊಟ್ಟಳು.

## [೩೫]

ಉತ್ತರ ನಾಡಿನ ತ್ರಿಲೋಚನ ಎಂಬ ಹೆಸರಿನ ಪಂಡಿತನು ಭೋಜ ರಾಜನ ದರ್ಶನಕ್ಕೆಂದು ದರಬಾರಿಗೆ ಹೋದನು. ಅಲ್ಲಿ ನೋಡುತ್ತಾನೆ. ರಾಜನು ತನ್ನಲ್ಲಿಗೆ ಬಂದ ವಿದ್ವಾಂಸರಿಗೆ ಧನ ದ್ರವ್ಯ, ರತ್ನ ಮಾಣಿಕ್ಯ ಮುಂತಾದವುಗಳನ್ನು ತೆರಪಿಲ್ಲದೇ ಕೊಡುತ್ತಲಿದ್ದನು. ಪ್ರತಿಯೊಬ್ಬನಿಗೂ ರಾಜನಿಂದ ಆನೆಗಳು ಮೆಚ್ಚುಗೆಯಾಗಿ ರಾಜನಿಂದ ದೊರೆಯುತ್ತಲೇ ಇದ್ದವು. ಅದನ್ನು ಕಂಡು ತ್ರಿಲೋಚನನು ದಂಗಾದನು. ಅವನು ಸಭೆಯ ಪಂಡಿತರ ಸಾಲಿನಲ್ಲಿ ಕುಳಿತು ಸಮಯ ಸಾಧಿಸಿದನು. ಕೂಡಲೇ ರಾಜನನ್ನು ಸ್ವಸ್ತಿ ವಾಚನ ಶಬ್ದಗಳಿಂದ ಗೌರವಿಸಿದನು. ಆಗ ರಾಜನು ತ್ರಿಲೋಚನನನ್ನು ದೃಷ್ಟಿಸಿ ಸತ್ಯವಿಯೇ ನೀನು ಉಚ್ಚರಿಸುವ ಅಮರವಾಣಿಯೇನು ಎಂದು ಕೇಳಲು ಆ ತ್ರಿಲೋಚನನು—

ನಿಜಾನಪಿ ಗಜಾನ್ ಭೋಜಾ
ದದಾನಂ ಪ್ರೇಕ್ಷ್ಯ ಪಾರ್ವತೀ
ಗಜೇಂದ್ರವದನಂ ಪುತ್ರಂ
ರಕ್ಷತ್ಯದ್ಯ ಪುನಃ ಪುನಃ ॥ ॥

(ಅರ್ಥ- ಎಲೈ ರಾಜನೇ ನೀನು ಈ ಸಮಯದಲ್ಲಿ ಕವಿವಿದ್ವಾಂಸರಿಗೆಲ್ಲ ಆನೆಗಳನ್ನು ದಾನ ಕೊಡುತ್ತಿರುವದನ್ನು ನೋಡಿ ಪಾರ್ವತಿದೇವಿಯು ತನ್ನ ಮಗನಾದ ಗಜಾನನನನ್ನು ಮೇಲಿಂದ ಮೇಲೆ ಕಾಯುತ್ತಿದಳು)

ಎಂದು ಸೋಜಿಗವಾಗುವಂತೆ ಕವಿಯು ಹೇಳಿದ ಶ್ಲೋಕ ಕೇಳಿ ರಾಜನು ಅವನಿಗೆ ಏಳು ಆನೆಗಳನ್ನು ಕೊಟ್ಟನು.

## (೫೪)

ಕಾಶೀ ಪಟ್ಟಣದ ತಂದುಲದೇವ ಎಂಬ ಹೆಸರಿನ ಪಂಡಿತನು ಧಾರಾ ನಗರಕ್ಕೆ ಬಂದನು. ಭೋಜರಾಜನ ಸಮ್ಮುಖದಲ್ಲಿ ನೆರೆದ ವಿದ್ವತ್ ಸಭೆಗೆ ಹೋದನು ರಾಜನಿಗೆ ಶುಭವಾಗಲಿ ! ಎಂದು ಉಚ್ಚರಿಸಿ ಸಭೆಯನ್ನು ಪ್ರತೀಕ್ಷಿಸಹತ್ತಿದನು. ರಾಜನು ಒಮ್ಮೆಲೆ ಅವನನ್ನು ನೋಡಿ- ಎಲೈ ಬುದ್ಧಿವಂತನೆ ನಿನ್ನ ವಾಸಸ್ಥಾನವೆಲ್ಲಿ ? ಎಂದು ಕೇಳಲು ಆ ಪಂಡಿತನು-

ವರ್ತತೇ ಯತ್ರ ಸಾವಾಣೀ
ಕೃಪಾಣೀರಿಕ್ತ ಶಾಖ ನಃ |
ಶ್ರೀಮಾನ್ ಮಾಲವ ಭೂಪಾಲ
ತತ್ರದೇಶೇವ ಸಾಮ್ಯಹಮ್

(ಅರ್ಥ-- 'ಎಲೈ ಶ್ರೀಮಾನ್ ! ಮಾಳವ ರಾಜ್ಯಾಧಿಪತಿಯೇ ! ನಾನು ಇರುವ ಪ್ರದೇಶದಲ್ಲಿ ಖಡ್ಗವಿದಿದ್ದರೂ ಆ ಖಡ್ಗದಿಂದ ಆಗುವ ಕಾರ್ಯವು ಜನರ ವಾಣಿಗಳಿಂದ ಸಹಜವಾಗಿ ಒದಗುತ್ತದೆ.) ಎಂದು ಕವಿಯು ಹೇಳಿದುದರ ರಹಸ್ಯವನ್ನರಿತು ರಾಜನು ಅವನಿಗೆ ಏಳು ಆನೆಗಳನ್ನು ಕೊಟ್ಟನು.

§ ● ● §

|| ಗಾಯಂತಿ ತ್ವದರಿ ಪ್ರಿಯಾಶ್ರುತಟಿನೀ ತೀರೇಷು

ಸಿದ್ಧಾಂಗನಾ |

ಗೀತಾಂಧಾ ನತೃಣಂ ಚರಂತಿಹರಣಾಸ್ತೇನಾಮಿಷಂ

ದುರ್ಬಲಮ್ ||

ಅರ್ಥ–"ರಾಜನ್ ! ನಿಮ್ಮ ಶತ್ರುಗಳ ಸ್ತ್ರೀಯರ ಕಣ್ಣೀರಿನ ನದಿಯ ದಂಡೆಯ ಮೇಲೆ ಅಮರ ನಾರಿಯರು ಗೀತಗಾಯನ ಮಾಡುತ್ತಿದ್ದರು. ಆ ಗಾಯನದಿಂದ ಚಿಗರೆಗಳು ಮುಗ್ಧವಾಗಿ ಹುಲ್ಲನ್ನು ಮೇಯಲಿಲ್ಲ. ಅದರಿಂದ ಈ ಮಾಂಸವು ಒಣಗಿದೆ ಎಂದು ಹೇಳಿದಳು.)

ಭೋಜರಾಜನು ಆ ವ್ಯಾಧ ಪುತ್ರಿಯ ಕವಿತೆಗೆ ಮೆಚ್ಚಿ ಅವಳಿಗೆ ಪ್ರತಿಯೊಂದು ಅಕ್ಷರಕ್ಕೆ ಒಂದೊಂದು ಲಕ್ಷ ಹೊನ್ನುಗಳನ್ನು ಕೊಟ್ಟನು.

[೩೭]

ಒಂದು ಹುಣ್ಣಿಮೆಯ ರಾತ್ರಿಯಲ್ಲಿ ಭೋಜರಾಜನು ಚಂದ್ರಮಂಡಲವನ್ನು ನಿರೀಕ್ಷಿಸಿ ಅದರ ಅಂತರಸ್ಥಿತಿ ಕಲಂಕವನ್ನು ಕುರಿತು:—

"ಅಂಕಂ ಕೇಪಿ ಶಶಂಕಿರೇ ಜಲನಿಧೇ:

ಪಂಕಂ ಪರೇ ಮೇನಿರೇ |

ಸಾರಂಗಂ ಕತಿ ಬಿಚ್ಚ ಸರಜಗದಿರೇ

ಭೂಚ್ಛಾಯ ಮೈಚ್ಛಿನ್ ಪರೇ

ಅರ್ಥ: [ "ಕೆಲವರು ಈ ಚಂದ್ರಮಂಡಲದಲ್ಲಿ ಕಲಂಕವನ್ನು ಶಂಕಿಸುವರು. ಬೇರೆ ಕೆಲವರು ಈ ಮಂಡಲದಲ್ಲಿ ಸಮುದ್ರದ ಕೆಸರು ತುಂಬಿರುವದೆಂದು ತಿಳಿಯುವರು. ಕೆಲವರು ಸಾರಂಗವಿರುವನೆಂದು ಹೇಳುವರು. ಅದರಂತೆ ಇನ್ನೂ ಹಲವರು ಈ ಚಂದ್ರ ಮಂಡಳದ ಮೇಲೆ ಪೃಥ್ವಿಯ ನೆರಳು ಬಿದ್ದಿರುವದೆಂದು ನಂಬುವರು")

ಈಪ್ರಕಾರ ರಾಜನು ಪೂರ್ವಾರ್ಧ ಶ್ಲೋಕ ಬರೆದು ಕಾಳಿದಾಸನ ಕೈಗೆ ಕೊಟ್ಟನು. ಕಾಳಿದಾಸನು ಅದನ್ನು ಓದಿ ಆಗಲೇ ಉತ್ತರಾರ್ಧ ಶ್ಲೋಕ:–

ಇಂದೌಯುದ್ದಲಿಶೇಂದು ನೀಲ ಶಕಲ ಶ್ಯಾಮಂ
ದರೀದೃಶ್ಯತೇ।
ಅತ ನಾಂದ್ರಾಂ ನಿಶಿ ಪೀತ ಮಂಥ ತಮಸಂ
ಕುಕ್ಷಿಸ್ಥ ಮಾಚಕ್ಷ್ಮಹೇ ॥

(ಅರ್ಥ– ಚಂದ್ರನಲ್ಲಿ ಇಂದ್ರ ನೀಲಮಣಿಯ ಚೂರಿನಂತೆ ಕಪ್ಪು ಕಾಣುವದು. ಚಂದ್ರನು ರಾತ್ರಿಯಲ್ಲಿ ಘೋರ ಅಂಧಃ ಗಾಢವನ್ನು ಪ್ರಾಸನ ಮಾಡುವನು. ಆ ತತ್ತಲೆಯ ಛಾಯೆಯು ಅವನ ಹೊಟ್ಟೆಯಲ್ಲಿ ಪ್ರತೀತ ವಾಗುವದು.)

ಎಂದು ಬರೆದು ಶ್ಲೋಕ ಪೂರ್ಣ ಮಾಡಿದನು. ರಾಜನು ಉತ್ತರಾರ್ಧದ ಪ್ರತಿ ಅಕ್ಷರಕ್ಕೂ ಒಂದೊಂದು ಲಕ್ಷ ಹೊನ್ನಿನಂತೆ ಕಾಳಿದಾಸನಿಗೆ ಕೊಟ್ಟನು.

ಆ ಬಳಿಕ ಭೋಜರಾಜನು ಕಾಳಿದಾಸನನ್ನು ಕವಿತಾಚಮತ್ಕೃತಿಯನ್ನು ನೋಡಿ ಪುನಃ ಅವನನ್ನು— ಎಲೈ ಸಖ ಕಾಳಿದಾಸನೆ! ನಿಷ್ಕಲಂಕ ಚಂದ್ರನನ್ನು ವರ್ಣಿಸು" ಎಂದು ಹೇಳಲು ಕಾಳಿದಾಸನು—

"ಲಕ್ಷ್ಮೀ ಕ್ರೀಡಾ ತಡಾಗೋ ರತಿಧವಲಗೃಹಂ
ದರ್ಪಣೋದ್ದಿಗ್ವಧೂನಾಂ ।
ಪುಷ್ಪಂ ಶ್ಯಾಮಲತಾಯಾಸ್ತ್ರಿಭುವನಜಯಿನೋ
ಮನ್ಮಥಸ್ಯಾತ ಪತ್ರಮ್ ॥
ಪಿಂಡೀಭೂತಂ ಹರಸ್ಯ ಸ್ಮಿತಮಮರಮನೀ
ಪುಂಡರೀಕಂ ಮೃಗಾಂಕೋ ।
ಜ್ಯೋತ್ಸ್ನಾಪೀಯೂಷವಾಪೀ ನಯತಿಸಿತವೃಷ
ಸ್ತಾರಕಾ ಗೋಕುಲಸ್ಯ"॥

(ಅರ್ಥ— ಚಂದ್ರಮನು ಲಕ್ಷ್ಮೀಯು ಕ್ರೀಡಿಸುವ ಸರೋವರವು, ರತಿಯ ಶ್ವೇತಭವನವು, ದಿಗ್ವಧುಗಳು ನೋಡಿಕೊಳ್ಳುವ ಕನ್ನಡಿಯು, ಶ್ಯಾಮಾಲತೆಯ ಪುಷ್ಪವು, ಮೂಲೋಕಗಳನ್ನು ಗೆಲಿಯುವ ಕಾಮನ ಛತ್ರಿಗೆಯು ಶಂಕರನ ಲಿಂಗಪೀಠ ಪಿಂಡುದಿತ ಹಾಸ್ಯವು, ಸ್ವರ್ಗಗಂಗೆಯಲ್ಲಿಯ

ಕಮಲವು ಬೆಳ್ದಿಂಗಳಿನ ಬಾವಿಯು ಆಗಿರುವನು. ಅದರಂತೆ ಅವನು ನಕ್ಷತ್ರ ಗಳೆಂಬ ಗೋಗಳ ಹಿಂದಿನ ವೃಷಭನಾಗಿರುವನು)

ಈ ಪ್ರಕಾರ ಕಾಳಿದಾಸನು ಪೂರ್ಣ ಬಿಂಬಯುಕ್ತ ಚಂದ್ರನನ್ನು ನಿಷ್ಕಲಂಕನನ್ನಾಗಿಸಿ ವರ್ಣನೆ ಮಾಡಿದನು. ಅದನ್ನು ಕೇಳಿ ಭೋಜರಾಜನು ಹರ್ಷಿತನಾಗಿ ಶ್ಲೋಕದ ಪ್ರತಿಯೊಂದು ಅಕ್ಷರಕ್ಕೆ ಒಂದೊಂದು ಲಕ್ಷ ಹೊನ್ನುಗಳನ್ನು ಆ ಕಾಳಿದಾಸನಿಗೆ ಕೊಟ್ಟನು.

## [೮೫]

ದ್ರವಿಡ ದೇಶದ ತಿರುಮಲ್ಲಾರ್ಯನು ಮಹಾ ವಿದ್ವಾಂಸನು. ಆದರೆ ಅವನಲ್ಲಿ ತನ್ನ ವಿದ್ವತ್ತಿನ ಬಗೆಗೆ ಹೆಚ್ಚಿನ ಗರ್ವವಿದ್ದಿತು. ಒಂದು ಬಾರಿ ಅವನು ಕಾಳಿದಾಸನ ಕೀರ್ತಿಯನ್ನು ಅಳಿಯಬೇಕೆಂದು ಧಾರಾ ನಗರಕ್ಕೆ ಬಂದನು. ಪಟ್ಟಣ ಸನಿಹಕ್ಕೆ ಬರುವಷ್ಟರಲ್ಲಿ ಅವನಿಗೆ ಎದುರಾಗಿ ಬರುತ ಒಬ್ಬ ಹುಡುಗನನ್ನು ಕಂಡು ತಿರುಮಲ್ಲಾರ್ಯರು.

"ನೀನಾರು?" ಎಂದು ಕೇಳಲು ಆ ಹುಡುಗನು—

ದ್ವೀರಾಜೀ ನಗರೀ ಏಕಾ, ನಿತ್ಯಂ ಯುದ್ಧಂ ಚ ಜಾಯತೇ |
ತದುತ್ಪತ್ತಿ ಕರೋ ಯಸ್ತು ತಸ್ಯಾಹಂ ಕುಲ ಬಾಲಕ ||

ಎಂಬ ಶ್ಲೋಕದಿಂದ 'ತಾನು ಚದುರಂಗ ಮಾಡುವವನ ಮಗನು' ಎಂದು ಹೇಳಿದನು. ತಿರುಮಲನು ಆ ಹುಡುಗನ ಹೇಳಿಕೆಯಿಂದ ಚಕಿತನಾಗಿ ಮುಂದೆ ನಡೆದನು. ಅವನಿಗೆ ಒಬ್ಬ ತೋಟಿಗನು ಒಂದು ಅರಿವೆಯಲ್ಲಿ ಹಣ್ಣು ಕಟ್ಟಿಕೊಂಡು ಬರುವದು ಗೋಚರಿಸಿತು. ಆಗ ತಿರುಮಲ್ಲಾರ್ಯನು "ಅವೇತರ ಹಣ್ಣು?" ಎಂದು ಕೇಳಲು ತೋಟಿಗನು—

ವೃಕ್ಷಾಗ್ರವಾಸೀ ನ ಚ ರಾಜಹಂಸಃ | ನಾಮಾನರೋ ವೈ
ನ ಚ ರಾಜಪುತ್ರಃ |
ಸುವರ್ಣಕಾಯಾ ನ ಚ ಹೇಮಧಾತುಃ | ತೃಣಂ ಚ ಶಯ್ಯಾ
ನ ಚ ರಾಜಯೋಗಿ ||

ಎಂದು ಹೇಳಿದ ತೋಟಿಗನ ಉತ್ತರದಿಂದಲೂ ಆ ತಿರುಮಲ್ಲಾರ್ಯನು ದಿಗಿಲುಗೊಂಡನು. ಆಗ ಅವನು ತನ್ನಲ್ಲಿ-"ಈ ಯಃಕಶ್ಚಿತ ಜನರಲ್ಲಿಯೇ ಇಷ್ಟು ವಿದ್ಯೆಯಿರುವದರಿಂದ ಮೇಲೆ ಕಾಳಿದಾಸನಲ್ಲಿ ಅದೆಷ್ಟು ಇರಬಹುದು?" ಎಂದು ವಿಚಾರಿಸುತ್ತ ಮುಂದೆ ಹೋಗುತ್ತಿರುವಷ್ಟರಲ್ಲಿಯೇ ತಲೆಯ ಮೇಲೆ ಬುಟ್ಟಿಯನ್ನಿಟ್ಟುಕೊಂಡು ಬರುವ ಸ್ತ್ರೀಯೊಬ್ಬಳನ್ನು ಕಂಡು ಅವನು-"ನೀ ನಾರು?" ಎಂದು ಕೇಳಲು ಅವಳು—

ನಿರ್ಜೀವೋ: ಜೀವಿತೋ ವಾಪಿ
ಶ್ವಾಸೋಚ್ಛ್ವಾಸ ವಿಶೇಷತಃ ||
ಕುಟುಂಬ ಕಲಹೋ ನಾಸ್ತಿ
ತಸ್ಯಾಹಂ ಕುಲ ಬಾಲಿಕಾ ||

ಎಂಬ ಶ್ಲೋಕದಿಂದ ತಾನು ಕಮ್ಮಾರನ ಮಗಳೆಂದು ಹೇಳಿದನು. ಪಂಡಿತನಿಗೆ ಇನ್ನಿಷ್ಟು ಕೌತುಕ ಮತ್ತಿಷ್ಟು ಭಯ ಆದರೂ ಅವನು- ನಿನ್ನ ಬುಟ್ಟಿಯಲ್ಲಿ ಏನಿರುವದು ? ಎಂದು ಕೇಳಲು ಆ ಕಮ್ಮಾರ ಪುತ್ರಿಯು-

ವೃಕ್ಷಾಗ್ರೇತು ಫಲಂ ಯಸ್ಯ
ಫಲಾಗ್ರೇ ವೃಕ್ಷ ಮೇವ ಚ
ಆಕಾರಾದಿ ಸಕಾರಾಂತಮ್

ಈ ಶ್ಲೋಕದಿಂದ ಅವಳು ಅನನಸ ಎಂದು ಹೇಳಿದಳು. ಆ ಪಂಡಿತನಿಗೆ ಅದು ಎಷ್ಟು ವಿಚಾರ ಮಾಡಿದರೂ ತಿಳಿಯಲಿಲ್ಲ. ಕಡೆಗೆ ಅವನು ಆ ಕಮ್ಮಾರ ಪುತ್ರಿಯನ್ನೇ ಕೇಳಲು 'ಅನನಸ' ಎಂದು ಹೇಳಿದಳು.

ಆಗ ತಿರುಮಲ್ಲಾರ್ಯನಿಗೆ ಮುಂದೇನು ಮಾಡಬೇಕೆಂಬ ಬುದ್ಧಿಯೇ ತೋಚದಾಯಿತು "ಈ ಕಮ್ಮಾರ ಪುತ್ರಿಯು ಹೇಳಿದ ಶ್ಲೋಕವೇ ನನಗೆ ಸರಿಯಾದ ಅರ್ಥವಾಗಲಿಲ್ಲ ಎಂದ ಮೇಲೆ ಇನ್ನು ನಾನು ಇಲ್ಲಿಯ ಸಾವಿರಾರು ಪಂಡಿತರಲ್ಲಿ ಮಿಗಿಲಾದ ಕಾಳಿದಾಸನನ್ನು ಅದೆಂತು ಜಯಸುವೆನು. ಇಷ್ಟರಿಂದಲೇ ನನ್ನ ಗರ್ವಭಂಗವು ಸಾಕಷ್ಟಾಯಿತು. ಇನ್ನು ವಿದ್ವತ್ಸಭೆಗೆ ಹೋಗಿ ...ಭಂಗಕ್ಕೆ ಗುರಿಯಾಗುವೆನು, ದ್ರವಿಡ ದೇಶದಲ್ಲಿ ಇದುವರೆಗೆ

ಪಂಡಿತನೆಂದು ಮೆರೆಯುತ್ತ ಬಂದೆ; ನನಗೆ ಇದು ಎಷ್ಟು ಮಾತ್ರವೂ ಬೇಡ.

ಇನ್ನು ಇಲ್ಲಿ ಬಂದ ತಪ್ಪಿಗಾಗಿ ಕವಿಶ್ರೇಷ್ಠ ಕಾಳಿದಾಸನ ಸ್ನೇಹಪರಿಚಯ ಮಾಡಿಕೊಂಡು ಹಿಂದಿರುಗಿ ಹೋಗುವದೇ ನನಗೆ ಭೂಷಣವು ಇವೇ ವಿಚಾರಗಳಿಂದ ತಿರುಮಲ್ಲಾರ್ಯನು ನೇರವಾಗಿ ಕಾಳಿದಾಸನ ಮನೆಗೆ ಹೋದನು ಅವನ ವಿದ್ವತ್ಪ್ರಭಾಯುಕ್ತ ಸ್ವರೂಪವನ್ನೂ ಅವನ ಮುಖೋದ್ಗಳಿತ ಕಾವ್ಯ ಪ್ರಸಂಗಗಳನ್ನೂ ನೋಡಿ ಆನಂದ ಹೊಂದಿದನು. ಹಾಗೂ ಕಾಳಿದಾಸನು ಅವನನ್ನು ಭೋಜರಾಜನಿಗೆ ಭೆಟ್ಟಿ ಮಾಡಿಸಿದನು ರಾಜನು ಗೌರವಾದರಗಳಿಂದ ಸತ್ಕರಿಸಿ ಅವನನ್ನು ಬೀಳ್ಕೊಟ್ಟನು.

## [೫೯]

ಶರದೃತುವಿನ ಅಂದವಾದ ಬೆಳ್ದಿಂಗಳಿನ ರಾತ್ರಿಯು ಸೊಬಗು ಸವೆಯುತ್ತ ಭೋಜ–ಕಾಳಿದಾಸರಿಬ್ಬರೂ ಪುರೋದ್ಯಾನದಲ್ಲಿ ಪುಷ್ಪವಾಟಿಕೆಯಲ್ಲಿ ಕುಳಿತಿರುವರು ಇಬ್ಬರ ಹೃದಯಗಳು ಪರಸ್ಪರ ಪ್ರತಿಭೆಯಿಂದ ಹೊರಹೊಮ್ಮುವ ಕವಿತೆಗಳಿಂದ ಅತ್ಯಂತ ಆನಂದ ಮಗ್ನವಾಗುತ್ತಲಿವೆ. ಆ ಸಮಯದಲ್ಲಿ ರಾಜನು—"ಕಾಳಿದಾಸ! ನಮಗುಂಟಾಗಿರುವ ಈ ಆನಂದವು ಶಾಶ್ವತನೇ ?" ಎಂದು ಕೇಳಲು ಕಾಳಿದಾಸನು— "ರಾಜನ್ ! ಭವಿಷ್ಯಜ್ಞಾನವು ಮಾನವನ ಬುದ್ಧಿಗೆ ಅಗೋಚರವು ಅಂದಮೇಲೆ ನಿಮ್ಮ ಶರೀರ ಹಾಗೂ ಅದರ ವಿಕಾರ ವಿಚಾರವಾಗಿ ಹೇಳುವದು. ಅಸಾಧ್ಯ ಆ ಬಗ್ಗೆ ತಲೆ ಕೆಡಿಸಿಕೊಳ್ಳಬೇಡಿರಿ" ಎಂದನು,

ರಾಜನು— "ಕಾಳಿದಾಸ ! ಇದೇನೆ ಇರಲಿ. ಸದ್ಯ ನೀನು ನನ್ನ ವಿಷಯಕ್ಕೆ ಚರಮ ಶ್ಲೋಕವನ್ನು ಉಚ್ಚರಿಸಿದಿಯಾದರೆ ಅದು ನನ್ನ ಮೇಲಿನ ನಿನ್ನ ಪ್ರೀತಿಯ ಮಾನದಂಡವೆಂದು ನಂಬುವೆನು" ಎಂದೆನ್ನಲು ಕಾಳಿದಾಸನು–"ನನಗೆ ಅದು ಬೇಕಾಗಿಲ್ಲ ನಿನ್ನಿಂದಲೇ ನನ್ನ ಚರಮವಾಕ್ಯ ಉದ್ಘಳಿತವಾಗಲೆಂದೇ ನನ್ನ ಹೆಬ್ಬಯಕೆಯಿದೆ'' ಎಂದು

ಹೇಳಿದನು ಈ ವಿಷಯದ ಬಗೆಗೆ ಅವರಿಬ್ಬರಲ್ಲಿ ಒತ್ತಾಯ, ಹಠ, ಇವು ತೋರಿ ತೋರಿ ಕಡೆಗೆ ಅಂದಿನ ಆನಂದವು ಪರಸ್ಪರರಲ್ಲಿ ಕೋಪರೂಪದಿಂದ ತೋರಹತ್ತಿತು. ಕಡೆಗೆ ರಾಜನು ಒತ್ತಾಯಕ್ಕೆ ಕವಿಯ ಹಠವು ಎದುರು ನಿಲ್ಲದೆ ಆ ರಾತ್ರಿಯಲ್ಲಿಯೇ ಕಾಳಿದಾಸನು ರಾಜನಿಂದ ಅಂತರಿಸಿ ದೂರಸರಿದನು. ಪುಷ್ಪವಾಟಿಕೆ ತೊರೆದನು, ಉದ್ಯಾನತಿಂದ ಓಡಿಹೋದನು. ರಾಜನು ತನ್ನ ಮಹಲು ಸೇರಿ ತನ್ನಲ್ಲಿ:– "ಕಾಳಿದಾಸನು ಅವಿನೀತನು ಶಾಸನಾರ್ಹನು ಅವನಿಗೆ ಬೆಳಗಾದರೆ ಬುದ್ಧಿ ಕಲಿಸಿಯೇ ಬಿಡುವೆನು" ಎಂಬ ಆಳತೆ ಹಾಕುತ್ತ ನಿದ್ದೆ ಹೋಗಿ ಅಂದಿನ ಇರುಳನ್ನು ಕಳೆದನು. ಅಂತಸ್ಥ ಬಂಧನವನ್ನು ಹೊರದೊಗೆದನು, ಶಾಸನ ಬಂಧನಕ್ಕೆ ಸಿಗುವನೇ? ಕಾಳಿದಾಸನು ಆ ರಾತ್ರಿಯಲ್ಲಿಯೇ ಕಣ್ಮರೆಯಾದನು,

ಈ ಮಾತಿಗೆ ಮೂರು ನಾಲ್ಕು ದಿನಗಳು ಕಳೆದವು. ರಾಜನ ಕೋಪಾಅಗ್ನಿ ಆಹುತಿಯೇ ಇಲ್ಲ. ಬಯಲಿನ ಬೇಗೆಯ ಬೆಂಕಿಯಂತೆ ಅದು ತನಗೆ ತಾನೇ ಸುಪ್ತದೆಸೆಗೀಡಾಗಹತ್ತಿತು. ಕಾಳಿದಾಸನ ಹೆಸರುಕೊಳ್ಳುವದೂ ಸಹ ಅವನಿಗೆ ಬೇಜಾರವೆನಿಸಹತ್ತಿತು.

ಮುಂದೊಂದು ದಿನ ನೆರೆ ನಾಡಿನ ಪ್ರಸಿದ್ಧ ಪಂಡಿತ 'ಡಿಡಡಿಮ'ನು ದಿಗ್ವಿಜಯೋತ್ಸುಕನಾಗಿ ಧಾರಾನಗರಕ್ಕೆ ಬಂದನು. ಕಾಳಿದಾಸನ ಕಣ್ಮರೆ ವಾರ್ತೆಯನ್ನು ಕೇಳಿ ಅವನು ತನ್ನ ವಿಜಯಕ್ಕನುಕೂಲವೆಂದು ಭಾವಿಸಿ ಸಭೆಗೆ ಹೋದನು. ಏನೊಂದು ಹಿಂದೆ ಮುಂದೆ ನೋಡದೆ– "ಭೋಜರಾಜ!

"ಕಮಲೇ ಕಮಲೋತ್ಪತ್ತಿಃ"

ಇದೊಂದು ನನ್ನ ಸಮಸ್ಯೆ! ಇದರ ಪೂರ್ಣತೆಯೇ ನಿನ್ನ ಆಶ್ರಿತ ಪಂಡಿತರಿಂದಾಗದಿದ್ದರೆ ನನಗೆ ಜಯಪತ್ರ! ಎಂದು ನುಡಿದು ಕುಳಿತು ಬಿಟ್ಟನು.

ಕಾಳಿದಾಸನ ಸ್ಮರಣೆಯನ್ನೆತ್ತಿದ ಭೋಜರಾಜನನ್ನು ಡಿಂಡಿಮ ಕವಿಯ ಸಮಸ್ಯೆಯು ಅವನಲ್ಲಿ ಚಿಂತೆ' ಅನುತಾಪ. ಉದಾಸೀನತೆಗಳನ್ನು ಏಕ ಕಾಲಕ್ಕೆ ಹುಟ್ಟಿಸಿತು. ಸಭಾಂಲಕೃತ ಪಂಡಿತ ಮಂಡಲವು ಡಿಂಡಿಮನ ಸಮಸ್ಯೆಯ ಸುಂಕದಿಂದ ತಲೆ ಕೆದರಿಕೊಂಡರು. ಮೈತುರಿಸಿಕೊಂಡರು

ಆದರೂ ನಿರರ್ಥಕ ಯೋಜನೆಗೆ ಅವರೆಲ್ಲರು ಪರೌನಿದ್ರೆಯ ಮಾಟಕ್ಕೆ ಸಿಕ್ಕ ವ್ಯಕ್ತಿಕೆಯ ಪುತ್ಥಳಿ ಸ್ವರೂಪವಂತೆ ಕುಳಿತುಬಿಟ್ಟರು.

"ಪ್ರಸಂಗದಿಂದ ಪ್ರಾಪ್ತವಾದ ಜಯವು ಪಂಡಿತರಿಗೆ ಅಪಜಯವಾದರೆ ವಿಧ್ವತ್ಸಭೆಗೆ" ಇದನ್ನರಿತು ರಾಜನು– ಈ ಸಮಸ್ಯೆ ಪೂರ್ಣ ಮಾಡುವದಕ್ಕೆ ಒಂದು ಮಾಸಾವಧಿಯ ತಡೆಯ ಬೇಡಿಕೆಯನ್ನು ಡಿಂಡಿಮನಿಂದ ಕೇಳಿಕೊಂಡನು. ಹಾಗು ಅವನನ್ನು ತಕ್ಕ ಉಪಚಾರದಿಂದ ಹಿಂದಕ್ಕೆ ಕಳುಹಿಸಿದನು.

ಮರುದಿನ ಭೋಜರಾಜನು ಒಂದು ಡಂಗುರದಿಂದ— "ಕಮಲೇ ಕಮಲೋತ್ಪತ್ತಿಃ" ಈ ಸಮಸ್ಯೆಯನ್ನು ನಮ್ಮ ಸಭೆಗೆ ಬಂದು ಪೂರ್ಣ ಮಾಡಿದವರಿಗೆ ಅರ್ಧ ರಾಜ್ಯದ ಒಡೆತನ ಸಲ್ಲುವದು ಎಂದು ರಾಜ್ಯದಾದ್ಯಂತ ಸಾರಿದನು. ವಾರೆರಡುವಾರ ನಿರೀಕ್ಷಿಸಿದನು, ಸಮಸ್ಯೆ ಪೂರ್ಣಗೊಳಿಸಲು ಸಮರ್ಥ ವಿದ್ವಾಂಸರಾರೂ ಬರಲಿಲ್ಲ. ಕಾಳಿದಾಸನು ಎಲ್ಲಿದ್ದರೂ ಯಾವನೊಬ್ಬ ಪಂಡಿತನು ಸಮಸ್ಯೆ ಪೂರ್ಣಮಾಡುವದಕ್ಕೆ ಬರುತ್ತಿದ್ದನು. ಯಾರೂ ಬರಲಿಲ್ಲವೆಂದ ಮೇಲೆ ಆ ಕವಿವರನು ಇಹಲೋಕದಲ್ಲಿರಲಿಕ್ಕಿಲ್ಲ ಎಂದು ರಾಜನು ನಿರ್ಧರಿಸಿದನು ಮೂರನೆಯವಾರ ಹೋಗಿದು ನಾಲ್ಕನೆಯವಾರ ಬಂದಿತು. ಯಾರೂ ಈಗ ಈ ಸಾರೆ ರಾಜನು— "ಸಮಸ್ಯೆ ಪೂರ್ಣ ಮಾಡಿದವರಿಗೆ ನನ್ನ, ರಾಜ್ಯ ನೀಡಿ ನಾನು ವಾನಪ್ರಸ್ಥನಾಗುವೆನು." ಎಂದು ಇನ್ನೊಂದು ಡಂಗುರದಿಂದ ಸಾರಿದನು.

"ಆ ದಿನ ರಾತ್ರಿಯಲ್ಲಿಯೇ ಕಾಳಿದಾಸನು ಕಣ್ಮರೆಯಾದನೆಂದು ಹಿಂದೆ ಹೇಳಿದೆಯಲ್ಲವೆ? ಅವನು ಭೋಜರಾಜನ ಉದ್ಯಾನದಿಂದ ಅಂಧಃಕಾರದಲ್ಲಿ ರಾಜನಗರ ಸೂಳೆಯರ ಬೀದಿಯಲ್ಲಿ ಸಾಗಿದ್ದನು ವಿಟಪುರುಷರಿಗಾಗಿ ಮಾರ್ಗ ಕಾಯುತ್ತ ತನ್ನ ಬಾಗಿಲಲ್ಲಿ ಕುಳಿತಿದ್ದ ವೇಶ್ಯೆಯೊಬ್ಬಳು ವಿಕಾರ ವಶದಿಂದ ಬೀದಿಯಲ್ಲಿ ಸಾಗಿದ್ದ ಕಾಳಿದಾಸನನ್ನು ಒಳಕ್ಕೆ ಕರೆದೊಯ್ದಳು. ನೋಡುತ್ತಾಳೆ, ತನಗೆ ಪರಿಚಿತವಿದ್ದ ಸಾಧು ವ್ಯಕ್ತಿ ಕಾಳಿದಾಸನು, ಹೌಹಾರಿದಳು. ಅದರ ಜೊತೆಗೆ ಅವಳ ವಿಕಾರವೂ ಅಳಿಯಿತು. ಕಾಳಿದಾಸನು ಆಕೆಗೆ– "ಎಲಗೆ! ನಾನು ಕೆಲ ದಿನ ಗೌಪ್ಯವಾಗಿ ಇರಬೇಕಾಗಿದೆ. ನಿನ್ನ ಮಂದಿರದ ನೆಲಮನೆಯಲ್ಲಿ ನನಗೆ ಸರಿಯಾದ ವ್ಯವಸ್ಥೆ ಮಾಡು"

ಈ ರಹಸ್ಯವು ರಹಸ್ಯವಾಗಿಯೇ ಇರಬೇಕು ಎಂದು ಹೇಳಲು ಆ ವೇಶ್ಯೆಯು ಕಾಳಿದಾಸನ ಸ್ಥಾನ-ಮಾನ-ಅಧಿಕಾರ-ವಿದ್ಯೆ-ವೈಭವ-ರಾಜಪ್ರೀತಿ ಇವೆಲ್ಲವನ್ನು ಅರಿತವಳಾದುದರಿಂದ ಅವನ ಹೇಳಿಕೆಗೆ ಒಪ್ಪಿಕೊಂಡಳು. ಆನಂತರ ಇದುವರೆಗೂ ಅವಳು ಕುಲೀನಸ್ತ್ರೀಯಂತೆ ಸುಶೀಲತೆಯಿಂದ ಕಾಲ ಕಳೆಯುತ್ತಿದ್ದಳು

ಭೋಜರಾಜನ ಎರಡನೇ ಡಂಗುರ ವಾರ್ತೆಯು ಆ ವೇಶ್ಯೆಯ ಕಿವಿಗೆ ಬಿದ್ದಿತು. ಕೂಡಲೇ ನೆಲಮನೆಯೊಳಕ್ಕೆ ಹೋಗಿ ಕಾಳಿದಾಸನಿಗೆ ಶ್ರುತಪಡಿಸಿದಳು. ಕಾಳಿದಾಸನು ಆಕೆಗೆ-- "ನೀನು ಧಾರಾರಾಜ್ಯದ ಒಡತಿಯಾಗಲು ಬಯಸಿದರೆ ಡಂಗುರದಿಂದ ಹೇಳಿದ ಸಮಸ್ಯೆಯನ್ನ ಪೂರ್ಣ ಮಾಡು ಒಂದು ಶ್ಲೋಕವನ್ನು ಬರೆದು ಕೊಡುವೆನು. ನಾಳಿನ ದಿನ ನೀನು ರಾಜ ಸಭೆಗೆ ಹೋಗಿ ಆ ಶ್ಲೋಕವನ್ನು ದಿಟ್ಟತನದಿಂದ ಓದು ನಿನ್ನ ಇಚ್ಛೆ ಸಫಲವಾಗುವದು ಎಂದು ಹೇಳಿ ಆಗಲೇ ಡಿಂಡಿಮ ಕವಿಯ ಸಮಸ್ಯೆಯನ್ನ ತೊಡೆಯುವ ಶ್ಲೋಕ ಬರೆದು ಅವಳ ಕೈಗೆ ಕೊಟ್ಟನು. ನನ್ನ ಹೆಸರ ಹೇಳದೆ "ಸ್ವತಃ ರಚಿಸಿರುವೆನೆಂದು ಹೇಳು ಎಂದು ಆಕೆಗೆ ಹೇಳಿ ಕೊಟ್ಟನು

ಸಮಸ್ಯೆ ಪೂರ್ಣಮಾಡುವ ದಿನವು ಮರುದಿನವೇ ಇದ್ದಿತು. ಡಿಂಡಿಮ ಕವಿಯು ಸಭೆಯಲ್ಲಿ ಕುಳಿತಿರುವನು. ಸಮಸ್ಯೆ ಪೂರ್ಣಮಾಡುವ ಪಂಡಿತರಾರೂ ಬಾರದಿದ್ದರಿಂದ ಭೋಜರಾಜನಲ್ಲಿ ಭಾವನೆಯುಂಟಾಗಿವೆ ಮೇಲೆ ಅವನು:— "ಕಾಳಿದಾಸನನ್ನು ನೆನಸಿ ಉಸಿರಿಡಹತ್ತಿದನು. ಉಳಿದೆಲ್ಲ ಚಿತ್ರಿತ ಬೊಂಬೆಗಳಂತೆ ಕುಳಿತಿರುವರು. ಆ ಸಮಯದಲ್ಲಿ— ಒಂದು ರಥವು ಗಡಗಡನೆ ಗಾಲಿಯ ಸಪ್ಪಳವನ್ನು ಮಾಡುತ್ತ ಸಭೆಯ ಮಹಾದ್ವಾರಕ್ಕೆ ಬಂದಿತು ಸುಂದರ ಸ್ತ್ರೀಯೊಬ್ಬಳು ಕೈಯಲ್ಲಿ ಒಂದು ಕಾಗದವನ್ನು ಹಿಡಿದುಕೊಂಡು ಒಳ್ಳೆ ಉತ್ಸಾಹ ಮುದ್ರೆಯಿಂದ ಕೆಳಕ್ಕಿಳಿದಳು. ನೇರವಾಗಿ ಸಭೆಯೊಳಕ್ಕೆ ಹೋಗಿ ರಾಜನಿಗೆ ಮುಜುರಮಾಡಿ— "ರಾಜನ್! ಡಿಂಡಿಮ ಕವಿಯ ಸಮಸ್ಯೆಯನ್ನು ಪೂರ್ಣಮಾಡಲು ಸಮಯ ಸಿಕ್ಕಬಹುದೇ?" ಎಂದು ಕೇಳಲು ರಾಜನಿಗೆ ಒಂದು ಬಗೆಯ ಸಂತೋಷ ಆದು ಸಮಸ್ಯೆ ಪೂರ್ಣಮಾಡಲು ಸ್ತ್ರೀಯೊಬ್ಬಳು ಮುಂದೆ ಬಂದುದೇ ಅವ

ನಿಗೆ ಸಂತೋಷ ಅವನು— ಅಡ್ಡಿಯಿಲ್ಲ. ಕವಿಯತ್ರಿ! ವಿದ್ವತ್ಸಭೆಯು ಎಲ್ಲ ವಿದುಷ-ವಿದುಷಿಯರನ್ನು ಆತ್ಮಾದರದಿಂದ ಸ್ವಾಗತಿಸುವದು, ಕುಳಿತುಕೊಳ್ಳಿ ಎಂದು ಹೇಳಿದನು.

ಅಲ್ಲಿಯೇ ಕುಳಿತಿದ್ದ ಡಿಂಡಿಮ ಕವಿಯು— ನನ್ನ ಸಮಸ್ಯೆಯು ಮಹಾಕವಿ ಕಾಳಿದಾಸನಂಥವರಿಂದ ಪೂರ್ಣವಾಗಿದ್ದರೆ ನನ್ನ ಯೋಗ್ಯತೆಯು ಇನ್ನೂ ಹೆಚ್ಚಾಗುತ್ತಿತು. ಈಗ ಸ್ತ್ರೀಯಳಿಂದ ಅದರೊಳಗೂ ವೇಶ್ಯೆಯಾದ ಈಕೆಯಿಂದ ಪೂರ್ಣ ಮಾಡಲ್ಪಡುವದೆಂಬುದು ನನ್ನ ಹೃದಯ ವೊಪ್ಪದ್ದಾಗಿದೆ. ಆದರೆ ಮಾಡುವದೇನು? ಇದು ನನ್ನ ಅಹಮಹಮಿಕೆಯ ಫಲ" ಎಂದು ಸಿಟ್ಟಿಸಿರುಬಿಟ್ಟನು.

ಅಷ್ಟರಲ್ಲಿ ರಾಜಾಜ್ಞೆಯ ಮೇರೆಗೆ ಆ ವೇಶ್ಯೆಯು ಎದ್ದು ನಿಂತು ಕೈಯಲ್ಲಿ ಶ್ಲೋಕ ಬರೆದ ಕಾಗದ ಹಿಡಿದುಕೊಂಡು ದಿಟ್ಟತನದಿಂದ—

"ಕಮಲೇ ಕಮಲೋತ್ಪತ್ತಿಃ<br>
ಶ್ರೂ[illegible] ನ ಚ ದೃಶ್ಯತೇ ||<br>
ಬಾಲೇ ತವ ಮುಖಾಂಭೋಜೇ |<br>
ದೃಷ್ಟ ಮಿಂದೀ ವರದ್ವಯಮ್ ||

ಎಂದು ಓದಿ ಕುಳಿತುಕೊಳ್ಳುವಷ್ಟರಲ್ಲಿ ಡಿಂಡಿಮ ಕವಿ ನಿಂದ — "ಭೋಜರಾಜನ್! ಈ ವೇಶ್ಯೆಯು ಸಮಸ್ಯೆ ಪೂರ್ಣಮಾಡಿದುದನ್ನು ನಾನು ಒಪ್ಪಲಾರೆ ಆದರೆ ಈ ಶ್ಲೋಕದಲ್ಲಿಯ "ಬಾಲೆ" ಎಂಬ ಸಂಬೋಧನ ಪದ್ಯವು ಯಾವನೊಬ್ಬ ವಿದ್ವಾಂಸನು ಬಳಸಿರುವ ಪದವಾಗಿದೆ ಈ ವೇಶ್ಯೆಯ ಬಳಿಕೆಯ ಪದವಲ್ಲ ಇದರ ಮೇಲಿಂದ ನನಗಂತೂ ಈ ಶ್ಲೋಕವು "ಮಹಾಕವಿ ಕಾಳಿದಾಸ"ನದೇ ಇರಬಹುದೆಂಬ ಅನುಮಾನವು ನಿಶ್ಚಿತ ಸ್ವರೂಪ ಹೊಂದಲು ಬಯಸುವದು. ಆದ್ದರಿಂದ ಪ್ರಭುವೆ: ಈ ನುಡಿಗಳಿಗೆ ನೀನು ಪ್ರಕಟಿಸಿದ ಮರ್‍ಯಾದೆಯನ್ನು ಸಲ್ಲಿಸದೆ, ಕಾಳಿದಾಸನನ್ನು ಪರಿಶ್ರಮದಿಂದ ಶೋಧಿಸಿ ಅವನಿಗೆ ಸಲ್ಲಿಸತಕ್ಕದ್ದು ಎಂದು ನುಡಿದನು.

ವೇಶ್ಯೆಯು ಡಿಂಡಿಮನ ಭಾಷಣೆದಿಂದ ತತ್ತರಿಸಹತ್ತಿದಳು. ಇನ್ನು ರಾಜಸೇವಕರು ಬಂದು ತನ್ನ ಮಂದಿರವನ್ನು ಹೊಕ್ಕು ಕಾಳಿದಾಸನನ್ನು ಶೋಧಿಸಬಹುದು. ಎಂಬ ಘೋರಣೆಯಿಂದ ಆಗಲೇ ಅವಳು ಲಗುಬಗೆಯಿಂದ ತನ್ನ ಮನೆ ಹೋದಳು. ಹೋಗುವ ಗಡಬಡಿಯಲ್ಲಿ ಆ ಶ್ಲೋಕ ಲಿಖಿತ ಪತ್ರವನ್ನು ಮರೆತು ಹೋದಳು.

ಅಲ್ಲಿ ಕುಳಿತಿದ್ದ ಪಂಡಿತನೊಬ್ಬನು ವೇಶ್ಯೆಯು ಬಿಟ್ಟು ಹೋದ ಕಾಗದವನ್ನು ತನ್ನ ಕೈಗೊಂಡು ನೋಡುತ್ತಾನೆ! ಕಾಳಿದಾಸನ ಹಸ್ತಲಿಖಿತ ಕೂಡಲೇ ಅವನು ಅದನ್ನು ರಾಜನ ಮುಂದಿಟ್ಟು—ಪ್ರಭು ಇವು ಕವಿವರನ ಕೈ ಬರೆಹಗಳು ಎಂದು ನಿವೇದಿಸಿದನು. ಅದನ್ನು ನೋಡಿ ಭೋಜರಾಜನು ಡಿಂಡಿಮನ ಹೇಳಿಕೆಯನ್ನು ಕವಿಯ ಕೈಬರಹವನ್ನೂ ನೋಡಿ ಒಳ್ಳೆ ಆನಂದದಿಂದ ವೇಶ್ಯೆಯ ಮನೆಯಲ್ಲಿದ್ದ ಕಾಳಿದಾಸನನ್ನು ಕರೆಯಲು ಹೋದರು. ಅವನ ಜೊತೆಗೆ ಡಿಂಡಿಮನು ಉಳಿವ ಎಷ್ಟೋ ಪಂಡಿತರೂ ಹೋದರು.

ವೇಶ್ಯೆಯು ಸಭೆಯಿಂದ ತ್ವರೆಯಾಗಿ ಮನೆಗೆ ಹೋದಳಲ್ಲವೇ ಕೂಡಲೇ ಅವಳು ನೆಲಮನೆಗಿಳಿದು ನಿದ್ದೆಯಲ್ಲಿ ಮಲಗಿದ್ದ ಕಾಳಿದಾಸನ ಕುತ್ತಿಗೆಯನ್ನು ಹಿಸುಕಿ ಕೊಂದು ಒಂದು ಪೆಟ್ಟಿಗೆಯಲ್ಲಿ ಭದ್ರಪಡಿಸಿದಳು.

ರಾಜನು ಎಲ್ಲರೊಡನೆ ವೇಶ್ಯೆಯ ಮನೆಗೆ ಬಂದು ಕವಿವರನು ಎಲ್ಲಿ? ಎಂದು ಪ್ರಶ್ನೆಮಾಡಲು—ಅವಳು ತಡವರಿಸಿ ನುಡಿಯುತ್ತ ಕವಿವರನೆಲ್ಲಿ ಎಂಬುದು ಗೊತ್ತಿಲ್ಲ ಎಂದು ಹೇಳುವಷ್ಟರಲ್ಲಿಯೇ ಉಳಿದವರು ಅತ್ತಿತ್ತ ಹುಡುಕಿ ನೆಲಮನೆ ಶೋಧಿಸಿದರು. ಸಂಶಯದಿಂದ ಆ ಪೆಟ್ಟಿಗೆಯನ್ನು ತೆರೆದು ನೋಡುತ್ತಾರೆ ಕವಿವರನ ಕಳೇಬರವು, ಹಾಗೇ ರಾಜನಿಗೆ ತಿಳಿಸಿದರು. ರಾಜನೂ ಡಿಂಡಿಮ ಮೊದಲಾದವರು ಆ ಶವ ನೋಡಿ ಕಣ್ಣೀರು ಸುರಿಸಹತ್ತಿದರು

ಭೋಜರಾಜನು ಶವವನ್ನು ತೊಡೆಯ ಮೇಲಿಟ್ಟುಕೊಂಡು— ಕವಿವರನೇ ನನ್ನ ಚರಮ ಶ್ಲೋಕ ಹೇಳದೇ ನನ್ನಿಂದ ಅಗಲಿ ಇಲ್ಲಿಗೆ ಬಂದು ಸಾವಿಗೆ ಗುರಿಯಾದಿ ಈಗ ನಾನು ನಿನ್ನ ಚರಮ ಶ್ಲೋಕ ನುಡಿಯಬೇಕಾ

ಯಿತಲ್ಲ ಎಂದು ಸಂತಪಿಸಿ ನುಡಿಯುಹತ್ತಿದನು. ಕಡೆಗೆ ರಾಜನು ತನಗೆ ದೇವಿಯು ಕೊಟ್ಟ ವರ ಪ್ರಸಾದವು ಜ್ಞಾಪಕಕ್ಕೆ ಬಂದು ಕೂಡಲೇ ತನ್ನ ಆಯುಷ್ಯದ ಅರ್ಧವನ್ನು ಈ ಕವಿವರನಿಗೆ ನೀಡಿದೆನೆಂದು ನೀರುಬಿಟ್ಟನು. ತತ್‌ಕ್ಷಣವೇ ಕಾಳಿದಾಸನು ನಿದ್ದೆಯಿಂದ ಎಚ್ಚರಾದಂತೆ ಎದ್ದು ಕುಳಿತನು.

ಕಾಳಿದಾಸನ ಪುನರ್ಜೀವವಾಯಿತು ಆದರೂ ಅವನು ಪೂರಾ ಶುದ್ಧಿಯಲ್ಲಿ ಇದ್ದಿರಲಿಲ್ಲ. ಈ ಸಮಯವನ್ನೇ ನೋಡಿ ಭೋಜರಾಜನು ತನ್ನ ಬಯಕೆಯಂತೆ ಅವನಿಂದ ಚರಮ ಶ್ಲೋಕ ನುಡಿಸಿಕೊಳ್ಳಲು ಆತುರಗೊಂಡನು.

ಕಾಳಿದಾಸನು ಭೋಜರಾಜನ ತೊಡೆಯ ಮೇಲಿರುವಾಗಲೇ ಪೂರ್ಣ ಸ್ಮೃತಿಗೆ ಬಂದು– ನಾನು ಯಾರ ತೊಡೆಯ ಮೇಲಿರುವೆನು? ಎಂದು ಕೇಳಲು ಭೋಜರಾಜನು—

"ನಾನೊಬ್ಬ ಪರ ನಾಡಿನ ಪ್ರವಾಸಿಯು ಧಾರಾನಗರವು ನನ್ನ ಸ್ವಗ್ರಾಮವಾಗಿದೆ ಎಂದನು. ಆಗ ಕಾಳಿದಾಸನು—

ಆರ್ಯ ನೀನು ಧಾರಾನಗರ ನಿವಾಸಿಯಾಗಿದ್ದರೆ ನನ್ನ ಭೋಜರಾಜನು ಕ್ಷೇಮದಿಂದ ಇರುವನೇ? ಎಂದು ಕೇಳಲು ರಾಜನು—

ಕವಿವರ! ಆ ಭೋಜರಾಜನು ಮೃತನಾಗಿ ಬಹು ದಿನ ಕಳೆದವು ಎಂದು ಹೇಳಿದ್ದನ್ನು ಕೇಳಿ ಕಾಳಿದಾಸನು ಪೂರ್ಣ ಎಚ್ಚರಾಗಿ ಸಂತಾಪದಿಂದ

ಅಧ್ಯಧಾರಾ ನಿರಾಧಾರಾ ನಿರಾಲಂಬ ಸರಸ್ವತೀ
ಪಂಡಿತಾ ಖಂಡತ್ಸರ್ವೇ ಭೋಜರಾಜೇ ದಿವಂಗತೇ

ಎಂದು ಉಚ್ಚರಿಸಿದನು. ಈ ಚರಮ ಶ್ಲೋಕವನ್ನು ಕೇಳಿದ ಕೂಡಲೇ ಭೋಜರಾಜನು ಪ್ರಾಣಗತಿಸಿ ಬಿದ್ದನು ಎಲ್ಲರೂ ಹಾಹಾಕಾರ ನಡೆಯಿಸಿದರು. ಅಷ್ಟರಲ್ಲಿ ಕಾಳಿದಾಸನು ತಾನು ನುಡಿದ ಚರಮ ಶ್ಲೋಕದಿಂದ ವ್ಯಥೆಪಟ್ಟನು. ಆಗಲೇ ದೇವಿಯನ್ನು ಸ್ಮರಿಸಿ ಆ ಶ್ಲೋಕದ ಕೆಲ ಭಾಗಗಳನ್ನು ಬದಲಿಸಿ—

ಅಧ್ಯಧಾರಾ ಸದಾಧಾರಾ ಸದಾಲಂಬಾ ಸರಸ್ವತೀ ।
ಪಂಡಿತಾ ಮಂಡಿತಸ್ಸರ್ವೇ ಭೋಜರಾಜೇ ಭುವಿಂಗತೇ ॥

ಎಂದು ಉಚ್ಚರಿಸಿದ ಕೂಡಲೇ ಭೋಜರಾಜನು ಸಜೀವಗೊಂಡು ಎದ್ದು ಕಾಳಿದಾಸನನ್ನು ಬಿಗಿಯಾಗಿ ಅಪ್ಪಿಕೊಂಡು— ಕಾಳಿದಾಸ! ನಿನ್ನ ಮುಖದಿಂದ ನನ್ನ ಚರಮ ಶ್ಲೋಕ ಹೇಳಿಸಿಕೊಂಡೆನು. ಎಂದೆನ್ನಲು ಕಾಳಿದಾಸನು— ಭೋಜರೇ ನಿಮ್ಮಿಂದ ದೂರಾಗಿದ್ದ ನಾನು ನಿಮ್ಮ ತೊಡೆಯ ಮೇಲೆ ಪುನರ್ಜೀವ ಪಡೆದನು ಎಂದನು.

ಬಳಿಕ ಎಲ್ಲರೂ ಕೂಡಿಕೊಂಡು ಭೋಜರಾಜನ ಮಂದಿರದಡಿಯ ಡಿಂಡಿಮನು ತನ್ನ ಸಮಸ್ಯೆಗಾಗಿ ಈ ಕವಿ ಕಾಳಿದಾಸ ೦ ಮೃತನಾಗಿ ಸಜೀವಗೊಂಡುದನ್ನು ಸ್ಮರಿಸಿ ಕವಿವರನನ್ನು ಆಲಂಗಿಸಿದನು.

ನನಗೆ ಯಾವದೇ ಬಗೆಯಿಂದ ಆಶ್ರಯಕೊಟ್ಟ ಹಾಗೂ ತನ್ನ ಶ್ಲೋಕದಿಂದ ತನ್ನನ್ನು ಭೋಜರಾಜನೊಡನೆ ಪುನರ್ಮಿಲನ ಮಾಡುವದಕ್ಕೆ ಕಾರಣಳಾದ ವೇಶ್ಯೆಯ ಉಚ್ಚ ನೀಚತ್ವಗಳನ್ನೆಣಿಸದೇ ಮರ್‍ಯಾದಿಸಬೇಕೆಂದೂ ಜೀವ ಹಿಂಸೆಯ ಅಪರಾಧದಿಂದ ಅವಳನ್ನು ಮುಕ್ತಳನ್ನಾಗಿ ಮಾಡಬೇಕೆಂದೂ ಕವಿಶ್ರೇಷ್ಠ ಕಾಳಿದಾಸನು ಭೋಜರಾಜನಲ್ಲಿ ತನ್ನ ಪ್ರಾರ್ಥನೆಯನ್ನು ಸಲ್ಲಿಸಿದನು

ಭೋಜರಾಜನು ಕಾಳಿದಾಸನ ಇಚ್ಛೆಯನ್ನು ಇನ್ನೊಂದು ಆಲೋಚನೆಯಿಲ್ಲದೇ ಪೂರ್ಣ ಮಾಡಿದನು.

—೦೦—

— ನಮ್ಮ ಪ್ರಕಾಶನದ ಮಾನ್ಯ ಗ್ರಂಥಗಳು —

ಮಹದ್ದೇವ ಮಹಾವಿಭೂತಿ ಮಹಿಮಾಸ್ಪದ

# ಶ್ರೀ ಗುರು ಚರಿತ್ರೆ ಗ್ರಂಥ

ಶ್ರೀ ದತ್ತಾತ್ರೆಯರ ಮೂರು ಲೀಲಾವತಾರಗಳ ಸಂಗತಿಗಳನ್ನು ೫೩ ಅಧ್ಯಾಯಗಳಿಂದ ವ್ಯಕ್ತಗೊಳಿಸಿದ ಪಾವನ ಗ್ರಂಥವಿದು, ಸಪ್ತಾಹ ಪಾರಾಯಣ ನಿತ್ಯ ಪಾರಾಯಣಗಳಿಂದ ಮನೋಭಿಷ್ಟತೆಯನ್ನು ಸಫಲಗೊಳಿಸುವ ಈ ಗ್ರಂಥವು ಅನನ್ಯವಾಗಿದೆ

ಸವಿಗನ್ನಡದ ಸರಳ ನುಡಿಗಳಲ್ಲಿ ಬರೆದ ೩೪೦ ಪುಟದ ಈ ಗ್ರಂಥದ ಮುಖಾವರಣವೆಂದು ಶ್ರೀ ದತ್ತಾತ್ರೆಯ ಗುರುವರರ ತ್ರಿವರ್ಣರಂಜಿತ ಚಿತ್ರವನ್ನು ಚಿತ್ರಿಸಲಾಗಿದೆ.

ಬೆಲೆ— ಎಂಟು ರೂಪಾಯಿ ಅಂಚೆ ವೆಚ್ಚ — ೨_೦೦ ರೂಪಾಯಿ

---

ಉದ್ಗ್ರಲಿತಬೋಧಕ ಉತ್ಕೃಷ್ಟ ಉನ್ನತಾದರ್ಶ

# ಶ್ರೀ ದಾಸ ಬೋಧೆ

ಶ್ರೀ ಸಮರ್ಥ ರಾಮದಾಸ ಸ್ವಾಮಿಗಳ ಭೋಧ ಮುಕ್ತಾಫಲಗಳ ಮಾಲೆಗಳನ್ನು ಇನ್ನೂರು ಸಮಾಸಗಳಲ್ಲಿ ರೂಪಿಸಿ ಇಪ್ಪತ್ತು ದಶಕಗಳಿಂದ ಸಮವಾಗಿಸಿದೆ.

ಈ ಗ್ರಂಥನ್ನಾದರೂ ಶ್ರೀ ಗುರು ಚರಿತ್ರೆಯಂತೆ ತಿರುಳ್ಗನ್ನಡದ ತಿಳಿಯಾದ ನುಡಿಗಳಿಂದ ಕನ್ನಡಿಗರ ಹೃದಯಕ್ಕೆ ಅವಗಾಹನೆಯಾಗುವಂತೆ ೨೯೦ ಪುಟಗಳಲ್ಲಿ ರೂಪುಗೊಳಿಸಲಾಗಿದೆ. ಗ್ರಂಥದ ಮುಖಾವರಣವೆಂದೂ ಭಾವಿಕರ ಹೃತ್ಪಟಲದ ಮೇಲೆ ಬಿಂಬಿಸುವದಕ್ಕೆಂದೂ ಶ್ರೀ ಸಮರ್ಥರ ನೈಜ್ಯ ಚಿತ್ರವನ್ನು ತ್ರಿವರ್ಣರಂಜಿತ...

ಅಂಚೆ ವೆಚ್ಚ: ೨_೦೦ ರೂಪಾಯಿ

... ಎಂ. ಕರಡಿ.

... ಸ್ಟೇಶನ್ ರೋಡ, ಹುಬ್ಬಳ್ಳಿ.



# — ನಮ್ಮ ಪ್ರಕಟನೆಗಳು —

ಸಂಗೀತ ನಾಟಕಗಳು

ರಕ್ತ ಮಾಂಗಲ್ಯ ೩-೦೦
(N.S. ಜೋಶಿ ಕೃತ)
ಹುಚ್ಚು ಬಿಡಿಸಿದ ಹೆಣ್ಣು ,, ೩-೦೦
ಸೋತು ಗೆದ್ದ ಸಾಧ್ವಿ ,, ೩-೦೦
ಬಂಜೆ ತೊಟ್ಟಿಲು ,, ೩-೦೦
ಬಸ್ ಹಮಾಲ ೩-೦೦
ಕಾರಸಾಳ ಕೃತ
ಕಲಿಯುಗದ ಕನ್ಯೆ ೩-೦೦
ಅಲ್ದಾಳ ಕೃತ
ಖಾದಿ ಸೀರೆ ೩-೦೦
ಮುಂಜಿ ಮಗಾ ೩-೦೦
ಗಂಡನ ಆಜ್ಞೆ ಲಿಂಗರಾಜ ಕೃತ ೩-೦೦
ಪೂರ್ಣಿಮಾ ,, ೩-೦೦
ದೇವರಿಗೆನೆನಪಿಲ್ಲ ಸಾಳುಂಕೆಕೃತ೩-೦೦
ಬದುಕು ಬಂಗಾರವಾಯಿತು ೩-೦೦
ಮಹಾಂತೇಶ ಶಾಸ್ತ್ರಿ ಕೃತ
ಇದೆಂಥ ಸರಕಾರ ೩-೦೦
ಇವನೆಂಥ ಗಂಡ ,, ೩-೦೦
ಮಾನವತಿ ೩-೦೦
ಪ್ರಜಾ ಸರಕಾರ ೩-೦೦
ಒಂದೇ ರಕ್ತ ೩-೦೦
ಹೆಣ್ಣಿನ ಜೀವನ ೩-೦೦
ಕಲಿತ ಕತ್ತಿ ೩-೦೦
ಸೊಕ್ಕಿನ ಸೊಸೆ ೩-೦೦
(H. Y. ಹೂಗಾರ ಕೃತ)
ಸುಖದ ಸುಪ್ಪತ್ತಿಗೆ ೩-೦೦
(ಧುತ್ತರಗಿ ಕೃತ)
...ನೆ ಎರಡು ಮನೆಒಂದು,, ೩-೦೦

ಪಂಚಾಯತಿ ರಾಜ್ಯ ,,
ಸರ್ವಮಂಗಳಾ
ಮಾರುತೇಶ ಮಾ...
ನಾರೀಮಣಿ ,,
ಚರಣದಾಸಿ ,,
ಶ್ರೀ ಕಲಬುರ್ಗಿ
ಶರಣ ಬಸವೇಶ್ವರ ,,
ಲವ್ ಇನ್ ಹುಬ್ಬಳ್ಳಿ ,,
ಗಾಂಧಿ ಟೋಪಿ ,,
ಅನುರಾಧ
ಶೀಲವತಿ(ಇನಾಮದಾರ ...
ಭೂದಾನ ,,
ಮಂಗಳೂರ ಟೂ ಬೆಂಗ...
ಧೂಳ ಮುಸುಕಿದ ಹೂ
ನಮ್ಮದು ಕಾಶ್ಮೀರ ,,
ಶ್ರೀ ಸತ್ಯನಾರಾಯಣ ವ್ರತ
ಗಂಡನ ಮಾನ
ಶ್ರೀ ರಾಮ ಪಾದುಕಾ ...
(ಗರುಡ ಸದಾಶಿವರಾಯ ...
ಹೋಳಿ ಹುಣ್ಣಿವೆ
ಎತ್ತಿದ ಕೈ
ದೇವರ ಮಗಳು
ಕಂಗಿಲು ಕಾಳಿ
ಹಣ್ಣು ಮಾರುವ ಹೆಣ್ಣು
ಜವಳಿ ಚಂದ್ರ
ಪಣಕ್ಕಿಟ್ಟ ಪ್ರಮಾಣ
ಇವಳೆಂಥ ಸೊಸೆ
(H. R. ಭಸ್ಮೆ ಕೃತ)
ಬಂದರೆ ನೋಡೋ ಮಾ...
ಲಾಟ್ರಿ ಒಂತನ್ನೋ ಲಾಟ್ರಿ

ಎಮ್. ಕರಡಿ, ಬುಕ್‌ಸೇಲರ್ಸ, ...